KA / BG - GPO/ 2515 /WPP-47/ 2009 - 2011


# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೨೭, ೨೦೦೯ (ಶ್ರಾವಣ ೫, ಶಕ ವರ್ಷ ೧೯೩೧) | ನಂ. ೫೮೬ |
|---|---|---|


**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂ. ಆಇ 712 ವೆಚ್ಚ–12/ 2009, ಬೆಂಗಳೂರು, ದಿನಾಂಕ : 8ನೇ ಜೂನ್, 2009**

ಕರ್ನಾಟಕ ಗ್ರಂಥಾಲಯ ಉಪ ಸಮಿತಿಯು ಪ್ರತಿಭಾವಂತ ಸಂಸದೀಯ ಪಟುಗಳ ಬದುಕು–ಬರಹ ಮಾಲಿಕೆಯಡಿಯಲ್ಲಿ ರಾಜ್ಯದ ಪ್ರತಿಭಾವಂತರ ಪುಸ್ತಕಗಳನ್ನು ಹೊರತರುತ್ತಿದ್ದು, ಪುಸ್ತಕಗಳ ರಚನಾ ಕಾರ್ಯವನ್ನು ಹಲವಾರು ಪ್ರತಿಭಾನ್ವಿತರಿಗೆ ವಹಿಸಿದ್ದು, ಸಿದ್ದಪಡಿಸಿದ ಹಸ್ತ ಪ್ರತಿಗಳ ಕರಡನ್ನು ಪರಿಶೀಲಿಸಿ, Edit ಮತ್ತು proof reading ಮಾಡುವ ಸಲುವಾಗಿ ವಿಧಾನ ಮಂಡಲದ ಗ್ರಂಥಾಲಯ ಉಪ ಸಮಿತಿಯ ಸಂಪಾದಕರಾಗಿ ಸಮಾಲೋಚನೆ ಆಧಾರದ ಮೇಲೆ ಡಾ: ಎಂ.ಸಿ. ಮಲ್ಲಿಕಾರ್ಜುನರವರನ್ನು ಮಾಸಿಕ ರೂ. 15,000/– ಸಂಚಿತ ಸಂಭಾವನೆಯ ಮೇಲೆ ಒಂದು ವರ್ಷದ ಅವಧಿಗೆ ರೂ. 1,80,000/–ಗಳ ವೆಚ್ಚದಲ್ಲಿ ನೇಮಿಸಿಕೊಂಡು, ಸೇವಾ ಸಂಗ್ರಹಣೆಗಳನ್ನು ಮಾಡಿಕೊಳ್ಳಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಸರ್ಕಾರವು ಕರ್ನಾಟಕ ವಿಧಾನ ಸಭೆ ಸಚಿವಾಲಯಕ್ಕೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಚಂದ್ರಕುಮಾರ್**

ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

## ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೨೭, ೨೦೦೯ (ಶ್ರಾವಣ ೫, ಶಕ ವರ್ಷ ೧೯೩೧) | ನಂ. ೫೮೭ |
|---|---|---|

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂ. ಆಇ 623 ವೆಚ್ಚ–12/ 2009, ಬೆಂಗಳೂರು, ದಿನಾಂಕ : 8ನೇ ಜೂನ್, 2009**

ವಿಧಾನ ಸಭಾ ಸಚಿವಾಲಯದ ಶಾಸಕರ ಭವನಗಳಲ್ಲಿ ಮಾನ್ಯ ಶಾಸಕರ ಉಪಯೋಗಕ್ಕಾಗಿ 150 ಹೊಸ ಸೋಫಾ ಸೆಟ್‌ಗಳನ್ನು ರೂ. 82,47,600.00 ಗಳ ವೆಚ್ಚದಲ್ಲಿ ನೇರವಾಗಿ ರಾಜ್ಯ ಸರ್ಕಾರದ ಉದ್ದಿಮೆಯಾದ ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕೆ ನಿಗಮ ನಿಯಮಿತ (ಕೆ.ಎಸ್.ಎಫ್.ಐ.ಸಿ.ಲಿ.) ರವರಿಂದ ಖರೀದಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಸರ್ಕಾರವು ಕರ್ನಾಟಕ ವಿಧಾನ ಸಭೆ ಸಚಿವಾಲಯಕ್ಕೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಚಂದ್ರಕುಮಾರ್**

ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೨೭, ೨೦೦೯ (ಶ್ರಾವಣ ೫, ಶಕ ವರ್ಷ ೧೯೩೧) | ನಂ. ೫೮೮ |
|---|---|---|

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂ. ಆಇ 621 ವೆಚ್ಚ–12/ 09, ಬೆಂಗಳೂರು, ದಿನಾಂಕ : 12ನೇ ಜೂನ್, 2009**

ಬಳ್ಳಾರಿ ಮತ್ತು ಹೊಸಪೇಟೆ ತಾಲ್ಲೂಕುಗಳ ಸಾಮಾಜಿಕ ಭದ್ರತಾ ಯೋಜನೆಗೊಳಪಟ್ಟ ಫಲಾನುಭವಿಗಳ ವಿವರ ಸಂಗ್ರಹಣೆ, ಮಾಹಿತಿ ಕ್ರೋಢೀಕರಣ ಮತ್ತು ಗಣಕೀಕರಣ ಕಾರ್ಯವನ್ನು ರೂ. 9,80,490.00 ಗಳ ವೆಚ್ಚದಲ್ಲಿ M/s. Institute for Social and Economic Change (ISEC) ಸಂಸ್ಥೆಗೆ ನೇರವಾಗಿ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಸರ್ಕಾರವು ಕಂದಾಯ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಚಂದ್ರಕುಮಾರ್**

ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ವಿಶೇಷ ಪತ್ರಿಕೆ**

| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೨೭, ೨೦೦೯ (ಶ್ರಾವಣ ೫, ಶಕ ವರ್ಷ ೧೯೩೧) | ನಂ. ೫೮೯ |
|---|---|---|

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂ. ಆಇ 624 ವೆಚ್ಚ–12/ 09, ಬೆಂಗಳೂರು, ದಿನಾಂಕ : 12ನೇ ಜೂನ್, 2009**

ಪೊಲೀಸ್ ಇಲಾಖೆಯ ಭದ್ರತೆ ಪಡೆಯ ಉನ್ನತ ಮಟ್ಟದ ಅಧಿಕಾರಿಗಳ ಉಪಯೋಗಕ್ಕಾಗಿ 2 ಅಂಬಾಸಿಡರ್ ಕಾರುಗಳಿಗೆ ಗುಂಡು ನಿರೋಧಕ ಕಾರ್ಯವನ್ನು ರೂ. 31,20.000/– ಗಳ ವೆಚ್ಚದಲ್ಲಿ ಮೆ: ಹಿಂದೂಸ್ತಾನ್ ಮೋಟಾರ್ಸ್ ಫೈನಾನ್ಸ್ ಕಾರ್ಪೋರೇಷನ್ ಲಿಮಿಟೆಡ್, ನವದೆಹಲಿ ಸಂಸ್ಥೆರವರಿಗೆ ನೇರವಾಗಿ ವಹಿಸಲು ಮತ್ತು ಮೆ: ಟಾಟಾ ಮೋಟಾರ್ಸ್, ಮುಂಬಯಿ, ಸಂಸ್ಥೆಯಿಂದ ಖರೀದಿಸಲಾದ 07 ಸಂಖ್ಯೆಯ ಟಾಟಾ ಮಾದರಿ ಎಲ್‌ಪಿ 112/42 ಬಿಎಸ್ 3 ಚಾಸಿಗಳ ಬಾಡಿಗಳನ್ನು ರೂ. 37,67,778.00 ಗಳ ವೆಚ್ಚದಲ್ಲಿ ನಿರ್ಮಾಣ ಮಾಡಲು ನೇರವಾಗಿ ಮೆ: ಕೆ.ಎಸ್.ಆರ್.ಟಿ.ಸಿ. ಸಂಸ್ಥೆಗೆ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಸರ್ಕಾರವು ಒಳಾಡಳಿತ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಚಂದ್ರಕುಮಾರ್**

ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೨೭, ೨೦೦೯ (ಶ್ರಾವಣ ೫, ಶಕ ವರ್ಷ ೧೯೩೧) | ನಂ. ೫೯೦ |
|---|---|---|

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂ. ಆಇ 625 ವೆಚ್ಚ–12/ 09, ಬೆಂಗಳೂರು, ದಿನಾಂಕ : 12ನೇ ಜೂನ್, 2009**

ಕರ್ನಾಟಕ ಪೌರ ಸಭೆಗಳ ಲೆಕ್ಕಪತ್ರ ಮತ್ತು ಬಜೆಟ್ ನಿಯಮಗಳು–2006 ರ ಅಡಿಯಲ್ಲಿ ""ಕರ್ನಾಟಕ ಮುನಿಸಿಪಲ್ ಆಡಿಟ್ ಮ್ಯಾನ್ಯುಯಲ್'' ತಯಾರಿಸುವುದಕ್ಕೆ ""ಕರ್ನಾಟಕ ಇನ್ಸ್‌ಟಿಟ್ಯೂಟ್ ಆಫ್ ಪಬ್ಲಿಕ್ ಆಡಿಟರ್ಸ್ '' (KIPA) ಬೆಂಗಳೂರು, ಸಂಸ್ಥೆಯು ಸೇವಾ ಸಂಗ್ರಹಣೆಯನ್ನು ನೇರವಾಗಿ ರೂ. 3.30 ಲಕ್ಷದ ವೆಚ್ಚದಲ್ಲಿ ಪಡೆಯಲು ಕರ್ನಾಟಕ ಸಾರ್ವಜನಿಕ

ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಸರ್ಕಾರವು ನಗರಾಭಿವೃದ್ಧಿ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಚಂದ್ರಕುಮಾರ್**
ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೨೭, ೨೦೦೯ (ಶ್ರಾವಣ ೫, ಶಕ ವರ್ಷ ೧೯೩೧) | ನಂ. ೫೯೧ |
|---|---|---|

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂ. ಆಇ 710 ವೆಚ್ಚ–12/ 09, ಬೆಂಗಳೂರು, ದಿನಾಂಕ : 19ನೇ ಜೂನ್, 2009**

ಮೆ: ಮೈಸೂರು ಎಲೆಕ್ಟ್ರಿಕಲ್ ಇಂಡಸ್ಟ್ರೀಸ್ (ಎಂ.ಇ.ಐ.) ಸಂಸ್ಥೆಯು ಉತ್ಪಾದಿಸುವ ಸ್ವಿಚ್‌ಗೇರ್‌ಗಳನ್ನು KPTCL ಮತ್ತು ಎಲ್ಲಾ ESCOMS ಸಂಸ್ಥೆಗಳು ಮಾರುಕಟ್ಟೆ ದರದಲ್ಲಿನ ಅತಿ ಕಡಿಮೆ ದರಕ್ಕೆ ಸದರಿ ಎಂ.ಇ.ಐ. ಸಂಸ್ಥೆಯೊಡನೆ ಸಂಧಾನ ವೇರ್ಪಡಿಸುವ ಷರತ್ತಿಗೊಳಪಟ್ಟು, ಮೆ: ಎಂ.ಇ.ಐ. ಸಂಸ್ಥೆಯಿಂದ ನೇರವಾಗಿ ಖರೀದಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಸರ್ಕಾರವು ಇಂಧನ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ಒಂದು ವರ್ಷದ ಅವಧಿಗೆ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಚಂದ್ರಕುಮಾರ್**
ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೨೭, ೨೦೦೯ (ಶ್ರಾವಣ ೫, ಶಕ ವರ್ಷ ೧೯೩೧) | ನಂ. ೫೯೨ |
|---|---|---|

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂ. ಆಇ 720 ವೆಚ್ಚ–12/ 09, ಬೆಂಗಳೂರು, ದಿನಾಂಕ : 20ನೇ ಜೂನ್, 2009**

ಟ್ರಾನ್ಸ್‌ಫಾರ್ಮರ್ಸ್ (Transformers) ಹಾಗೂ ಮತ್ತಿತರ ಸೇವೆಗಳ ದರವನ್ನು ತಜ್ಞ ಸಮಿತಿಯು ನಿರ್ಧರಿಸುವ ಷರತ್ತಿಗೊಳಪಟ್ಟು ಎಲ್ಲಾ ESCOMS ಗಳು ಟ್ರಾನ್ಸ್‌ಫಾರ್ಮರ್ಸ್ (Transformers) ಹಾಗೂ ಮತ್ತಿತರ ಸೇವೆಗಳನ್ನು ಕರ್ನಾಟಕ ವಿದ್ಯುತ್ ಕಾರ್ಖಾನೆ (ಕವಿಕಾ) ಯಿಂದ ನೇರವಾಗಿ ಸಂಗ್ರಹಣೆ ಮಾಡಿಕೊಳ್ಳಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಇಂಧನ ಇಲಾಖೆಗೆ ಒಂದು ವರ್ಷದ ಅವಧಿಗೆ ಮಾತ್ರ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಚಂದ್ರಕುಮಾರ್**
ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೨೭, ೨೦೦೯ (ಶ್ರಾವಣ ೫, ಶಕ ವರ್ಷ ೧೯೩೧) | ನಂ. ೫೯೩ |
|---|---|---|

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂ. ಆಇ 609 ವೆಚ್ಚ–12/ 09, ಬೆಂಗಳೂರು, ದಿನಾಂಕ : 23ನೇ ಜೂನ್, 2009**

ಸರ್ಕಾರದ ವಿವಿಧ ಇಲಾಖೆಯ ಕಾಮಗಾರಿಗಳನ್ನು ಕೈಗೊಳ್ಳುವ ಸಂದರ್ಭದಲ್ಲಿ ಪರಿಸರ ಪ್ರೇಮಿ (Environment friendly) ಅಥವಾ ಕ್ರಯಾ ಪರಿಣಾಮಕಾರಿ ತಂತ್ರಜ್ಞಾನ (Low cost building technology) ಅಥವಾ ನವೀನ ಕಟ್ಟಡ

ನಿರ್ಮಾಣ ಸಾಮಗ್ರಿಗಳು (Innovative building materials) ಅಥವಾ ಮೊದಲೇ ಅಚ್ಚುಹಾಕಿದ ತಂತ್ರಜ್ಞಾನ (Pre-cast technology) ಇವುಗಳಲ್ಲಿ ಅಳವಡಿಸಲು ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಕರ್ನಾಟಕ ರಾಜ್ಯ ನಿರ್ಮಾಣ ಕೇಂದ್ರದ (KARNIK) ಅನುಮೋದನೆಯನ್ನು ಪಡೆದು ನೇರವಾಗಿ ನಿರ್ಮಿತ ಕೇಂದ್ರಕ್ಕೆ ಅಥವಾ KARNIK ಸಂಸ್ಥೆಗೆ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು 2009–10ನೇ ಸಾಲಿಗೆ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಚಂದ್ರಕುಮಾರ್**
ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೨೭, ೨೦೦೯ (ಶ್ರಾವಣ ೫, ಶಕ ವರ್ಷ ೧೯೩೧) | ನಂ. ೫೯೪ |
|---|---|---|

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂ. ಆಇ 853 ವೆಚ್ಚ–12/ 09, ಬೆಂಗಳೂರು, ದಿನಾಂಕ : 25ನೇ ಜೂನ್, 2009**

ಗ್ರಾಮ ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳ ನೇರ ನೇಮಕಾತಿ ಮಾಡುವುದಕ್ಕೆ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ (ಐ.ಐ.ಎಂ.) ಬೆಂಗಳೂರು ಮತ್ತು ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ (ಐ.ಐ.ಎಸ್ಸಿ.), ಬೆಂಗಳೂರು, ಸಂಸ್ಥೆಯಿಂದ ಸೇವೆಯನ್ನು ನೇರವಾಗಿ ಪಡೆಯಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಚಂದ್ರಕುಮಾರ್**
ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೨೭, ೨೦೦೯ (ಶ್ರಾವಣ ೫, ಶಕ ವರ್ಷ ೧೯೩೧) | ನಂ. ೫೯೫ |
|---|---|---|

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂ. ಆಇ 834 ವೆಚ್ಚ–12/ 09, ಬೆಂಗಳೂರು, ದಿನಾಂಕ : 27ನೇ ಜೂನ್, 2009**

ಅಬಕಾರಿ ಇಲಾಖೆಯ ಮದ್ಯದ ಬಾಟಲಿಗಳ ಮೇಲೆ ಅಂಟಿಸುವ ಭದ್ರತಾ ಚೀಟಿಗಳಲ್ಲಿ ಸುಧಾರಿತ ವಿನ್ಯಾಸ ಅಳವಡಿಸಿಕೊಂಡು, ಸುರಕ್ಷತೆ ಇತ್ಯಾದಿ ಅಂಶಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಅಬಕಾರಿ ಭದ್ರತಾ ಚೀಟಿಗಳನ್ನು ಮುದ್ರಿಸಿ ಸರಬರಾಜು ಮಾಡುವ ಕಾರ್ಯವನ್ನು ನೇರವಾಗಿ ಸರ್ಕಾರದ ಸ್ವಾಮ್ಯ ಸಂಸ್ಥೆಯಾದ M/s. Marketing Consultancey Agency (MCA) ಸಂಸ್ಥೆಗೆ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಅಬಕಾರಿ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ಒಂದು ವರ್ಷಕ್ಕೆ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಚಂದ್ರಕುಮಾರ್**
ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೨೭, ೨೦೦೯ (ಶ್ರಾವಣ ೫, ಶಕ ವರ್ಷ ೧೯೩೧) | ನಂ. ೫೯೬ |
|---|---|---|

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂ. ಆಇ 709 ವೆಚ್ಚ–12/ 09, ಬೆಂಗಳೂರು, ದಿನಾಂಕ : 27ನೇ ಜೂನ್, 2009**

ಬೆಂಗಳೂರು ಕೇಂದ್ರ ಕಾರಾಗೃಹದ ಬಂದಿಗಳಿಗೆ 2009–10ನೇ ಸಾಲಿಗೆ "ಅಕ್ಷಯ ಪಾತ್ರೆ ಫೌಂಡೇಶನ್ ಸಂಸ್ಥೆಯಿಂದ ಸವಿಯೂಟ ಸರಬರಾಜು ಮಾಡುವ ಕಾರ್ಯವನ್ನು ಆಡಳಿತ ಇಲಾಖೆಯು ಸದರಿ ಸಂಸ್ಥೆಯೊಡನೆ ಪುನಃ ಚರ್ಚಿಸಿ ದರವನ್ನು ನಿರ್ಧರಿಸುವ ಷರತ್ತಿಗೆ ಒಳಪಟ್ಟು ನೇರವಾಗಿ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ರ ಕಲಂ' 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಒಳಾಡಳಿತ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಚಂದ್ರಕುಮಾರ್**
ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೨೭, ೨೦೦೯ (ಶ್ರಾವಣ ೫, ಶಕ ವರ್ಷ ೧೯೩೧) | ನಂ. ೫೯೭ |
|---|---|---|

**LAW, JUSTICE AND HUMAN RIGHTS SECRETARIAT**

**NOTIFICATION**

**No. Law 17 LAD 2008, Bangalore, Dated : 18th May, 2009**

In exercise of the powers conferred by Section 28 of the Legal Services Authorities Act, 1987 (Central Act 39 of 1987) and in consultation with the Chief Justice of the High Court of Karnataka, the Government of Karnataka hereby makes the following rules to amend the Karnataka State Legal Services Authorities Rules, 1996 namely

**1. Title and Commencement :** (1) These rules may be called the Karnataka State Legal Services Authorities (Amendment) Rules, 2009.

(2) They shall come into force from the date of their publication in the Official Gazette.

**2. Amendment to Schedule-I :** In the Karnataka State Legal Services Authorities Rules, 1996, in Schedule – 1 under the heading "TALUK LEGAL SERVICE COMMITTEE"

(a) in the entries relating to the category of post of Typist-cum-Clerk, in column (5), for the letters, figures and words "Rs. 700/- per month" the words "rupees two thousand per month" shall be substituted; and

(b) in the entries relating to the category of posts of Dalayat/Peon in column (5), for the letters, figures and words "Rs.300/- per month" the words "rupees one thousand and two hundred per month" shall be substituted.

By order and in the name of the Governor of Karnataka,

**SHAKUNTHALA H.R.**
Under Secretary to Government (Admin-2)
Law, Justice and Human
Rights Department

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೨೭, ೨೦೦೯ (ಶ್ರಾವಣ ೫, ಶಕ ವರ್ಷ ೧೯೩೧) | ನಂ. ೫೯೮ |
|---|---|---|

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂ. ಸಿಆಸುಇ 20 ವಿಮಾಆ 2009, ಬೆಂಗಳೂರು, ದಿನಾಂಕ : 18ನೇ ಜೂನ್, 2009**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 ರ ಕಲಂ 18–ಎರ ಉಪಕಲಂ (2)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 1ನೇ ಜುಲೈ 2009ರ ದಿನಾಂಕವನ್ನು ಈ ಮೂಲಕ ಅಧಿಸೂಚಿಸಿದ್ದು, ಆ ದಿನಾಂಕದಿಂದ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ (ಕೆಯುಡಬ್ಲ್ಯೂ ಎಸ್‌ಡಿಬಿ) ಇದರ ರೂ. 10.00 ಲಕ್ಷ ಮತ್ತು ಅದಕ್ಕೂ ಮೇಲ್ಪಟ್ಟ ಎಲ್ಲಾ ಸಂಗ್ರಹಣೆಗಳನ್ನು ವಿದ್ಯುನ್ಮಾನ ಸಂಗ್ರಹಣೆ ವೇದಿಕೆ ಮೂಲಕ (through e-Procurement platform) ಸಂಗ್ರಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ್**
ಪೀಠಾಧಿಕಾರಿ–1,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ)

**PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 20 EGV 2009, Bangalore, Dated : 18th June, 2009**

In exercise of the powers conferred by sub-section (2) of section 18A of the Karnataka Transparency in Public Procurements Act, 1999, (Karnataka Act 29 of 2000) the Government of Karnataka hereby notifies, the First day of July, 2009 to be the day from which Karnataka Urban Water Supply and Drainage Board (KUWSDB) shall procure its all procurements valued at Rs. 10.00 lakhs and above through e-Procurement platform.

By order and in the name of the Governor of Karnataka,

**Chandrashekhar**
Desk Officer – 1
Department of Personnel and Administrative
Reforms (e-Governance)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೨೭, ೨೦೦೯ (ಶ್ರಾವಣ ೫, ಶಕ ವರ್ಷ ೧೯೩೧) | ನಂ. ೫೯೯ |
|---|---|---|

**PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 65 GAM 2009, Bangalore, Dated : 19th June, 2009**

Sri. Baikere Nagesh, Lodhi Colony, New Delhi, is appointed as 'Additional Special Representative of Karnataka State at New Delhi with immediate effect and until further orders.

By order and in the name of the Governor of Karnataka,

**S. THIPPESWAMY**
Under Secretary to Government
Department of Personnel and
Administrative Reforms (State Protocol)

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಸೋಮವಾರ, ಜುಲೈ ೨೭, ೨೦೦೯ (ಶ್ರಾವಣ, ೫ ಶಕ ವರ್ಷ ೧೯೩೧) | ನಂ. ೬೦೦ |
|---|---|---|

## ಕರ್ನಾಟಕ ಸರ್ಕಾರದ ನಡವಳಿಗಳು

### ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** 2009–10ನೇ ಸಾಲಿನಲ್ಲಿ ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರಕ್ಕೆ ಹೆಚ್ಚುವರಿ ಅನುದಾನ ಮಂಜೂರು ಮಾಡುವ ಬಗ್ಗೆ

**ಓದಲಾಗಿದೆ :**

1. ಸರ್ಕಾರದ ಆದೇಶ ಸಂ. ವಿಯಇ 55 ವಿತ್ರಮ 2009, ದಿನಾಂಕ : 16.04.2009.
2. ಕೇಂದ್ರ ಸರ್ಕಾರದ ನಿರ್ದೇಶಕರು, ನ್ಯಾಷನಲ್ ಕೌನ್ಸಿಲ್ ಆಫ್ ಸೈನ್ಸ್ ಮ್ಯೂಸಿಯಂ, ಕೋಲ್ಕತ್ತ, ಇವರ ಪತ್ರ No.1-1101/65/48/ದಿನಾಂಕ : 31.03.2008.
3. ಸರ್ಕಾರದ ಆದೇಶ ಸಂ. ವಿಯಇ 42 ವಿತ್ರಮ 2007, ದಿನಾಂಕ : 19.12.2008.
4. ಸದಸ್ಯ–ಕಾರ್ಯದರ್ಶಿ, ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿ, ಮೂಡುಶೆಡ್ಡೆ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು. ಇವರ ಪತ್ರ ಸಂಖ್ಯೆ : ಪಿಎನ್.ಡಿ.ಸಿಆರ್:12/2007–08, ದಿನಾಂಕ : 29.05.2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1)ರ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು 2009–10ನೇ ಸಾಲಿನಲ್ಲಿ ಮುಂದುವರೆಸಲು ಯೋಜನಾ ಲೆಕ್ಕ ಶೀರ್ಷಿಕೆ 3425–60–200–0–16 (101) ರಡಿಯಲ್ಲಿ ಒಟ್ಟು ರೂ. 400.00 ಲಕ್ಷಗಳ ಅನುದಾನವನ್ನು ಕಲ್ಪಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ. (2) ರಲ್ಲಿ ಕೇಂದ್ರ ಸರ್ಕಾರದ ನಿರ್ದೇಶಕರು, ನ್ಯಾಷನಲ್ ಕೌನ್ಸಿಲ್ ಆಫ್ ಸೈನ್ಸ್ ಮ್ಯೂಸಿಯಂ, ಕೋಲ್ಕತ್ತ, ಇವರು ಪ್ರಾದೇಶಿಕ ವಿಜ್ಞಾನ ಕೇಂದ್ರಗಳನ್ನು ಸ್ಥಾಪಿಸಲು ನಿಗದಿಪಡಿಸಿದ್ದ ಮೊತ್ತವನ್ನು ರೂ. 650.00 ಲಕ್ಷಗಳಿಂದ ರೂ. 850.00 ಲಕ್ಷಗಳಿಗೆ ಹೆಚ್ಚಿಸಿರುವುದರಿಂದ, ರಾಜ್ಯದ ಪಾಲಿನ ಮೊತ್ತ ರೂ. 100.00 ಲಕ್ಷಗಳನ್ನು ಹೆಚ್ಚುವರಿಯಾಗಿ ಬಿಡುಗಡೆ ಮಾಡುವಂತೆ ಕೋರಿದ್ದ ಮೇರೆಗೆ ಮೇಲೆ ಓದಲಾದ ಕ್ರ.ಸಂ. (3) ರಲ್ಲಿನ ಆದೇಶದಲ್ಲಿ ಆರ್ಥಿಕ ಇಲಾಖೆಯ ಸೂಚನೆಯಂತೆ ಮೊದಲ ಕಂತಾಗಿ ರೂ. 50.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಕ್ರ. ಸಂ. (4) ರಲ್ಲಿನ ಪತ್ರದಲ್ಲಿ ಸದಸ್ಯ–ಕಾರ್ಯದರ್ಶಿ, ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು. ಇವರು ಕೇಂದ್ರ ಸರ್ಕಾರದ ಕೋರಿಕೆಯಂತೆ ಬಾಕಿ ಇರುವ ರೂ. 50.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಕೇಂದ್ರ ಸರ್ಕಾರದ ಕೋರಿಕೆಯಂತೆ ಉದ್ದೇಶಿತ ಕಾಮಗಾರಿಗಳಿಗೆ ರೂ. 100.00 ಲಕ್ಷಗಳ ಸಹಾಯಾನುದಾನವನ್ನು ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರಕ್ಕೆ ಬಿಡುಗಡೆ ಮಾಡುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ವಿಯಇ 42 ವಿತ್ರಮ 2007, ಬೆಂಗಳೂರು, ದಿನಾಂಕ : 15ನೇ ಜುಲೈ, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕೇಂದ್ರ ಸರ್ಕಾರದ ನಿರ್ದೇಶಕರು, ನ್ಯಾಷನಲ್ ಕೌನ್ಸಿಲ್ ಆಫ್ ಸೈನ್ಸ್ ಮ್ಯೂಸಿಯಂ, ಕೋಲ್ಕತ್ತ, ಇವರ ಕೋರಿಕೆಯ ಮೇರೆಗೆ ರಾಜ್ಯ ಸರ್ಕಾರದ ಪಾಲಿನ ಮೊತ್ತದ ರೂ. 100.00 ಲಕ್ಷಗಳಲ್ಲಿ ಬಾಕಿ ಉಳಿದ ರೂ. 50.00 ಲಕ್ಷ (ರೂ. ಐವತ್ತು ಲಕ್ಷಗಳು ಮಾತ್ರ) ಗಳನ್ನು ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು. ಇವರಿಗೆ ಈ ಕೆಳಕಂಡ ನಿಬಂಧನೆ ಮತ್ತು ಷರತ್ತುಗಳಿಗೊಳಪಟ್ಟು ಮಂಜೂರು ಮಾಡಿದೆ.

1) ಈ ಉದ್ದೇಶಿತ ಯೋಜನೆಯ ಖರ್ಚು ವೆಚ್ಚಗಳನ್ನು ಯೋಜನಾ ಲೆಕ್ಕ ಶೀರ್ಷಿಕೆ 3425–60–200–0–16–(101) (ಯೋಜನೆ) ವಿಜ್ಞಾನ ಮತ್ತು ತಂತ್ರಜ್ಞಾನ ಯೋಜನೆಗಳಿಗೆ ಸಹಾಯಾನುದಾನ ಇದರ ಅಡಿಯಲ್ಲಿ ಭರಿಸತಕ್ಕದ್ದು.

2) 2009–10ನೇ ಸಾಲಿನಲ್ಲಿ ಬಿಡುಗಡೆ ಮಾಡಲಾದ ಅನುದಾನವನ್ನು ಪೂರ್ಣವಾಗಿ ಉಪಯೋಗಿಸಿಕೊಂಡಿರುವುದಕ್ಕೆ ಉಪಯೋಗತಾ ಪ್ರಮಾಣ ಪತ್ರವನ್ನು ಹಾಗೂ ಲೆಕ್ಕ ಪರಿಶೋಧಕರಿಂದ ದೃಢೀಕರಿಸಲ್ಪಟ್ಟ ತನಿಖಾ ವರದಿಯನ್ನು ದಿನಾಂಕ : 30/05/2010 ರ ಒಳಗೆ ಸಲ್ಲಿಸತಕ್ಕದ್ದು.

3) ಈಗ ಬಿಡುಗಡೆ ಮಾಡಿದ ಹಣವನ್ನು ಉದ್ದೇಶಿತ ಯೋಜನೆಗೆ ಮಾತ್ರ ಉಪಯೋಗಿಸತಕ್ಕದ್ದು, ಮತ್ತು ಈ ಹಣವನ್ನು ಬೇರೆ ಯೋಜನೆಗೆ / ಕಾರ್ಯಕ್ರಮಗಳಿಗೆ ಸರ್ಕಾರದ ಅನುಮತಿ ಇಲ್ಲದೆ ವರ್ಗಾಯಿಸಬಾರದು.

4) ಉದ್ದೇಶಿತ ಕಾರ್ಯಕ್ರಮಕ್ಕೆ ಖರ್ಚಾಗದ ಬಾಬ್ತು ಅನುದಾನವನ್ನು ಉಳಿಸಿಕೊಂಡು ಅದನ್ನು ಸರ್ಕಾರದ ಗಮನಕ್ಕೆ ತರದೇ ಇದ್ದದ್ದು ಕಂಡು ಬಂದಲ್ಲಿ ಸದರಿ ಮೊತ್ತಕ್ಕೆ ಬ್ಯಾಂಕ್ ನೀಡುವ ಸರಳ ಬಡ್ಡಿಯೊಂದಿಗೆ ಸರ್ಕಾರಕ್ಕೆ ಪಾವತಿಸಿಕೊಳ್ಳಲು ಕ್ರಮ ಕೈಗೊಳ್ಳಲಾಗುವುದು.

5) ಉದ್ದೇಶಿತ ಯೋಜನೆಗೆ ಬಿಡುಗಡೆ ಮಾಡಲಾದಂತಹ ಅನುದಾನವನ್ನು ಬಳಸದೇ ಬ್ಯಾಂಕಿನಲ್ಲಿ ಠೇವಣಿ ಮಾಡಿದ ಪಕ್ಷದಲ್ಲಿ ಅದನ್ನು ಸರ್ಕಾರದ ಗಮನಕ್ಕೆ ತರತಕ್ಕದ್ದು ಮತ್ತು ಅಂತಹ ಠೇವಣಿ ಮೊತ್ತಕ್ಕೆ ದೊರೆಯುವ ಬಡ್ಡಿಯನ್ನು ಹಿಂತೆಗೆದುಕೊಳ್ಳಲು ಕ್ರಮ ತೆಗೆದುಕೊಳ್ಳಲಾಗುವುದು.

6) ಉದ್ದೇಶಿತ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಲಾದಂತಹ ಅನುದಾನದ ಲೆಕ್ಕಪತ್ರಗಳನ್ನು ಮಂಜೂರು ಮಾಡುವ ಅಧಿಕಾರಿಯು ಸಮೀಕ್ಷೆಗಾಗಿ ಕೋರಿದ್ದಲ್ಲಿ ತಪ್ಪದೇ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಆಇ 1 ಟಿಎಫ್‌ಪಿ 2008, ದಿನಾಂಕ : 16/05/2008 ರಡಿ ಸರ್ಕಾರದ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಪ್ರದತ್ತವಾದ ಆರ್ಥಿಕ ಅಧಿಕಾರದನ್ವಯ ಮತ್ತು ಎಫ್‌ಡಿ 1579 ವೆಚ್ಚ-7/2008, ದಿನಾಂಕ : 16.12.2008 ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ, ಮತ್ತು ಅವರ ಹೆಸರಿನಲ್ಲಿ
**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೨೭, ೨೦೦೯ (ಶ್ರಾವಣ ೫, ಶಕ ವರ್ಷ ೧೯೩೧) | ನಂ. ೬೦೧ |
|---|---|---|

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂ. ಕಂಇ 164 ಎಲ್‌ಆರ್‌ಎ 2008, ಬೆಂಗಳೂರು, ದಿನಾಂಕ : 5ನೇ ಜೂನ್, 2009**

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ (1962 ರ 10ನೇ ಸಂಖ್ಯೆಯ ಕರ್ನಾಟಕ ಕಾಯ್ದೆ ತಿದ್ದುಪಡಿಯಾದಂತೆ) ಕಲಂ 48ರ ಉಪ ಕಲಂ 1 ರಿಂದ 3 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬ. ಬಸವನಬಾಗೇವಾಡಿ ತಾಲ್ಲೂಕು ಭೂ ನ್ಯಾಯಮಂಡಳಿಗೆ ನೇಮಕ ಮಾಡಲಾಗಿದ್ದ ಅಧ್ಯಕ್ಷರ ನೇಮಕವನ್ನು ರದ್ದುಪಡಿಸಿ, ಸದರಿಯವರ ಜಾಗಕ್ಕೆ ಬಿಜಾಪುರ ಉಪವಿಭಾಗಾಧಿಕಾರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಿ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಎನ್. ನಾರಾಯಣ ಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ ಸುಧಾರಣೆ)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೨೭, ೨೦೦೯ (ಶ್ರಾವಣ ೫, ಶಕ ವರ್ಷ ೧೯೩೧) | ನಂ. ೬೦೨ |
|---|---|---|

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂ. ಸಿಆಸುಇ 53 ಶಿಸನೇ 2009, ಬೆಂಗಳೂರು, ದಿನಾಂಕ : 20ನೇ ಜೂನ್, 2009**

ಶ್ರೀ ಡಾ: ಪ್ರಧಾನ ಗುರುದತ್, ಅಧ್ಯಕ್ಷರು, ಕುವೆಂಪು ಭಾಷಾ ಭಾರತೀಯ ಸಂಸ್ಥೆ, ಬೆಂಗಳೂರು ಇವರಿಗೆ ಸದರಿ ಹುದ್ದೆಯ ಕಾರ್ಯಭಾರವನ್ನು ವಹಿಸಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆವಿಗೆ ರಾಜ್ಯ ಸಚಿವರ ಸ್ಥಾನಮಾನವನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ತಿಪ್ಪೇಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಜುಲೈ ೨೭, ೨೦೦೯ (ಶ್ರಾವಣ ೫, ಶಕ ವರ್ಷ ೧೯೩೧) | ನಂ. ೬೦೩ |
|---|---|---|

**ಅಲ್ಪಸಂಖ್ಯಾತರ ಕಲ್ಯಾಣ ಸಚಿವಾಲಯ**

**ಅಧಿಸೂಚನೆ**

**ಸಂ. MWD 6 LMR 2009, ಬೆಂಗಳೂರು, ದಿನಾಂಕ : 15ನೇ ಜೂನ್, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 104 ಆಸೇವ 2009, ದಿನಾಂಕ : 11–06–2009 ರಲ್ಲಿ ಶ್ರೀ ಅತೀಕ್ ಅಹಮದ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಇವರನ್ನು , ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದಲ್ಲಿ ಖಾಲಿ ಇರುವ ಕಾರ್ಯದರ್ಶಿ ಹುದ್ದೆಗೆ ನೇಮಿಸಲು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವಶಕ್ಕೆ ನೀಡಲಾಗಿದೆ.

ಶ್ರೀ ಅತೀಕ್ ಅಹಮದ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಇವರನ್ನು ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ಕಾರ್ಯದರ್ಶಿಯಾಗಿ ಮರುನೇಮಕಾತಿ ಮಾಡಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಸರ್ಕಾರದ ಅಧೀನ ಕಾರ್ಯದರ್ಶಿ, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – V | ಬೆಂಗಳೂರು, ಮಂಗಳವಾರ, ಜುಲೈ ೨೮, ೨೦೦೯ (ಶ್ರಾವಣ ೬, ಶಕ ವರ್ಷ ೧೯೩೧) | ನಂ. ೬೦೪ |
|---|---|---|

**AGRICULTURE SECRETARIAT**

**NOTIFICATION**

**No. AHD 24 AGW 2009, Bangalore, Dated : 27th July, 2009**

The provisional select list of the candidates called for verification of original certificate pertaining to recruitment of Agricultural Officer post by Physically handicapped candidates in the Department of Agriculture, Government of Karnataka, was notified vide notification No. No.AHD/24/AGW/2009, Dated : 04-07-2009, inviting objections, if any, within 15 days from the date of publication. No objection is received in this regard. The final select list of candidates selected for the post of Agricultural Officer by Physically handicapped candidates in enclosed to this notification.

By order and in the name of the Governor of Karnataka,

**G. K. GURANI**
Under Secretary to Government
Agriculture Department

**GOVERNMENT OF KARNATAKA – DEPARTMENT OF AGRICULTURE**
**Recruitment for the post of Agricultural Officer by physically handicapped candidates**
**FINAL SELECTION LIST**

| Sl. No. | Appn. No. | Name of the Applicant | Gender | Date of Birth | Reservation Claimed | M.Sc., (Ag.) Marks (%) | Reservation Considered |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | 12991 | Yaser Arfath | Male | 29/12/1973 | 2B – LMD | 87.70 | GM – LMD |
| 2 | 15679 | Jayappa .J | Male | 23/03/1973 | 3A – LMD | 87.10 | GM – LMD |
| 3 | 15681 | Devaraju .B | Male | 21/07/1977 | GM – LMD | 85.20 | GM – LMD |
| 4 | 15916 | Basavaraj F Maragannavar | Male | 23/03/1977 | 2A – LMD | 81.90 | GM – LMD |
| 5 | 12301 | Duragappa Hadimani | Male | 01/06/1977 | SC – LMD | 80.80 | GM – LMD |
| 6 | 11357 | Rajesh D. B. | Male | 20/06/1980 | GM – LMD | 79.30 | GM – LMD |
| 7 | 10206 | Vedamurthy H. J. | Male | 27/03/1979 | GM – B/LV | 79.10 | GM – B/LV |
| 8 | 15359 | Gulappa Battikoppad | Male | 02/02/1977 | 3B – LMD | 73.30 | GM – LMD |

**G. K. GURANI**
Under Secretary to Government
Agriculture Department

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಜುಲೈ ೨೮, ೨೦೦೯ (ಶ್ರಾವಣ ೬, ಶಕ ವರ್ಷ ೧೯೩೧) | ನಂ. ೬೦೫ |
|---|---|---|

**HOME SECRETARIAT**

**NOTIFICATION**

**No. HD 28 SST 2009, Bangalore, Dated : 26th June, 2009**

In exercise of the powers conferred by sub section (1) of section 20 of Code of Criminal Procedure 1973 (Central Act 2 of 1974) and in supercession of notification No. RD 1001 PCE 1989, dated 17.10.1989, the Government of Karnataka hereby appoints the Commissioner of Police, Mysore City as the Executive Magistrate for the area within the limits of Corporation of the Ctiy of Mysore, and in exercise of the power conferred by sub Section (2) of the said section, the said Executive Magistrate is appointed as "Additional District Magistrate" for the said area.

By order and in the name of the Governor of Karnataka,

**K.C. SIDDAPPA**
Under Secretary to Government
Home Department (Law and Order)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಜುಲೈ ೨೮, ೨೦೦೯ (ಶ್ರಾವಣ ೬, ಶಕ ವರ್ಷ ೧೯೩೧) | ನಂ. ೬೦೬ |
|---|---|---|

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂ. ಸಇ 128 ಎಂಆರ್ಇ 2009, ಬೆಂಗಳೂರು, ದಿನಾಂಕ : 27ನೇ ಜೂನ್, 2009**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 11(1)(ix)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ : ಸಇ 322 ಎಂಆರ್ಇ 2008, ದಿನಾಂಕ : 16/12/2008 ರಲ್ಲಿ ಸೇಡಂ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಸದಸ್ಯರನ್ನಾಗಿ ಮಾಡಲಾಗಿದ್ದ ""ಶ್ರೀ ರಾಮೂನಾಯಕ್ ಬಿನ್ ಲಚ್ಚಣ್ಣ ನಾಯಕ, ಇಟ್ಕಲ್ ತಾಂಡ ಮತ್ತು ಅಂಚೆ, ಸೇಡಂ ತಾಲ್ಲೂಕು, ರವರ ನಾಮನಿರ್ದೇಶನವನ್ನು ರದ್ದುಪಡಿಸಿ ""ಶ್ರೀ ಭೀಮಣ್ಣ ಬಿನ್ ಶಿವಪ್ಪ ನಾಟಿಕಾರ, ಸಾ: ಹೊಸ್ಸಳ್ಳಿ ತಾ: ಸೇಡಂ' ರವರನ್ನು ಸೇಡಂ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಸದಸ್ಯರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಕೆ. ವಾಸುದೇವ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಜುಲೈ ೨೮, ೨೦೦೯ (ಶ್ರಾವಣ ೬, ಶಕ ವರ್ಷ ೧೯೩೧) | ನಂ. ೬೦೮ |
|---|---|---|

**ENERGY SECRETARIAT**

**NOTIFICATION**

**No. EN 25 PSR 2009, Bangalore, Dated : 15th July, 2009**

The draft of the following rules to amend the Karnataka Electricity Regulatory Commission (Chairman and other Members, Remuneration, Allowance and Conditions of Service)(Amendment) Rules 2000 which the Government of Karnataka proposes to make in exercise of powers conferred by Section 57 of the Karnataka Electricity Reform Act, 1999 (Karnataka Act 25 of 1999) is hereby published as required by sub section (1) of the said section for the information of all persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objections or suggestions which may be received by State Government from any person in respect of the said draft before the expiry of the period specified above, will be considered by the State

Government. Objections or suggestions may be addressed to Principal Secretary to Government, Energy Department, Vikasa Soudha, Bangalore - 560 001.

**DRAFT RULES**

**1. Title and commencement,-** (1) These rules may be called the Karnataka Electricity Regulatory Commission (Chairman and other Members' remuneration, allowance and conditions of service)(Amendment) Rules, 2009.

(2) They shall be deemed to have come into force from the first day of January 2006.

**2. Amendment of rule 3. -** In the Karnataka Electricity Regulatory Commission (Chairman and other Members' remuneration, allowance and conditions of service) Rules, 2000 (hereinafter referred to as the said rules),-

(i) For sub-rule (1), except the proviso, the following shall be substituted, namely:-
"The Chairman and other members shall receive a pay of rupees eighty thousand rupees per month".

(ii) in sub-rule (2), for the word and figure "4,000", the word and figure "Rs.8,000" shall be substituted;

**3. Amendment of rule 6**,- In rule 6 of the said rules,-

(1) in sub-rule (4),-

(i) in clause (a) , for the words and figures "Rs.10,937/-" and "Rs.1,09,730/-" the words and figures **"Rs.21,945/-"** and **"Rs.2,19,450/-"** shall respectively be substituted.

(ii) in clause (b), for the words and figures "Rs.8,363/-" and "Rs.83,630/-" the words and figures **"Rs.17,175/-"** and **"Rs.1,71,750/-"** shall respectively be substituted;

(iii) in clause (c),- the words and figures "Rs.8,363/-" and "Rs.10,973/-" the words and figures **"Rs.17,175/-" and "Rs.21,945/-"** shall respectively be substituted;

(iv) After clause (c), the following proviso shall be inserted namely,-

"Provided that the Member or the Chairman shall be entitled to an additional quantum of pension in accordance with the following scale:-

| **Pensioner Age** | **Additional quantum of pension** |
|---|---|
| From 80 years to less than 85 years | 20 % of basic pension |
| From 85 years to less than 90 years | 30 % of basic pension |
| From 90 years to less than 95 years | 40 % of basic pension |
| From 95 years to less than 100 years | 50 % of basic pension |
| More than 100 years | 100 % of basic pension |

(2) in sub-rule (7) of rule 6, the words "subject to a minimum of Rs.1,913/- per month shall be omitted.

(3) after sub-rule (7), the following shall be inserted, namely:-

"Provided that the family of the Chairman or the members shall be eligible to an additional quantum of family pension in accordance with the following scale:

| **Family Pensioner** | **Additional pension** |
|---|---|
| From 80 years to less than 85 years | 20 % of family pension |
| From 85 years to less than 90 years | 30 % of family pension |
| From 90 years to less than 95 years | 40 % of family pension |
| From 95 years to less than 100 years | 50 % of basic pension |
| More than 100 years | 100 % of family pension |

By order and in the name of the Governor of Karnataka,

**S.J. SAMPATHKUMAR**
Under Secretary to Government
Energy Department

ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಜುಲೈ ೨೮, ೨೦೦೯ (ಶ್ರಾವಣ ೬, ಶಕ ವರ್ಷ ೧೯೩೧) | ನಂ. ೬೦೯ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. LGA/BLA/17/2009, Bangalore, Dated : 28th July, 2009**

The following Bill was introduced in Legislative Assembly on 28th July, 2009.

**THE KARNATAKA RAJYA SAMSKRITA - VEDA VISHWAVIDYALAYA BILL, 2009**

**(L.A. Bill No. 17 of 2009)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಮೂರನೇ ಅಧಿವೇಶನ**

**ಕರ್ನಾಟಕ ಸಂಸ್ಕೃತ – ವೇದ ವಿಶ್ವವಿದ್ಯಾಲಯ ವಿಧೇಯಕ, 2009**
**(2009ರ ವಿಧಾನಸಭೆಯ ವಿಧೇಯಕ ಸಂಖ್ಯೆ 17)**

ಕರ್ನಾಟಕ ಸಂಸ್ಕೃತ – ವೇದ ವಿಶ್ವವಿದ್ಯಾಲಯವನ್ನು ಸ್ಥಾಪಿಸಿ ನಿಗಮಿತಗೊಳಿಸುವುದಕ್ಕಾಗಿ ಉಪಬಂಧ ಕಲ್ಪಿಸಲು ಒಂದು ವಿಧೇಯಕ.

ಬಹು ಪ್ರಾಚೀನವಾದ ಮತ್ತು ಉಜ್ವಲವಾದ ವೈಜ್ಞಾನಿಕ, ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಸಂಪ್ರದಾಯ ಮತ್ತು ಪರಂಪರೆಗಳನ್ನುಳ್ಳ ಹಾಗೂ ಗದ್ಯ, ಪದ್ಯ,, ನಾಟಕ, ನಾಟ್ಯ, ಶಿಲ್ಪಕಲೆ, ವರ್ಣಚಿತ್ರ, ಲಲಿತಕಲೆಗಳು, ವೈದ್ಯಶಾಸ್ತ್ರ, ತತ್ವಜ್ಞಾನ ಕ್ಷೇತ್ರಗಳಲ್ಲಿ ಮತ್ತು ಇತರ ಸಂಬಂಧಪಟ್ಟ ಕ್ಷೇತ್ರಗಳಲ್ಲಿ ಭಾರತೀಯ ವಿದ್ವಾಂಸರು ಈವರೆವಿಗೂ ಸಾಧಿಸಿರುವ ಸಾಧನೆಗಿಂತಲೂ ವ್ಯಾಪಕವಾದ ಮತ್ತು ಚಿರಂತನವಾದ ಕೊಡುಗೆಯನ್ನು ನೀಡಿರುವಂಥ ಸಂಸ್ಕೃತ ಭಾಷೆಯ ಅನನ್ಯ ಅಭಿವೃದ್ಧಿಗಾಗಿಯೆಂದೇ ಪ್ರತ್ಯೇಕವಾದ ಒಂದು ವಿಶ್ವವಿದ್ಯಾಲಯವನ್ನು ರಚಿಸುವುದು ಯುಕ್ತವಾಗಿರುವುದರಿಂದ,

ಮತ್ತು ಸಂಸ್ಕೃತ ಭಾಷೆಯ ವ್ಯಾಸಂಗ ಹಾಗೂ ಸಂಶೋಧನೆಯ ಅಭ್ಯುದಯ ಮತ್ತು ಮರೋಭಿವೃದ್ಧಿಗಾಗಿ ಒಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸುವುದು ಅಪೇಕ್ಷಣೀಯವಾದುದರಿಂದ;

ಇದು, ಭಾರತ ಗಣರಾಜ್ಯದ ಐವತ್ತೊಂಭತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:

## ಅಧ್ಯಾಯ – I

## ಪ್ರಾರಂಭಿಕ

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ:–** (1) ಈ ಅಧಿನಿಯಮವನ್ನು ಕರ್ನಾಟಕ ಸಂಸ್ಕೃತ – ವೇದ ವಿಶ್ವವಿದ್ಯಾಲಯ ಅಧಿನಿಯಮ, 2009 ಎಂದು ಕರೆಯತಕ್ಕದ್ದು.

(2) ಇದು, ರಾಜ್ಯ ಸರ್ಕಾರವು ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) **"ಗೊತ್ತುಪಡಿಸಿದ ದಿನಾಂಕ"** ಎಂದರೆ, ಈ ಅಧಿನಿಯಮವು ಪ್ರಾರಂಭಗೊಳ್ಳಲು ಗೊತ್ತುಪಡಿಸಿದ ದಿನಾಂಕ.

(ಬಿ) **"ಘಟಕ ಕಾಲೇಜು"** ಎಂದರೆ, ವಿಶ್ವವಿದ್ಯಾಲಯದ ಒಂದು ಘಟಕ ಕಾಲೇಜು.

(ಸಿ) **"ಸರ್ಕಾರ"** ಎಂದರೆ, ರಾಜ್ಯ ಸರ್ಕಾರ.

(ಡಿ) "ವಿದ್ಯಾರ್ಥಿನಿಲಯ'' ಎಂದರೆ, ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗಾಗಿ ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ಅಥವಾ ಅದರಿಂದ ಮನ್ನಣೆ ಪಡೆದ ಒಂದು ನಿವಾಸ ಘಟಕ;

(ಇ) **"ನಿಯಮಿಸಲಾದುದು"** ಎಂದರೆ, ಶಾಸನಗಳಿಂದ ನಿಯಮಿಸಲಾದುದು.

(ಎಫ್) "ವಿನಿಯಮಗಳು" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ವಿನಿಯಮಗಳು.

(ಜಿ) "ಶಾಸನಗಳು" ಎಂದರೆ, ಈ ಅಧಿನಿಯಮದಡಿಯಲ್ಲಿ ವಿಶ್ವವಿದ್ಯಾಲಯವು ಮಾಡಿದ ಶಾಸನಗಳು.

(ಎಚ್) "ಅಧ್ಯಾಪಕರು" ಎಂದರೆ, ಪ್ರಾಧ್ಯಾಪಕರು, ವಿಶ್ರಾಂತ ಪ್ರಾಧ್ಯಾಪಕರು, ರೀಡರುಗಳು, ಉಪನ್ಯಾಸಕರು ಮತ್ತು ಶಾಸನಗಳಿಂದ ಅಧ್ಯಾಪಕರೆಂದು ಘೋಷಿತರಾಗಬಹುದಾದಂಥ ಇತರ ವ್ಯಕ್ತಿಗಳು.

(ಐ) "ವಿಶ್ವವಿದ್ಯಾಲಯ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿತವಾದ ಕರ್ನಾಟಕ ಸಂಸ್ಕೃತ–ವೇದ ವಿಶ್ವವಿದ್ಯಾಲಯ.

(ಜೆ) "ವಿಶ್ವವಿದ್ಯಾಲಯ ಅನುದಾನ ಆಯೋಗ" ಎಂದರೆ, ವಿಶ್ವವಿದ್ಯಾಲಯ ಅನುದಾನ ಆಯೋಗ ಅಧಿನಿಯಮ, 1956 ರ (1956ರ ಕೇಂದ್ರ ಅಧಿನಿಯಮ 3) 4ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿತವಾದ ಆಯೋಗ.

(ಕೆ) "ವಿಶ್ವವಿದ್ಯಾಲಯ ಗ್ರಂಥಾಲಯ" ಎಂದರೆ, ವಿಶ್ವವಿದ್ಯಾಲಯವು ಪ್ರಾರಂಭಿಸಿರಲಿ ಅಥವಾ ಇಲ್ಲದಿರಲಿ, ಅದರಿಂದ ನಿರ್ವಹಿಸಲಾದ ಗ್ರಂಥಾಲಯ.

## ಅಧ್ಯಾಯ – II

## ವಿಶ್ವವಿದ್ಯಾಲಯ

**3. ವಿಶ್ವವಿದ್ಯಾಲಯದ ಸ್ಥಾಪನೆ.–** (1) ಸಂಸ್ಕೃತದಲ್ಲಿ ಕಲಿಕೆಯ ಮುನ್ನಡೆಯನ್ನು ಮತ್ತು ಸಂಶೋಧನೆಯ ಪುರೋಭಿವೃದ್ಧಿಯನ್ನು ಸಾಧಿಸುವುದಕ್ಕಾಗಿ "ಕರ್ನಾಟಕ ಸಂಸ್ಕೃತ – ವೇದ ವಿಶ್ವವಿದ್ಯಾಲಯ" ಎಂಬ ಹೆಸರಿನ ಒಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸತಕ್ಕದ್ದು.

(2) ವಿಶ್ವವಿದ್ಯಾಲಯವು ಒಂದು ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಶಾಶ್ವತ ಉತ್ತರಾಧಿಕಾರವನ್ನು ಹೊಂದಿದ್ದು ಸಾಮಾನ್ಯ ಮೊಹರನ್ನು ಹೊಂದಿರತಕ್ಕದ್ದು ಹಾಗೂ ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಮತ್ತು ದಾವೆಗೊಳಗಾಗತಕ್ಕದ್ದು.

(3) ಸರ್ಕಾರದ ಮತ್ತು ಸಂಬಂಧಪಟ್ಟ ವಿಶ್ವವಿದ್ಯಾಲಯದ ಪೂರ್ವಾನುಮತಿಯ ಹೊರತು, ರಾಜ್ಯದಲ್ಲಿರುವ ಇತರ ಯಾವುದೇ ವಿಶ್ವವಿದ್ಯಾಲಯಕ್ಕೆ ಸಂಯೋಜಿತವಾದ ಅಥವಾ ಸಹವರ್ತಿತವಾದ ಅಥವಾ ಅದರಿಂದ ನಿರ್ವಹಿಸಲಾದ ಯಾವ ಸಂಸ್ಥೆಗೂ ಯಾವುದೇ ಉದ್ದೇಶಕ್ಕೆ ಮಾನ್ಯತೆ ನೀಡತಕ್ಕದ್ದಲ್ಲ.

(4) ವಿಶ್ವವಿದ್ಯಾಲಯದ ಕೇಂದ್ರ ಕಾರ್ಯಸ್ಥಾನವು ಬೆಂಗಳೂರು ಜಿಲ್ಲೆಯ ಪರಿಮಿತಿಯೊಳಗೆ ಅಥವಾ ಈ ಪರಿಮಿತಿಯ ಐವತ್ತು ಕಿಲೋಮೀಟರುಗಳ ಫಾಸಲೆಯೊಳಗಿರುವ ಯಾವುದೇ ಸ್ಥಳದಲ್ಲಿ ಇರತಕ್ಕದ್ದು.

(5) ವಿಶ್ವವಿದ್ಯಾಲಯವು, ಚರ ಮತ್ತು ಸ್ಥಿರ ಸ್ವತ್ತುಗಳೆರಡನ್ನೂ ಆರ್ಜಿಸಲು ಮತ್ತು ಧಾರಣ ಮಾಡಲು, ವಿಶ್ವವಿದ್ಯಾಲಯದ ಉದ್ದೇಶಗಳಿಗಾಗಿ ಅದರಲ್ಲಿ ನಿಹಿತವಾಗಿರಬಹುದಾದ ಅಥವಾ ಅದರಿಂದ ಆರ್ಜಿತವಾಗಿರಬಹುದಾದ ಯಾವುದೇ ಚರ ಮತ್ತು ಸ್ಥಿರ ಸ್ವತ್ತನ್ನು ಕರಾರು ಮಾಡಿಕೊಳ್ಳಲು ಮತ್ತು ಗುತ್ತಿಗೆಗೆ ನೀಡಲು, ಮಾರಾಟ ಮಾಡಲು ಅಥವಾ ಅನ್ಯಥಾ ವರ್ಗಾವಣೆ ಮಾಡಲು ಮತ್ತು ಈ ಅಧಿನಿಯಮದ ಉದ್ದೇಶಕ್ಕಾಗಿ ಅವಶ್ಯವಾದ ಇತರ ಎಲ್ಲಾ ಕಾರ್ಯಗಳನ್ನು ನಿರ್ವಹಿಸಲು ಸಕ್ಷಮವಾಗಿರತಕ್ಕದ್ದು.

(6) ವಿಶ್ವವಿದ್ಯಾಲಯವು, ತನ್ನಲ್ಲಿ ನಿಹಿತವಾಗಿದ್ದಿರಬಹುದಾದ ಅಥವಾ ತಾನು ಆರ್ಜಿಸಬಹುದಾದ ಯಾವುದೇ ಸ್ಥಿರ ಸ್ವತ್ತನ್ನು ಸರ್ಕಾರದ ಪೂರ್ವಾನುಮೋದನೆಯನ್ನು ಪಡೆಯದೇ ಗುತ್ತಿಗೆ ನೀಡತಕ್ಕದ್ದಲ್ಲ, ಮಾರಾಟ ಮಾಡತಕ್ಕದ್ದಲ್ಲ ಅಥವಾ ಅನ್ಯಥಾ ವರ್ಗಾಯಿಸತಕ್ಕದ್ದಲ್ಲ.

(7) ವಿಶ್ವವಿದ್ಯಾಲಯವು ಹೂಡಿದ ಅಥವಾ ಅದರ ವಿರುದ್ಧ ಹೂಡಲಾದ ಎಲ್ಲಾ ದಾವೆಗಳಲ್ಲಿ ಮತ್ತು ಇತರ ಕಾನೂನು ವ್ಯವಹರಣೆಗಳಲ್ಲಿ ವಾದ ಪ್ರತಿವಾದ ಪತ್ರಗಳಿಗೆ ಕುಲಸಚಿವರು ಸಹಿ ಮಾಡಿ ಸತ್ಯಾಪನೆ ಮಾಡತಕ್ಕದ್ದು ಮತ್ತು ಅಂಥ ದಾವೆಗಳಲ್ಲಿನ ಹಾಗೂ ವ್ಯವಹರಣೆಗಳಲ್ಲಿನ ಎಲ್ಲಾ ಆದೇಶಿಕೆಗಳನ್ನು ಕುಲಸಚಿವರಿಗೆ ನೀಡತಕ್ಕದ್ದು ಮತ್ತು ಅವರಿಗೆ ಜಾರಿ ಮಾಡತಕ್ಕದ್ದು.

**4. ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳು.–** ವಿಶ್ವವಿದ್ಯಾಲಯವು ಈ ಮುಂದಿನ ಧ್ಯೇಯೋದ್ದೇಶಗಳನ್ನು ಹೊಂದಿರತಕ್ಕದ್ದು, ಎಂದರೆ.–

(1) ಸಂಸ್ಕೃತ ಭಾಷೆ, ಸಾಹಿತ್ಯ ಮತ್ತು ವ್ಯಾಕರಣ, ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಮೀಮಾಂಸ, ವೇದಾಂತ ಮುಂತಾದ ವೇದ ಮತ್ತು ಶಾಸ್ತ್ರಾಧ್ಯಯನದಲ್ಲಿ ಮತ್ತು ಜೈನ ಧರ್ಮ ಶಾಸ್ತ್ರ ಮತ್ತಿತ್ತರ ಪೂರಕ ಶಿಕ್ಷಣದಲ್ಲೂ ಸಹ ಬೋಧನೆ ಮತ್ತು ಸಂಶೋಧನೆಯ ಅತ್ಯುನ್ನತ ಸಂಸ್ಥೆಯಾಗಿ ಕಾರ್ಯ ನಿರ್ವಹಿಸುವುದು;

(2) ಕರ್ನಾಟಕದಲ್ಲಿ ದೊರೆಯುವ ಸಂಸ್ಕೃತ ಸಾಹಿತ್ಯದ ವಿಶಿಷ್ಟ ಗುಣಲಕ್ಷಣಗಳಿಗೆ ವಿಶೇಷವಾದ ಒತ್ತನ್ನು ನೀಡಿ ವೇದ, ಆಗಮ ಮತ್ತು ಸಜಾತೀಯ ಸಾಹಿತ್ಯದ ಅಧ್ಯಯನದ ಸಾಂಪ್ರದಾಯಿಕ ಪದ್ಧತಿಯನ್ನು ಸಂರಕ್ಷಿಸುವುದು, ಪೋಷಿಸುವುದು ಮತ್ತು ಉತ್ತೇಜಿಸುವುದು;

(3) ವೇದ ಹಾಗೂ ಮೇಲೆ ಹೇಳಿದ ಅಧ್ಯಯನ ವಿಷಯಗಳಲ್ಲಿ ಅಡಗಿರುವ ಜ್ಞಾನ ಬಂಡಾರವನ್ನು ಹಾಗೂ ಆಧುನಿಕ ಜಗತ್ತಿಗೆ ಅವು ಎಷ್ಟು ಪ್ರಸ್ತುತ ಎಂಬ ಮಹತ್ವವನ್ನು ಸರ್ವರಿಗೂ ತಿಳಿಯಪಡಿಸುವುದು;

(4) (1) ಸಂಸ್ಕೃತ ಭಾಷೆಯಲ್ಲಿ ಉಗಮವಾಗಿ ಬೆಳೆದು ನಿಂತ ಭಗವದ್ಗೀತೆ ಆಧಾರಿತ ಆಡಳಿತ ವಿಜ್ಞಾನ (2)ಯೋಗ ಆಧಾರಿತ ಮಾನವ ಮನಶಾಸ್ತ್ರ (3) ಪರಿಸರ ಸಮತೋಲನ ಸಂಬಂಧಿತ ಆರೋಗ್ಯ ಸಂಬಂಧಿ ಸಾಂಪ್ರದಾಯಿಕ ಜ್ಞಾನ, (4) ಪುರಾತತ್ವ ಶಾಸ್ತ್ರ (5) ಪ್ರಾಚೀನ ವಿಜ್ಞಾನಗಳು (6) ಆಗಮ ಶಾಸ್ತ್ರ (7) ಆಯುರ್ವೇದ (8) ವಿಜ್ಞಾನ ಮಾನವಿಕ ಶಾಸ್ತ್ರಗಳು (9) ನಟನೆ ಕಲೆಗಳು (10) ಲಲಿತ ಕಲೆಗಳು ಮತ್ತು ಸಂವಾದ ವಿಜ್ಞಾನ (11) ವೇದಾಧ್ಯಯನ ಮತ್ತು ವೇದ ಭಾಷಾಧ್ಯಯನ ಮತ್ತಿತ್ತರ ವಿಜ್ಞಾನಗಳ ರಂಗದಲ್ಲಿ ಮುಂದುವರಿದ ಅಧ್ಯಯನ ಮತ್ತು ಸಂಶೋಧನೆಗೆ ಅನುಕೂಲ ಕಲ್ಪಿಸುವುದು ಮತ್ತು ಅದನ್ನು ನಿಯಂತ್ರಿಸುವುದು;

(5) ವೇದ ಮತ್ತು ಶಾಸ್ತ್ರಗಳಲ್ಲಿ ಜ್ಞಾನ ಸಂವರ್ಧನೆ ಹಾಗೂ ಪ್ರಜ್ಞೆಯ ಉನ್ನತಸ್ತರಗಳ ಸಾಧನೆಯ ಹಾದಿಯಲ್ಲಿ ಕಂಡುಬರುವ ವಿವೇಚನಾಯುಕ್ತ ತರ್ಕ ಸಮ್ಮತ ವಿಧಾನ ಹಾಗೂ ವೈಜ್ಞಾನಿಕವಾದಂಥ ನಿಲುವುಗಳು ಎಷ್ಟು ಗಹನವಾದುದು ಎಂಬುದನ್ನು ಸರ್ವರಿಗೂ ವಿಷದಪಡಿಸುವುದು;

(6) ಭಾರತೀಯ ಜ್ಞಾನ ಪರಂಪರೆಯನ್ನು ಕ್ರೋಢೀಕರಿಸಿ, ಪುನರುಜ್ಜೀವನಗೊಳಿಸಿ ಉತ್ತೇಜಿಸುವುದು ಹಾಗೂ ವೇದ ಮತ್ತು ಸಂಸ್ಕೃತ ಸಾಹಿತ್ಯದಲ್ಲಿ ಒಳಗೊಂಡ ವೈಜ್ಞಾನಿಕ ವಿಚಾರಗಳನ್ನು ವಿಶೇಷವಾಗಿ ಕೃಷಿ, ಖಗೋಳ ಶಾಸ್ತ್ರ, ಜೀವ ಶಾಸ್ತ್ರ, ರಸಾಯನಶಾಸ್ತ್ರ, ಮಾನವಿಕ ಶಾಸ್ತ್ರಗಳು, ಮಾಹಿತಿ ತಂತ್ರಜ್ಞಾನ, ಕಾನೂನು ಮತ್ತು ನ್ಯಾಯಶಾಸ್ತ್ರ, ಆಡಳಿತ, ಗಣಿತ, ಲೋಹಶಾಸ್ತ್ರ, ಪವನಶಾಸ್ತ್ರ, ಭೌತಶಾಸ್ತ್ರ, ಸಾಮಾಜಿಕ ವಿಜ್ಞಾನಗಳಲ್ಲಿ ಅಳವಡಿಸಲು ಹಾಗೂ ಆಧುನಿಕ ವಿಜ್ಞಾನ ಮತ್ತು ತಾಂತ್ರಿಕ ಅಧ್ಯಯನಗಳಲ್ಲಿ ಯೋಗವನ್ನು ಸಮ್ಮಿಲನಗೊಳಿಸುವುದು;

(7) ವೇದದ ಅಧಿಕಾರಯುತ (ಭಾಷ್ಯಗಳ) ವ್ಯಾಖ್ಯಾನಗಳ ಬಗ್ಗೆ ಜನಜಾಗೃತಿ ಮೂಡಿಸುವುದು;

(8) ಒಂದೇ ಬಗೆಯ ಧ್ಯೇಯೋದ್ದೇಶವುಳ್ಳ ಎಲ್ಲಾ ವಿಶ್ವವಿದ್ಯಾಲಯಗಳು ಮತ್ತು ಸಂಸ್ಥೆಗಳು ಮಾಡಿದ ಪ್ರಯತ್ನಗಳ ಕೂಡುಬಲವನ್ನು ಅಭಿವೃದ್ಧಿಪಡಿಸುವ ದೃಷ್ಟಿಯಿಂದ ಪರಸ್ಪರ ವ್ಯವಸ್ಥೆಗಳು ಮತ್ತು ಸಂವಾದ ಸಂಪರ್ಕ ಸೌಕರ್ಯಗಳೊಂದಿಗೆ ಅಂಥ ವೇದ ಹಾಗೂ ಸಂಸ್ಕೃತ ವಿದ್ಯಾಸಂಸ್ಥೆಗಳ ಮತ್ತು ಶೈಕ್ಷಣಿಕ ಹಾಗೂ ಸಂಶೋಧನಾ ಅಭಿಮುಖ ಸಂಸ್ಥೆಗಳ ಒಂದು ಜಾಲವನ್ನು ರಚಿಸುವುದು;

(9) ಸಂಸ್ಕೃತ ಮತ್ತು ವೇದಗಳಲ್ಲಿರುವ ವಿಚಾರಧಾರೆಯನ್ನು ಒಳಗೊಂಡ ಸಾಹಿತ್ಯ ಬಂಡಾರವನ್ನು ಆಧುನಿಕ ಭಾರತೀಯ ಮತ್ತು ವಿದೇಶಿ ಭಾಷೆಗಳಲ್ಲಿ ಸೃಷ್ಟಿಸುವುದು.

(10) ಎಲ್ಲಾ ವೇದಗಳು ಶಾಸ್ತ್ರೀಕ ಕೃತಿಗಳು ಮತ್ತು ಅವಕ್ಕೆ ಸಂಬಂಧಪಟ್ಟ ಗ್ರಂಥಗಳು, ಭಾಷ್ಯಗಳು ಮತ್ತು ವ್ಯಾಖ್ಯಾನಗಳನ್ನು ಕನ್ನಡ ಮತ್ತು ಇತರ ಭಾಷೆಗಳಿಗೆ ಭಾಷಾಂತರಿಸುವುದು ಮತ್ತು ಪ್ರಕಟಿಸುವುದು;

(11) ವೇದ ಪಠನಗಳು ಮತ್ತು ಸಂಬಂಧಪಟ್ಟ ಸಾಂಪ್ರದಾಯಿಕ ಆಚರಣೆಗಳ ಧ್ವನಿ ಮತ್ತು ಧ್ವನಿ–ದೃಶ್ಯ ದಾಖಲೆಗಳನ್ನು ತಯಾರಿಸುವುದು;

(12) ವಿಶ್ವವಿದ್ಯಾಲಯದಲ್ಲಿ ಅಂತರ–ವ್ಯಾಸಂಗವಿಷಯಗಳ ಅಧ್ಯಯನ ಮತ್ತು ಸಂಶೋಧನೆಯನ್ನು ಉತ್ತೇಜಿಸಲು ಮತ್ತು ಅಂತದ್ದೇ ಇತರ ಸಂಬಂಧಪಟ್ಟ ಚಟುವಟಿಕೆಗಳನ್ನು ವಿಶ್ವವಿದ್ಯಾಲಯದ ಮಟ್ಟದಲ್ಲಿ ಸೌಹಾರ್ದರೀತಿಯಲ್ಲಿ ನಡೆಸಿಕೊಂಡು ಬರಲು ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳುವುದು;

(13) ಸಂಸ್ಕೃತದಲ್ಲಿ ಒಂದು ಓರಿಯಂಟಲ್ ಸಂಸ್ಥೆಯನ್ನು ಸ್ಥಾಪಿಸಿ ಅಪೂರ್ವ ಹಸ್ತಪ್ರತಿಗಳು ಮತ್ತು ಪುರಾತನ ಕೃತಿಗಳನ್ನು ಸಂಗ್ರಹಿಸುವುದು, ಸಂರಕ್ಷಿಸುವುದು ಮತ್ತು ಟೀಕುಟಿಪ್ಪಣಿಗಳೊಂದಿಗೆ ಸಂಪಾದನೆ ಮಾಡುವುದು ಮತ್ತು ಪ್ರಕಟಿಸುವುದು.

(14) ಇರುವ ಎಲ್ಲಾ ಹಸ್ತಪ್ರತಿಗಳ ಮತ್ತು ಸಂಸ್ಕೃತ ಗ್ರಂಥಗಳ ಬಂಡಾರವನ್ನು ಕಂಪ್ಯೂಟರ್‌ಗೆ ಅಳವಡಿಸಿ ಡಿಜಿಟಲ್ ರೂಪದಲ್ಲಿ ಸಂಗ್ರಹಿಸುವುದು.

(15) ವಿಶ್ವವಿದ್ಯಾಲಯ/ವಿಭಾಗಗಳ ಮೂಲಕ ಅತ್ಯುನ್ನತ ಮಟ್ಟದ ಸಂಶೋಧನಾ ಜರ್ನಲ್‌ಗಳನ್ನು ಹೊರತರುವುದು.

(16) ಪ್ರಾಚೀನ ಜ್ಞಾನಪದ್ಧತಿಗಳಲ್ಲಿ ಇರುವ ಸಂದೇಶವನ್ನು ಉತ್ತೇಜಿಸುವ ದೃಷ್ಟಿಯಿಂದ ವಿಚಾರಗೋಷ್ಠಿಗಳು, ಸಮ್ಮೇಳನಗಳು, ಕಾರ್ಯಗಾರಗಳು, ವಿದ್ವತ್‌ಗೋಷ್ಠಿಗಳನ್ನು ಏರ್ಪಡಿಸುವುದು.

(17) ವಿಶ್ವವಿದ್ಯಾಲಯಗಳು ನಿರ್ವಹಿಸಿಕೊಂಡುಬರದ ವಿದ್ಯಾಸಂಸ್ಥೆಗಳನ್ನು ಸಂಯೋಜಿತ ಕಾಲೇಜುಗಳು/ಮಹಾ ಪಾಠಶಾಲೆಗಳು ಮತ್ತು ಪಾಠಶಾಲೆಗಳಾಗಿ ವಿಶ್ವವಿದ್ಯಾಲಯದ ವಿಶೇಷ ಅವಕಾಶಗಳಿಗೆ ಸೇರಿಸಿಕೊಳ್ಳುವುದು.

(18) ತನ್ನ ಪ್ರಾಧ್ಯಾಪಕರುಗಳು ಮತ್ತು ಇತರ ಬೋಧಕರು ಮತ್ತು ವಿಭಾಗಗಳು ಮತ್ತು ವಿಶೇಷ ಸಂಶೋಧನಾ ಸಂಸ್ಥೆಗಳ ಮೂಲಕ ಆ ಸಂಯೋಜಿತ ಕಾಲೇಜುಗಳು/ಮಹಾಪಾಠ ಶಾಲೆಗಳು/ಪಾಠಶಾಲೆಗಳಿಗೆ ಅಗತ್ಯವಾಗಬಹುದಾದಂಥ ಬೋಧನೆ ಮತ್ತು ಮಾರ್ಗದರ್ಶನವನ್ನು ಒದಗಿಸುವುದು.

(19) ವಿಶ್ವವಿದ್ಯಾಲಯದ ಮೇಲ್ಕಂಡ ಧ್ಯೇಯೋದ್ದೇಶಗಳಿಗೆ ಸಂಬಂಧಪಟ್ಟ ಅಥವಾ ಪ್ರಾಸಂಗಿಕವಾದ ಇತರೆ ಯಾವುದೇ ಚಟುವಟಿಕೆಗಳನ್ನು ಕೈಗೊಳ್ಳುವುದು.

(20) ಯಾವುದೇ ವಿದ್ಯಾಸಂಸ್ಥೆಗೆ, ಯಾವುದೇ ಉದ್ದೇಶಕ್ಕಾಗಿ ಪೂರ್ಣವಾಗಿ ಅಥವಾ ಭಾಗಶ: ಶಾಸನಗಳ ಮೂಲಕ ಕಾಲದಿಂದ ಕಾಲಕ್ಕೆ ನಿಯಮಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಮಾನ್ಯತೆ ನೀಡುವುದು ಮತ್ತು ಅದನ್ನು ನಿರ್ವಹಿಸಿಕೊಂಡು ಬರುವುದು ಹಾಗೂ ಅಂಥ ಮಾನ್ಯತೆಯನ್ನು ಹಿಂತೆಗೆದುಕೊಳ್ಳುವುದು.

(21) ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳನ್ನು ಉತ್ತೇಜಿಸುವ ಸಲುವಾಗಿ ಅವಶ್ಯವಾಗಬಹುದಾದ ಮೇಲೆ ಹೇಳಿದ ಅಧಿಕಾರಗಳಿಗೆ ಅವು ಪ್ರಾಸಂಗಿಕವಾಗಿರುವಂಥ ಅಥವಾ ಆಗಿರದಂಥ ಕಾರ್ಯಗಳನ್ನು ಅಥವಾ ಇತರ ಕೆಲಸಗಳನ್ನು ಮಾಡುವುದು;

(22) ಶಾಸನಗಳ ಮೂಲಕ ವಿಶ್ವವಿದ್ಯಾಲಯದ ಪ್ರಾಧಿಕಾರಗಳೆಂದು ಘೋಷಿಸಲಾದಂಥ ನಿಕಾಯಗಳನ್ನು ನಿರ್ವಹಿಸಿಕೊಂಡು ಬರುವುದು.

(23) (ಎ) ಸಾಹಿತ್ಯಕ್ಕೆ ದಾರಿಮಾಡಿಕೊಂಡುವಂಥ ಪೂರಕ ಶಿಕ್ಷಣವನ್ನು ನೀಡುವ

(ಬಿ) ದೂರ ಶಿಕ್ಷಣ ಅಥವಾ ಆನ್‌ಲೈನ್ ಶಿಕ್ಷಣ

(ಸಿ) ಪ್ರಸಾರಾಂಗ

(ಡಿ) ಮತ್ತು ಇನ್ನಾವುದಾದರೂ ಉದ್ದೇಶಗಳಿಗಾಗಿ

– ನಿರ್ದೇಶನಾಲಯಗಳನ್ನು ಸ್ಥಾಪಿಸುವುದು.

(24) ಪ್ರೌಢ ಸಂಶೋಧನೆಗಳನ್ನು ನಡೆಸುವುದಕ್ಕಾಗಿ ವಿವಿಧ ವಿದ್ಯಾ ವಿಷಯಗಳಲ್ಲಿ "ಅಧ್ಯಯನ ಪೀಠ"ಗಳನ್ನು ಸ್ಥಾಪಿಸುವುದು.

**5. ವಿಶ್ವವಿದ್ಯಾಲಯದ ಅಧಿಕಾರಗಳು.–** ವಿಶ್ವವಿದ್ಯಾಲಯವು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(1) ಪದವಿಗಳು, ಡಿಪ್ಲೊಮಾ ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರಾರಂಭಿಸುವುದು.

(2) ವಿಶ್ವವಿದ್ಯಾಲಯದಲ್ಲಿ ಅಥವಾ ನಿಯಮಿಸಲಾದ ಷರತ್ತುಗಳ ಮೇರೆಗೆ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದ ಇತರ ಯಾವುದೇ ಸಂಸ್ಥೆ ಅಥವಾ ಕೇಂದ್ರದಲ್ಲಿ ಸಂಶೋಧನೆಯನ್ನು ಪೂರೈಸಿದ ವ್ಯಕ್ತಿಗಳಿಗೆ ಧರ್ಮ, ಪಂಥ, ಜಾತಿ, ಲಿಂಗ, ವರ್ಗ ಅಥವಾ ಇವುಗಳಲ್ಲಿ ಯಾವುದನ್ನೂ ಗಣಿಸದೆ ಪದವಿಗಳು, ಡಿಪ್ಲೊಮಾ ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಯನ್ನು ಪ್ರದಾನ ಮಾಡುವುದು;

**ವಿವರಣೆ.–** ಈ ಖಂಡ ಮತ್ತು ಈ ಅಧಿನಿಯಮದ ಇತರ ಉಪಬಂಧಗಳ ಉದ್ದೇಶಕ್ಕಾಗಿ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದ ಸಂಸ್ಥೆ ಅಥವಾ ಕೇಂದ್ರ ಎಂದರೆ, ಸಂಬಂಧಪಟ್ಟ ಪ್ರಾಧಿಕಾರಗಳಿಂದ ಪೂರ್ವಾನುಮೋದನೆ ಪಡೆದ ತರುವಾಯ ವಿಶ್ವವಿದ್ಯಾಲಯದ ಉದ್ದೇಶಗಳನ್ನು ಈಡೇರಿಸುವ ಉದ್ದೇಶಕ್ಕಾಗಿ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದ, ಭಾರತದಲ್ಲಿರುವ ಅಥವಾ ಇತರ ದೇಶಗಳಲ್ಲಿರುವ ಒಂದು ಸಂಸ್ಥೆ ಅಥವಾ ಒಂದು ಕೇಂದ್ರ;

(3) ನಿಯಮಿಸಲಾದ ರೀತಿಯಲ್ಲಿ ಮತ್ತು ನಿಯಮಿಸಲಾದ ಷರತ್ತುಗಳ ಮೇರೆಗೆ ಗೌರವ ಪದವಿಗಳು ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು;

(4) ವಿದ್ಯಾರ್ಥಿ ನಿಲಯಗಳ ಮೇಲ್ವಿಚಾರಣೆ ನಡೆಸುವುದು ಮತ್ತು ನಿಯಂತ್ರಿಸುವುದು ಮತ್ತು ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಲ್ಲಿ ಶಿಸ್ತು ಮೂಡುವಂತೆ ಮಾಡುವುದು ಮತ್ತು ಅವರ ಆರೋಗ್ಯ ಮತ್ತು ಸಾಮಾನ್ಯ ಕ್ಷೇಮಾಭಿವೃದ್ಧಿಗೆ ಉತ್ತೇಜನ ನೀಡಲು ವ್ಯವಸ್ಥೆಗಳನ್ನು ಮಾಡುವುದು;

(5) ವ್ಯಕ್ತಿಗಳಿಗೆ ನೀಡುವ ಯಾವುದೇ ಪದವಿ, ಡಿಪ್ಲೋಮಾ ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ತಡೆಹಿಡಿಯಬಹುದಾದ ಷರತ್ತುಗಳನ್ನು ನಿಯಮಿಸುವುದು.

(6) ಕಾಲಕಾಲಕ್ಕೆ ನಿಯಮಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ, ವಿಶ್ವವಿದ್ಯಾಲಯವು ಹೊಂದಿರುವಂಥವೇ ಉದ್ದೇಶಗಳು ಮತ್ತು ಗುರಿಗಳ ಉತ್ತೇಜನೆಯನ್ನು ದೃಷ್ಟಿಯಲ್ಲಿರಿಸಿಕೊಂಡಿರುವ ಇತರ ಯಾವುದೇ ವಿಶ್ವವಿದ್ಯಾಲಯ, ಪ್ರಾಧಿಕಾರ ಅಥವಾ ಸಂಘ ಅಥವಾ ಸಾರ್ವಜನಿಕ ಅಥವಾ ಖಾಸಗಿ ನಿಕಾಯದೊಂದಿಗೆ ಸಹಕರಿಸುವುದು;

(7) ಸಂಶೋದನೆ ಮತ್ತು ಪ್ರಸಾರಾಂಗದ ಸಲುವಾಗಿ ವಿಶ್ವವಿದ್ಯಾಲಯದ ಗ್ರಂಥಾಲಯಗಳು, ಸಂಶೋಧನಾ ಕೇಂದ್ರಗಳು, ಸಂಗ್ರಹಾಲಯಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು;

(8) ಸಂಶೋಧನಾ ಹುದ್ದೆಗಳನ್ನು ಸೃಜಿಸುವುದು ಮತ್ತು ಅಂಥ ಹುದ್ದೆಗಳಿಗೆ ವ್ಯಕ್ತಿಗಳನ್ನು ನೇಮಿಸುವುದು;

(9) ನಿಯಮಿಸಲಾದ ರೀತಿಯಲ್ಲಿ ಪ್ರವಾಸೀ ಸಂಶೋಧನಾ ವೇತನಗಳು, ವಿದ್ಯಾರ್ಥಿ ವೇತನಗಳು, ಪದಕಗಳು ಮತ್ತು ಬಹುಮಾನಗಳೂ ಸೇರಿದಂತೆ ಸಂಶೋಧನಾ ವೇತನಗಳನ್ನು ಪ್ರಾರಂಭಿಸುವುದು ಮತ್ತು ಅವುಗಳನ್ನು ನೀಡುವುದು;

(10) ಅನುದಾನ, ಮರಣ ಶಾಸನ, ದಾನ ಅಥವಾ ಅನ್ಯಥಾ ಮೂಲತ: ವಿಶ್ವವಿದ್ಯಾಲಯದಲ್ಲಿ ನಿಹಿತವಾಗಿರಬಹುದಾದ ಯಾವುದೇ ದತ್ತಿಗಳು, ದೇಣಿಗೆಗಳು ಅಥವಾ ನಿಧಿಗಳನ್ನು ಒಪ್ಪಿಕೊಳ್ಳುವುದು, ಪಡೆಯುವುದು ಮತ್ತು ನಿರ್ವಹಿಸುವುದು ಮತ್ತು ಅದು ಸೂಕ್ತವೆಂದು ಭಾವಿಸಬಹುದಾದಂಥ ರೀತಿಯಲ್ಲಿ ಅಂಥ ದತ್ತಿಗಳು, ದೇಣಿಗೆಗಳು ಅಥವಾ ನಿಧಿಗಳನ್ನು ತೊಡಗಿಸಬಹುದು:

ಪರಂತು, ಸರ್ಕಾರದ ಪೂರ್ವಾನುಮೋದನೆಯನ್ನು ಪಡೆದ ಹೊರತು, ವಿಶ್ವವಿದ್ಯಾಲಯವು ವಿದೇಶದಿಂದ, ವಿದೇಶಿ ಪ್ರತಿಷ್ಠಾನಗಳು ಮತ್ತು ಅಂಥ ದೇಶದ ಯಾವುದೇ ವ್ಯಕ್ತಿಯಿಂದ ವಂತಿಗೆಗಳನ್ನು ಸ್ವೀಕರಿಸತಕ್ಕದ್ದಲ್ಲ.

(11) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗಾಗಿ ವಿದ್ಯಾರ್ಥಿನಿಲಯಗಳನ್ನು ಮತ್ತು ವಿಶ್ವವಿದ್ಯಾಲಯದ ಸಿಬ್ಬಂದಿಗಾಗಿ ವಸತಿಗಳನ್ನು ಸ್ಥಾಪಿಸುವುದು, ನಿರ್ವಹಿಸುವುದು ಅಥವಾ ಮಾನ್ಯತೆ ನೀಡುವುದು ಮತ್ತು ಅಂಥ ಯಾವುವೇ ಮಾನ್ಯತೆಗಳನ್ನು ಹಿಂತೆಗೆದುಕೊಳ್ಳುವುದು;

(12) ನಿಯಮಿಸಬಹುದಾದಂತೆ ಶುಲ್ಕವನ್ನು ನಿಗದಿಪಡಿಸುವುದು ಮತ್ತು ಅಂಥ ಶುಲ್ಕವನ್ನು ಕೇಳುವುದು ಹಾಗೂ ಸ್ವೀಕರಿಸುವುದು;

(13) ವಿಶ್ವವಿದ್ಯಾಲಯದ ದತ್ತಿಗಳು ಮತ್ತು ಇತರ ಸ್ವತ್ತುಗಳು ಹಾಗೂ ನಿಧಿಗಳನ್ನು ಧಾರಣ ಮಾಡುವುದು ಮತ್ತು ನಿರ್ವಹಿಸುವುದು;

(14) ಸರ್ಕಾರದ ಅನುಮೋದನೆಯೊಂದಿಗೆ ವಿಶ್ವವಿದ್ಯಾಲಯದ ಉದ್ದೇಶಗಳಿಗಾಗಿ ವಿಶ್ವವಿದ್ಯಾಲಯದ ಸ್ವತ್ತಿನ ಭದ್ರತೆಯ ಮೇಲೆ ಹಣವನ್ನು ಸಾಲ ಪಡೆಯುವುದು; ಮತ್ತು

(15) ವಿಶ್ವವಿದ್ಯಾಲಯದ ಗುರಿಗಳನ್ನು ಉತ್ತೇಜಿಸುವ ಉದ್ದೇಶಕ್ಕಾಗಿ, ವಿಶ್ವವಿದ್ಯಾಲಯದ ಅಡಿಯಲ್ಲಿ ಬರುವ ಯಾವುದೇ ಸಂಸ್ಥೆಯ ವ್ಯವಸ್ಥಾಪನೆಯನ್ನು ವಹಿಸಿಕೊಳ್ಳುವುದು ಮತ್ತು ಅದರ ಎಲ್ಲ ಹಕ್ಕುಗಳು ಮತ್ತು ದಾಯಿತ್ವಗಳನ್ನು ವಶಕ್ಕೆ ತೆಗೆದುಕೊಳ್ಳುವುದೂ ಸೇರಿದಂತೆ ಇತರ ನಿಕಾಯಗಳು ಅಥವಾ ವ್ಯಕ್ತಿಗಳೊಂದಿಗೆ ಕರಾರು ಮಾಡಿಕೊಳ್ಳುವುದು.

**6. ವಿಶ್ವವಿದ್ಯಾಲಯಕ್ಕೆ ಪ್ರವೇಶ.**- (1) ಈ ಅಧಿನಿಯಮದ ಮತ್ತು ಶಾಸನಗಳ ಉಪಬಂಧಗಳಿಗೆ ಒಳಪಟ್ಟು ವಿಶ್ವವಿದ್ಯಾಲಯಕ್ಕೆ ಎಲ್ಲ ವ್ಯಕ್ತಿಗಳಿಗೂ ಮುಕ್ತ ಪ್ರವೇಶವಿರತಕ್ಕದ್ದು.

(2) (1)ನೇ ಉಪ-ಪ್ರಕರಣದಲ್ಲಿರುವುದಾವುದೂ,-

(ಎ) ನಿಯಮಿಸಲಾದ ಶೈಕ್ಷಣಿಕ ವಿದ್ಯಾರ್ಹತೆಯನ್ನು ಅಥವಾ ಗುಣಮಟ್ಟವನ್ನು ಹೊಂದಿರದ ಯಾವೊಬ್ಬ ವ್ಯಕ್ತಿಗೆ ಯಾವುದೇ ಅಧ್ಯಯನ ಕ್ರಮಕ್ಕೆ ಪ್ರವೇಶ ನೀಡಲು;

(ಬಿ) ಪದವಿ, ಡಿಪ್ಲೊಮಾ ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಯನ್ನು ನೀಡಲು ಅಗತ್ಯವಿರುವ ಕನಿಷ್ಠ ಮಟ್ಟಕ್ಕಿಂತ ಕಡಿಮೆಯ ಶೈಕ್ಷಣಿಕ ಪ್ರಗತಿಯನ್ನು ತೋರಿಸುವ ಯಾವೊಬ್ಬ ವಿದ್ಯಾರ್ಥಿಯನ್ನು ವಿಶ್ವವಿದ್ಯಾಲಯದ ಹಾಜರಿಪಟ್ಟಿಯಲ್ಲಿ ಉಳಿಸಿಕೊಳ್ಳಲು; ಅಥವಾ

(ಸಿ) ವಿಶ್ವವಿದ್ಯಾಲಯದ ಹಿತಾಸಕ್ತಿಗೆ ಅಥವಾ ಇತರ ವಿದ್ಯಾರ್ಥಿಗಳು ಮತ್ತು ಬೋಧಕರ ಹಕ್ಕುಗಳು ಮತ್ತು ವಿಶೇಷಾಧಿಕಾರಗಳಿಗೆ ಪ್ರತಿಕೂಲವಾದ ನಡತೆಯುಳ್ಳ ಯಾವೊಬ್ಬ ವ್ಯಕ್ತಿಗೆ ಪ್ರವೇಶ ನೀಡಲು ಅಥವಾ ಯಾವೊಬ್ಬ ವಿದ್ಯಾರ್ಥಿಯನ್ನು ಉಳಿಸಿಕೊಳ್ಳಲು;

- ವಿಶ್ವವಿದ್ಯಾಲಯವನ್ನು ಅಗತ್ಯಪಡಿಸತಕ್ಕದ್ದಲ್ಲ.

**7. ಅಧಿಕಾರಕ್ಷೇತ್ರ ಮತ್ತು ವಿಶೇಷಾಧಿಕಾರಗಳಿಗೆ ಪ್ರವೇಶ.-** ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000 ರಲ್ಲಿ (2001ರ ಕರ್ನಾಟಕ ಅಧಿನಿಯಮ 29) ಏನೇ ಇದ್ದರೂ,-

(i) ವಿಶ್ವವಿದ್ಯಾಲಯದ ಅಧಿಕಾರಕ್ಷೇತ್ರವು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪ್ತವಾಗತಕ್ಕದ್ದು;

(ii) ಕರ್ನಾಟಕ ರಾಜ್ಯದಲ್ಲಿರುವ ಸಂಸ್ಕೃತ ಮತ್ತು ವೇದ ಶಿಕ್ಷಣ ನೀಡುವ ಯಾವುದೇ ಕಾಲೇಜು, ವಿಶ್ವವಿದ್ಯಾಲಯದ ಒಪ್ಪಿಗೆ ಮತ್ತು ಸರ್ಕಾರದ ಮಂಜೂರಾತಿಯೊಂದಿಗೆ ಹೊರತು ಭಾರತದಲ್ಲಿರುವ ಅಥವಾ ವಿದೇಶದಲ್ಲಿರುವ ಯಾವುದೇ ಇತರ ವಿಶ್ವವಿದ್ಯಾಲಯದ ಜೊತೆಯಲ್ಲಿ ಯಾವುದೇ ರೀತಿಯಲ್ಲಿ ಸಂಬಂಧ ಹೊಂದಿರತಕ್ಕದ್ದಲ್ಲ ಅಥವಾ ಅದರ ವಿಶೇಷಾಧಿಕಾರಗಳಿಗೆ ಪ್ರವೇಶ ಕೋರತಕ್ಕದ್ದಲ್ಲ;

(iii) ರಾಜ್ಯದಲ್ಲಿರುವ ಯಾವುದೇ ಸಂಸ್ಕೃತ ಮತ್ತು ವೇದ ಕಾಲೇಜು ಅಥವಾ ಸಂಸ್ಕೃತ ಮತ್ತು ವೇದ ಶಿಕ್ಷಣ ನೀಡುವ ಸಂಸ್ಥೆಯು, ಗೊತ್ತುಪಡಿಸಿದ ದಿನಾಂಕಕ್ಕೆ ಮೊದಲು ಇತರ ವಿಶ್ವವಿದ್ಯಾಲಯದಿಂದ ಪಡೆಯುತ್ತಿದ್ದಂಥ ಯಾವುದೇ ವಿಶೇಷಾಧಿಕಾರವನ್ನು, ಅಂಥ ದಿನಾಂಕದಿಂದ ಜಾರಿಗೆ ಬರುವಂತೆ ಹಿಂದಕ್ಕೆ ಪಡೆಯಲಾಗಿದೆ ಎಂದು ಭಾವಿಸತಕ್ಕದ್ದು;

(iv) ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಂದು ಮತ್ತು ದಿನಾಂಕದಿಂದ ಜಾರಿಗೆ ಬರುವಂತೆ, ಈ ಹಿಂದೆ ಕರ್ನಾಟಕ, ಮೈಸೂರು, ಬೆಂಗಳೂರು, ತುಮಕೂರು, ಗುಲಬರ್ಗಾ, ಮಂಗಳೂರು, ಮಹಿಳಾ ಮತ್ತು ಕುವೆಂಪು ವಿಶ್ವವಿದ್ಯಾಲಯಗಳ ವಿಶೇಷಾಧಿಕಾರಕ್ಕೆ ಪ್ರವೇಶ ಪಡೆದುಕೊಂಡಿದ್ದ ಅಥವಾ ಸಂಯೋಜಿತವಾಗಿದ್ದ ಎಲ್ಲಾ ಕಾಲೇಜುಗಳು ಮತ್ತು ಸ್ನಾತಕೋತ್ತರ ವಿಭಾಗಗಳೂ ಸೇರಿದಂತೆ ಸಂಸ್ಕೃತ- ವೇದ ಶಿಕ್ಷಣ ನೀಡುತ್ತಿರುವ ಸ್ವಾಯತ್ತ ಸಂಸ್ಥೆಗಳಿಗೆ, ಈ ವಿಶ್ವವಿದ್ಯಾಲಯದ ವಿಶೇಷಾಧಿಕಾರಗಳಿಗೆ ಪ್ರವೇಶ ನೀಡಲಾಗಿದೆ ಎಂದು ಅಥವಾ ಅವನ್ನು ಈ ವಿಶ್ವವಿದ್ಯಾಲಯಕ್ಕೆ ಸಂಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

**8. ಪರಿಶೀಲನೆ.-** (1) ಕುಲಾಧಿಪತಿಯವರು, ತಾವು ನಿರ್ದೇಶಿಸಬಹುದಾದಂಥ ವ್ಯಕ್ತಿ ಅಥವಾ ವ್ಯಕ್ತಿಗಳಿಂದ, ವಿಶ್ವವಿದ್ಯಾಲಯ, ಅದರ ಕಟ್ಟಡಗಳು, ವಿಶ್ವವಿದ್ಯಾಲಯದ ಗ್ರಂಥಾಲಯಗಳು, ಸಂಗ್ರಹಾಲಯಗಳು ಮತ್ತು ಉಪಕರಣಗಳು ಮತ್ತು ವಿಶ್ವವಿದ್ಯಾಲಯದಿಂದ ನಿರ್ವಹಿಸಲಾದ ಅಥವಾ ಮಾನ್ಯತೆ ಪಡೆದ ಯಾವುವೇ ಸಂಸ್ಥೆಗಳು ಮತ್ತು ವಿಶ್ವವಿದ್ಯಾಲಯದಿಂದ ನಡೆಸಲಾದ ಅಥವಾ ಮಾಡಲಾದ ಸಂಶೋಧನೆ, ಬೋಧನೆ ಮತ್ತು ಇತರ ಕೆಲಸದ ಪರಿಶೀಲನೆ ನಡೆಸುವಂತೆ ಮಾಡಲು ಅಥವಾ ವಿಚಾರಣೆ ಮಾಡುವಂತೆ ಮಾಡಲು ಹಕ್ಕು ಹೊಂದಿರತಕ್ಕದ್ದು ಹಾಗೂ ವಿಶ್ವವಿದ್ಯಾಲಯಕ್ಕೆ ಸಂಬಂಧಿಸಿದ ಯಾವುದೇ ವಿಷಯದ ಬಗ್ಗೆ ವಿಚಾರಣೆ ನಡೆಸುವಂತೆ ಮಾಡತಕ್ಕದ್ದು. ಕುಲಾಧಿಪತಿಯವರು, ಪ್ರತಿಯೊಂದು ಸಂದರ್ಭದಲ್ಲೂ ಅಂಥ ಪರಿಶೀಲನೆ ಅಥವಾ ವಿಚಾರಣೆ ನಡೆಸುವ ತಮ್ಮ ಆಶಯದ ಬಗ್ಗೆ ವಿಶ್ವವಿದ್ಯಾಲಯಕ್ಕೆ ನೋಟೀಸು ನೀಡತಕ್ಕದ್ದು ಮತ್ತು ವಿಶ್ವವಿದ್ಯಾಲಯವು ಅಲ್ಲಿ ಪ್ರಾತಿನಿಧ್ಯ ಪಡೆಯಲು ಹಕ್ಕುಳ್ಳದ್ದಾಗಿರತಕ್ಕದ್ದು.

(2) ಕುಲಾಧಿಪತಿಯವರು, ಅಂಥ ಪರಿಶೀಲನೆ ಅಥವಾ ವಿಚಾರಣೆಯ ಪರಿಣಾಮಗಳ ಸಂಬಂಧದಲ್ಲಿ ತಮ್ಮ ಅಭಿಪ್ರಾಯಗಳನ್ನು ಪ್ರಶಾಸನ ಸಭೆಗೆ ತಿಳಿಸತಕ್ಕದ್ದು ಮತ್ತು ಅದರ ಮೇಲಣ ಪ್ರಶಾಸನ ಸಭೆಯ ಅಭಿಪ್ರಾಯವನ್ನು ಖಚಿತಪಡಿಸಿಕೊಂಡ ತರುವಾಯ ಕೈಗೊಳ್ಳಬೇಕಾದ ಕ್ರಮದ ಬಗ್ಗೆ ವಿಶ್ವವಿದ್ಯಾಲಯಕ್ಕೆ ಸಲಹೆ ನೀಡತಕ್ಕದ್ದು ಮತ್ತು ಅಂಥ ಕ್ರಮವನ್ನು ಕೈಗೊಳ್ಳುವುದಕ್ಕೆ ಕಾಲಮಿತಿಯನ್ನು ನಿಗದಿಪಡಿಸಬಹುದು.

(3) ಪ್ರಶಾಸನ ಸಭೆಯು ಅಂಥ ಪರಿಶೀಲನೆ ಅಥವಾ ವಿಚಾರಣೆಯ ಫಲಿತಾಂಶಗಳ ಬಗ್ಗೆ ತಾನು ತೆಗೆದುಕೊಳ್ಳಬೇಕೆಂದು ಉದ್ದೇಶಿಸಲಾದ ಅಥವಾ ತೆಗೆದುಕೊಳ್ಳಲಾದ ಕ್ರಮ, ಯಾವುದಾದರೂ ಇದ್ದಲ್ಲಿ, ಆ ಬಗ್ಗೆ ಕುಲಾಧಿಪತಿಯವರಿಗೆ ವರದಿ ಸಲ್ಲಿಸತಕ್ಕದ್ದು. ಅಂಥ ವರದಿಯನ್ನು ಕುಲಾಧಿಪತಿಯವರು ನಿರ್ದೇಶಿಸ ಬಹುದಾದಂಥ ಕಾಲದೊಳಗೆ ಸಲ್ಲಿಸತಕ್ಕದ್ದು.

(4) ಪ್ರಶಾಸನ ಸಭೆಯು, (2)ನೇ ಉಪ-ಪ್ರಕರಣದ ಅಡಿಯಲ್ಲಿ ನಿಗದಿಪಡಿಸಬಹುದಾದ ಕಾಲಮಿತಿಯೊಳಗೆ ಕುಲಾಧಿಪತಿಯವರಿಗೆ ಸಮಾಧಾನವಾಗುವಂತೆ ಕ್ರಮಕೈಗೊಳ್ಳದಿರುವಲ್ಲಿ, ಕುಲಾಧಿಪತಿಯವರು, ಪ್ರಶಾಸನ ಸಭೆಯು ಸಲ್ಲಿಸಿದ ವಿವರಣೆ ಅಥವಾ ಮಾಡಿಕೊಂಡ ಮನವಿಯನ್ನು ಪರಿಗಣಿಸಿದ ತರುವಾಯ, ತಾವು ಉಚಿತವೆಂದು ಭಾವಿಸಬಹುದಾದಂಥ ನಿರ್ದೇಶನಗಳನ್ನು ಹೊರಡಿಸಬಹುದು ಪ್ರಶಾಸನ ಸಭೆಯು ಅಂಥ ನಿರ್ದೇಶನಗಳನ್ನು ಪಾಲಿಸತಕ್ಕದ್ದು. ಪ್ರಶಾಸನ ಸಭೆಯು, ಕುಲಾಧಿಪತಿಯವರು ಆ ಬಗ್ಗೆ ನಿಗದಿಪಡಿಸಿದ ಅಂಥ ಕಾಲದೊಳಗಾಗಿ ಅಂಥ ನಿರ್ದೇಶನಗಳನ್ನು ಪಾಲಿಸದಿದ್ದ ಪಕ್ಷದಲ್ಲಿ, ಕುಲಾಧಿಪತಿಯವರು, ಅಂಥ ನಿರ್ದೇಶನಗಳನ್ನು ಪಾಲಿಸುವುದಕ್ಕಾಗಿ ಯಾವೊಬ್ಬ ವ್ಯಕ್ತಿ ಅಥವಾ ನಿಕಾಯವನ್ನು ನೇಮಿಸಲು ಅಧಿಕಾರವನ್ನು ಹೊಂದಿರತಕ್ಕದ್ದು ಮತ್ತು ಆ ಬಗೆಗಿನ ವೆಚ್ಚಗಳಿಗಾಗಿ ಅವಶ್ಯಕವಾಗಬಹುದಾದ ಅಂಥ ಆದೇಶಗಳನ್ನು ಹೊರಡಿಸಬಹುದು.

(5) ರಾಜ್ಯ ಸರ್ಕಾರವು, ರಾಜ್ಯಪತ್ರದಲ್ಲಿ ಆದೇಶವನ್ನು ಪ್ರಕಟಿಸುವ ಮೂಲಕ ವಿಶ್ವವಿದ್ಯಾಲಯದ ಯಾವುದೇ ಆದೇಶ, ಅಧಿಸೂಚನೆ, ನಿರ್ಣಯ ಅಥವಾ ಯಾವುದೇ ವ್ಯವಹರಣೆಗಳು ಈ ಅಧಿನಿಯಮದ ಅಥವಾ ಶಾಸನಗಳು, ವಿನಿಯಮಗಳು

ಅಥವಾ ಅಧ್ಯಾದೇಶಗಳ ಉಪಬಂಧಗಳಿಗೆ ಅನುಸಾರವಾಗಿ ಇಲ್ಲವೆಂದು ಅಥವಾ ಅನ್ಯಥಾ ರಾಜ್ಯ ಸರ್ಕಾರದ ನೀತಿಗಳಿಗೆ ಅಸಂಗತವಾಗಿವೆ ಎಂದು ಅಭಿಪ್ರಾಯ ಪಟ್ಟಲ್ಲಿ ಅವುಗಳನ್ನು ರದ್ದುಗೊಳಿಸಬಹುದು.

ಪರಂತು, ಅಂಥ ಯಾವುದೇ ಆದೇಶವನ್ನು ಮಾಡುವುದಕ್ಕೆ ಮೊದಲು ರಾಜ್ಯ ಸರ್ಕಾರವು ವಿಶ್ವವಿದ್ಯಾಲಯಕ್ಕೆ ತನ್ನ ಅಹವಾಲು ಹೇಳಿಕೊಳ್ಳಲು ಒಂದು ಅವಕಾಶವನ್ನು ನೀಡತಕ್ಕದ್ದು.

(6) (5)ನೇ ಉಪಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಆದೇಶವನ್ನು ಅದನ್ನು ಹೊರಡಿಸಿದ ತರುವಾಯ ಸಾಧ್ಯವಾದಷ್ಟು ಬೇಗನೇ ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದು.

## ಅಧ್ಯಾಯ – III

## ವಿಶ್ವವಿದ್ಯಾಲಯದ ಅಧಿಕಾರಿಗಳು

**9. ವಿಶ್ವವಿದ್ಯಾಲಯದ ಅಧಿಕಾರಿಗಳು.–** ವಿಶ್ವವಿದ್ಯಾಲಯವು ಈ ಮುಂದಿನ ಅಧಿಕಾರಿಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(1) ಕುಲಾಧಿಪತಿಯವರು,

(2) ಸಹಕುಲಾಧಿಪತಿಯವರು,

(3) ಕುಲಪತಿಯವರು,

(4) ಫ್ಯಾಕಲ್ಟಿಗಳ ಡೀನ್‌ರವರು,

(5) ಕುಲಸಚಿವರು,

(6) ಹಣಕಾಸು ಅಧಿಕಾರಿ ಮತ್ತು

(7) ವಿಶ್ವವಿದ್ಯಾಲಯದ ಅಧಿಕಾರಿಗಳೆಂದು ಶಾಸನಗಳಿಂದ ಘೋಷಿತರಾಗಬಹುದಾದಂಥ ಇತರ ವ್ಯಕ್ತಿಗಳು.

**10. ಕುಲಾಧಿಪತಿಯವರು.–** (1) ಕರ್ನಾಟಕದ ರಾಜ್ಯಪಾಲರು ಈ ವಿಶ್ವವಿದ್ಯಾಲಯದ ಕುಲಾಧಿಪತಿಯಾಗಿರತಕ್ಕದ್ದು, ಅವರು ತಮ್ಮ ಪದದ ಆಧಾರದಿಂದ ವಿಶ್ವವಿದ್ಯಾಲಯದ ಮುಖ್ಯಸ್ಥರಾಗಿರತಕ್ಕದ್ದು ಮತ್ತು ಅವರು ಹಾಜರಿದ್ದಾಗ, ವಿಶ್ವವಿದ್ಯಾಲಯದ ಯಾವುದೇ ಘಟಿಕೋತ್ಸವದ ಅಧ್ಯಕ್ಷರಾಗಿರತಕ್ಕದ್ದು ಮತ್ತು ಪದವಿಗಳು, ಡಿಪ್ಲೋಮ ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಅವುಗಳನ್ನು ಸ್ವೀಕರಿಸಲು ಹಕ್ಕುಳ್ಳ ವ್ಯಕ್ತಿಗಳಿಗೆ ಪ್ರದಾನ ಮಾಡತಕ್ಕದ್ದು.

(2) ಪ್ರಾಧಿಕಾರಗಳಿಗೆ ವ್ಯಕ್ತಿಗಳನ್ನು ನಾಮನಿರ್ದೇಶನ ಮಾಡಲು ಕುಲಾಧಿಪತಿಯವರಿಗೆ ಅಧಿಕಾರವನ್ನು ಪ್ರದತ್ತಗೊಳಿಸಿರುವಲ್ಲಿ ಕುಲಾಧಿಪತಿಯವರು ಸಾಕಷ್ಟು ಪ್ರಾತಿನಿಧ್ಯ ಪಡೆಯದ ಹಿತಾಸಕ್ತಿಗಳನ್ನು ಪ್ರತಿನಿಧಿಸಲು ಅವಶ್ಯಕವಿರುವಷ್ಟರಮಟ್ಟಿಗೆ ವ್ಯಕ್ತಿಗಳನ್ನು ನಾಮನಿರ್ದೇಶಿಸತಕ್ಕದ್ದು.

(3) ಕುಲಾಧಿಪತಿಯವರು ಸ್ವತಃ ತಾವೇ ಆಗಲಿ ಅಥವಾ ಅರ್ಜಿಯ ಮೇಲೆ ಆಗಲಿ ಯಾವುವೇ ವ್ಯವಹರಣೆಗಳ ಸಂಬಂಧದಲ್ಲಿ ಅಂಥ ವ್ಯವಹರಣೆಗಳ ಸಕ್ರಮತೆ ಅಥವಾ ಯಥಾರ್ಥತೆ, ಕೈಗೊಳ್ಳಲಾದ ಯಾವುದೇ ತೀರ್ಮಾನ ಅಥವಾ ಅದರಲ್ಲಿ ಜಾರಿ ಮಾಡಲಾದ ಆದೇಶದ ಕಾನೂನು ಸಮ್ಮತತೆ ಅಥವಾ ಔಚಿತ್ಯದ ಬಗ್ಗೆ ತಾವೇ ಮನದಟ್ಟು ಮಾಡಿಕೊಳ್ಳಲು ವಿಶ್ವವಿದ್ಯಾನಿಲಯದ ಯಾವೊಬ್ಬ ಅಧಿಕಾರಿ ಅಥವಾ ಯಾವುದೇ ಪ್ರಾಧಿಕಾರದ ದಾಖಲೆಗಳನ್ನು ತರಿಸಿಕೊಂಡು ಪರೀಕ್ಷಿಸಬಹುದು ಮತ್ತು ಯಾವುದೇ ಸಂದರ್ಭದಲ್ಲಿ, ಕುಲಾಧಿಪತಿಯವರಿಗೆ, ಅಂಥ ಯಾವುದೇ ತೀರ್ಮಾನ ಅಥವಾ ಆದೇಶವನ್ನು ಮಾರ್ಪಾಟುಗೊಳಿಸಬೇಕು, ರದ್ದುಗೊಳಿಸಬೇಕು, ವಿಪರ್ಯಯಗೊಳಿಸಬೇಕು ಅಥವಾ ಪುನರ್ ಪರಿಶೀಲನೆಗಾಗಿ ಹಿಂದಕ್ಕೆ ಕಳುಹಿಸಬೇಕೆಂದು ತೋರಿದರೆ, ಅವರು ತದನುಸಾರವಾಗಿ ಆದೇಶಗಳನ್ನು ಜಾರಿ ಮಾಡಬಹುದು:

ಪರಂತು, ಈ ಪ್ರಕರಣದ ಅಡಿಯಲ್ಲಿ ಅಧಿಕಾರಗಳನ್ನು ಚಲಾಯಿಸುವುದಕ್ಕಾಗಿ, ಪ್ರತಿಯೊಂದು ಅರ್ಜಿಯನ್ನು, ಅರ್ಜಿಯ ಸಂಬಂಧದಲ್ಲಿನ ವ್ಯವಹರಣೆ, ತೀರ್ಮಾನ ಅಥವಾ ಆದೇಶವನ್ನು ಅರ್ಜಿದಾರನಿಗೆ ತಿಳಿಸಿದ ದಿನಾಂಕದಿಂದ ಮೂರು ತಿಂಗಳೊಳಗೆ ಕುಲಾಧಿಪತಿಯವರಿಗೆ ಸಲ್ಲಿಸತಕ್ಕದ್ದು:

ಮತ್ತು ಪರಂತು, ಯಾವೊಬ್ಬ ವ್ಯಕ್ತಿಗೆ ಪ್ರತಿಕೂಲವಾದ ಯಾವುದೇ ಆದೇಶವನ್ನು ಅಂಥ ವ್ಯಕ್ತಿಗೆ ತನ್ನ ಮನವಿಯನ್ನು ಸಲ್ಲಿಸಲು ಅವಕಾಶವನ್ನು ನೀಡಿದ್ದ ಹೊರತು, ಜಾರಿ ಮಾಡತಕ್ಕದ್ದಲ್ಲ.

(4) ಕುಲಾಧಿಪತಿಯವರು, ಈ ಅಧಿನಿಯಮದಿಂದ ಅಥವಾ ಅದರ ಅಡಿಯಲ್ಲಿ ತಮಗೆ ಪ್ರದತ್ತಗೊಳಿಸಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

**11. ಸಹಕುಲಾಧಿಪತಿಯವರು.–** (1) ಕರ್ನಾಟಕ ರಾಜ್ಯದಲ್ಲಿ, ಉನ್ನತ ಶಿಕ್ಷಣ ಖಾತೆಯ ಪ್ರಭಾರ ಹೊಂದಿರುವ ಸಚಿವರು, ವಿಶ್ವವಿದ್ಯಾಲಯದ ಸಹಕುಲಾಧಿಪತಿಗಳಾಗಿರತಕ್ಕದ್ದು.

(2) ಸಹಕುಲಾಧಿಪತಿಯವರು, ಈ ಅಧಿನಿಯಮದಿಂದ ಅಥವಾ ಅದರ ಅಡಿಯಲ್ಲಿ ತಮಗೆ ಪ್ರದತ್ತವಾಗಬಹುದಾದಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

**12. ಕುಲಪತಿಯವರು.**- (1) (2)ನೇ ಉಪ ಪ್ರಕರಣದ ಅಡಿಯಲ್ಲಿ ಸರ್ಕಾರದ ಶಿಫಾರಸ್ಸಿನ ಮೇಲೆ ಕುಲಾಧಿಪತಿ ಅವರು ಕುಲಪತಿಯವರ ನೇಮಕಾತಿಯನ್ನು, ಮಾಡತಕ್ಕದ್ದು.

(2) (1)ನೇ ಉಪ ಪ್ರಕರಣದ ಉದ್ದೇಶಕ್ಕಾಗಿ, ಸರ್ಕಾರವು ಮೂವರು ವ್ಯಕ್ತಿಗಳನ್ನೊಳಗೊಂಡ ಒಂದು ಶೋಧನಾ ಸಮಿತಿಯನ್ನು ಸ್ಥಾಪಿಸತಕ್ಕದ್ದು; ಅವರುಗಳ ಪೈಕಿ ಒಬ್ಬರು ಕುಲಾಧಿಪತಿಯವರಿಂದ ನಾಮ ನಿರ್ದೇಶಿತರಾಗಿರತಕ್ಕದ್ದು. ಒಬ್ಬರು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ನಾಮನಿರ್ದೇಶಿತರಾಗಿರತಕ್ಕದ್ದು. ಹಾಗೂ ಒಬ್ಬರು ಸರ್ಕಾರದಿಂದ ನಾಮನಿರ್ದೇಶಿತರಾಗಿರತಕ್ಕದ್ದು. ಶೋಧನಾ ಸಮಿತಿಯು ಅಕಾರಾದಿ ಕ್ರಮದಲ್ಲಿ ಮೂವರು ವ್ಯಕ್ತಿಗಳ ಹೆಸರುಗಳನ್ನೊಳಗೊಂಡ ಪಟ್ಟಿಯೊಂದನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಅಂಥ ಪಟ್ಟಿಯು, ಸದರಿ ಸಮಿತಿಯ ಯಾವೊಬ್ಬ ಸದಸ್ಯನ ಹೆಸರನ್ನು ಒಳಗೊಂಡಿರತಕ್ಕದ್ದಲ್ಲ. ಸದರಿ ಪಟ್ಟಿಯಲ್ಲಿರುವ ಮೂವರು ವ್ಯಕ್ತಿಗಳ ಪೈಕಿ ಒಬ್ಬರ ಹೆಸರನ್ನು ಕುಲಪತಿಯಾಗಿ ನೇಮಕ ಮಾಡಲು ಸರ್ಕಾರವು ಕುಲಾಧಿಪತಿಯವರಿಗೆ ಶಿಫಾರಸ್ಸು ಮಾಡತಕ್ಕದ್ದು, ಅವಶ್ಯಕವಾದರೆ ಒಂದು ಹೊಸ ಪಟ್ಟಿಯನ್ನು ಶೋಧನಾ ಸಮಿತಿಯಿಂದ ಸರ್ಕಾರವು ಪಡೆಯಬಹುದು. ಆದರಂತೆ ಸರ್ಕಾರವು ಅಂಥ ಬೇಡಿಕೆಯನ್ನು ಸಲ್ಲಿಸಿದಾಗ ಶೋಧನಾ ಸಮಿತಿಯು ಹೊಸದಾಗಿ ಮೂವರು ವ್ಯಕ್ತಿಗಳ ಹೆಸರುಗಳನ್ನೊಳಗೊಂಡ ಒಂದು ಪಟ್ಟಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು:

ಪರಂತು,-

(ಎ) ಹಾಗೆ ನಾಮನಿರ್ದೇಶಿತನಾದ ವ್ಯಕ್ತಿಯು ವಿಶ್ವವಿದ್ಯಾಲಯದ ಯಾವುವೇ ಪ್ರಾಧಿಕಾರಗಳ ಸದಸ್ಯನಾಗಿರತಕ್ಕದ್ದಲ್ಲ;

(ಬಿ) ಕುಲಾಧಿಪತಿಯವರಿಂದ ಹಾಗೆ ನಾಮನಿರ್ದೇಶಿತನಾದ ವ್ಯಕ್ತಿಯು, ಸಮಿತಿಯ ಸಭೆಗಳನ್ನು ಸಮಾವೇಶಗೊಳಿಸತಕ್ಕದ್ದು;

(3) ಕುಲಪತಿಯವರು ನಾಲ್ಕು ವರ್ಷಗಳ ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು ಮತ್ತು ಮರು ನೇಮಕಗೊಳ್ಳಲು ಅರ್ಹರಾಗಿರತಕ್ಕದ್ದು:

ಪರಂತು,-

ಎ) ಅರವತ್ತೈದು ವರ್ಷ ವಯಸ್ಸಾದ ಯಾವೊಬ್ಬ ವ್ಯಕ್ತಿಯು ಕುಲಪತಿಯಾಗಿ ನೇಮಕವಾಗತಕ್ಕದ್ದಲ್ಲ ಅಥವಾ ಪದಧಾರಣ ಮಾಡತಕ್ಕದ್ದಲ್ಲ.

(ಬಿ) ಕುಲಪತಿಯವರು, ಕುಲಾಧಿಪತಿಯವರಿಗೆ, ಸ್ವತ: ಸಹಿ ಮಾಡಿದ ಪತ್ರ ಬರೆದು ಮತ್ತು ಎರಡು ತಿಂಗಳ ನೋಟೀಸನ್ನು ನೀಡಿದ ತರುವಾಯ ತಮ್ಮ ಪದಕ್ಕೆ ರಾಜೀನಾಮೆ ನೀಡಬಹುದು.

ಮತ್ತೂ ಪರಂತು, ಕುಲಪತಿಯಾಗಿ ನೇಮಕಗೊಂಡ ವ್ಯಕ್ತಿಯು, ತನ್ನ ಸೇವಾವಧಿಯಲ್ಲಿ ಅರವತ್ತೈದು ವರ್ಷಗಳು ಪೂರ್ಣಗೊಳಿಸಿದರೆ ಪದದಿಂದ ನಿವೃತ್ತರಾಗತಕ್ಕದ್ದು.

(4) ಕುಲತಿಯವರ ಹುದ್ದೆಯು ತಾತ್ಕಾಲಿಕವಾಗಿ ಖಾಲಿಯಾದಲ್ಲಿ ಅಥವಾ ಅವರ ರಜೆಯ ಕಾರಣದಿಂದಾಗಿ ಅಥವಾ ಇನ್ನಾವುದೇ ಕಾರಣಗಳಿಗಾಗಿ ಗೈರುಹಾಜರಾದಲ್ಲಿ ಅವರು ತಮ್ಮ ಪದದ ಅಧಿಕಾರಗಳನ್ನು ಚಲಾಯಿಸಲು ಅಥವಾ ಕರ್ತವ್ಯಗಳನ್ನು ನೆರವೇರಿಸಲು ಸಾಧ್ಯವಿಲ್ಲದಿದ್ದರೆ ವಿಶ್ವವಿದ್ಯಾಲಯದ ಅತ್ಯಂತ ಹಿರಿಯ ಪ್ರಾಧ್ಯಾಪಕರು, ಕುಲಾಧಿಪತಿಯವರ ಅನುಮೋದನೆ ಪಡೆದು ಕುಲಪತಿಯವರ ಕರ್ತವ್ಯಗಳನ್ನು ನಿರ್ವಹಿಸಬಹುದು.

(5) ಕುಲಪತಿಯವರನ್ನು, ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯಗತಗೊಳಿಸುವುದನ್ನು ಉದ್ದೇಶಪೂರ್ವಕವಾಗಿ ಬಿಟ್ಟುಬಿಟ್ಟಿದ್ದಾರೆ ಅಥವಾ ಕಾರ್ಯಗತಗೊಳಿಸಲು ನಿರಾಕರಿಸಿದ್ದಾರೆ ಅಥವಾ ಅವರಲ್ಲಿ ನಿಹಿತವಾದ ಅಧಿಕಾರಗಳನ್ನು ದುರುಪಯೋಗಪಡಿಸಿಕೊಂಡಿದ್ದಾರೆ ಎಂಬ ಕಾರಣದ ಮೇಲೆ ಮತ್ತು ರಾಜ್ಯ ಸರ್ಕಾರವು (6)ನೇ ಉಪ ಪ್ರಕರಣದ ಅಡಿಯಲ್ಲಿ ತಾನು ಆದೇಶಿಸಿದ್ದ ಒಂದು ವಿಚಾರಣೆಯ ವರದಿಯನ್ನು ಪರಿಗಣಿಸಿದ ನಂತರ ನೀಡಿದ ಸಲಹೆಯ ಮೇಲೆ ಕುಲಾಧಿಪತಿಯವರು ಹೊರಡಿಸಿದ ಆದೇಶದ ಮೂಲಕವಾಗಿ ಅಲ್ಲದೆ, ಅವರ ಹುದ್ದೆಯಿಂದ ತೆಗೆದುಹಾಕತಕ್ಕದ್ದಲ್ಲ.

(6) ಈ ಪ್ರಕರಣದ ಅಡಿಯಲ್ಲಿ ಒಂದು ವಿಚಾರಣೆಯನ್ನು ನಡೆಸುವ ಉದ್ದೇಶಕ್ಕಾಗಿ, ರಾಜ್ಯ ಸರ್ಕಾರವು, ಉಚ್ಚ ನ್ಯಾಯಾಲಯದ ಅಥವಾ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿರುವ ಅಥವಾ ಆಗಿದ್ದ ವ್ಯಕ್ತಿಯನ್ನು ನೇಮಕ ಮಾಡತಕ್ಕದ್ದು. ವಿಚಾರಣಾ ಪ್ರಾಧಿಕಾರವು, ಕುಲಪತಿಯವರಿಗೆ ತಮ್ಮ ಮನವಿಯನ್ನು ಸಲ್ಲಿಸಲು ಅವಕಾಶ ನೀಡಿದ ನಂತರ ವಿಚಾರಣೆ ನಡೆಸತಕ್ಕದ್ದು ಮತ್ತು ವಿಧಿಸಬೇಕಾದ ಯಾವುದೇ ದಂಡನೆ ಇದ್ದರೆ, ಅದೂ ಒಳಗೊಂಡಂತೆ ತೆಗೆದುಕೊಳ್ಳಬೇಕಾದ ಕ್ರಮದ ಬಗ್ಗೆ ಒಂದು ವರದಿಯನ್ನು ರಾಜ್ಯಸರ್ಕಾರಕ್ಕೆ ಸಲ್ಲಿಸತಕ್ಕದ್ದು. ರಾಜ್ಯಸರ್ಕಾರವು, ವರದಿಯನ್ನು ಪರಿಶೀಲಿಸಿದ ನಂತರ, ಕುಲಾಧಿಪತಿಯವರಿಗೆ ಸಲಹೆ ನೀಡತಕ್ಕದ್ದು. ಕುಲಾಧಿಪತಿಯವರು ಸಾಧ್ಯವಾದಷ್ಟುಮಟ್ಟಿಗೆ ಆರು ತಿಂಗಳೊಳಗಾಗಿ ಅಂಥ ಸಲಹೆಗೆ ಅನುಸಾರವಾಗಿ ಕ್ರಮ ಕೈಗೊಳ್ಳತಕ್ಕದ್ದು.

(7) ಕುಲಪತಿಯವರ ಉಪಲಬ್ಧಿಗಳು ಮತ್ತು ಇತರ ಸೇವಾ ಷರತ್ತುಗಳು ಕುಲಾಧಿಪತಿಯವರು ನಿರ್ಧರಿಸಬಹುದಾದಂತೆ ಇರತಕ್ಕದ್ದು ಮತ್ತು ಅವುಗಳನ್ನು ಅವರು ಕುಲಪತಿಯಾಗಿ ನೇಮಕವಾದ ತರುವಾಯ ಅವರಿಗೆ ಅನಾನುಕೂಲವಾಗುವಂತೆ ಬದಲಾಯಿಸತಕ್ಕದ್ದಲ್ಲ. ಕುಲಪತಿಯಾಗಿ ತಮ್ಮ ಅಧಿಕಾರಾವಧಿಯಲ್ಲಿರುವಾಗ ಕುಲಪತಿಯವರು ವಯೋನಿವೃತ್ತಿಯ ಮೇಲೆ ನಿವೃತ್ತರಾಗುವ ಸಂದರ್ಭದಲ್ಲಿ, ಈಗಾಗಲೇ ನಿರ್ಧರಿಸಲಾದ ಅವರ ಸೇವಾ ಷರತ್ತುಗಳು ಮುಂದುವರಿಯತಕ್ಕದ್ದು. ಅವರ ಎಲ್ಲ ನಿವೃತ್ತಿ ಸೌಲಭ್ಯಗಳನ್ನು ತಡೆಹಿಡಿಯತಕ್ಕದ್ದು, ಅವುಗಳನ್ನು ಅವರು ಕುಲಪತಿಯಾಗಿ ತಮ್ಮ ಅಧಿಕಾರ ಸ್ಥಾನವನ್ನು ತ್ಯಜಿಸಿದ ನಂತರ ಬಿಡುಗಡೆ ಮಾಡತಕ್ಕದ್ದು.

(8) ನಿವೃತ್ತರಾದ ಒಬ್ಬ ವ್ಯಕ್ತಿಯು, ಕುಲಪತಿಯಾಗಿ ನೇಮಕಗೊಂಡರೆ, ಅವರು ಕುಲಪತಿಯಾಗಿ ನೇಮಕಗೊಂಡ ಮೇಲೆ, ಅವರ ಉಪಲಬ್ಧಿಗಳೂ ಸೇರಿದಂತೆ ಅವರ ಸೇವಾ ನಿಬಂಧನೆ ಮತ್ತು ಷರತ್ತುಗಳನ್ನು ಕುಲಾಧಿಪತಿಯವರು ನಿರ್ಣಯಿಸತಕ್ಕದ್ದು. ಅವರು ಪಡೆಯುವ ನಿವೃತ್ತಿ ವೇತನದ ಮೊತ್ತವನ್ನು ಮತ್ತು ಭತ್ಯಗಳನ್ನು ಅವರ ಉಪಲಬ್ಧಿಗಳಿಂದ ಕಳೆಯತಕ್ಕದ್ದು.

(9) ರಾಜ್ಯದಲ್ಲಿನ ಒಂದು ವಿಶ್ವವಿದ್ಯಾಲಯದ ಸೇವೆಯಲ್ಲಿರುವ ಒಬ್ಬ ಪ್ರಾಧ್ಯಾಪಕರನ್ನು, ಕುಲಪತಿಯಾಗಿ ನೇಮಕ ಮಾಡಿದರೆ, ಅವರು ಕುಲಪತಿಯಾಗಿರುವಾಗಿನ ಪದಾವಧಿಯಲ್ಲಿ ಪ್ರಾಧ್ಯಾಪಕರಾಗಿ ಅವರ ಸೇವಾ ನಿಬಂಧನೆ ಮತ್ತು ಷರತ್ತುಗಳನ್ನು ಅವರಿಗೆ ಅನಾನುಕೂಲವಾಗುವಂತೆ ಪರಿಷ್ಕರಿಸತಕ್ಕದ್ದಲ್ಲ ಮತ್ತು ಅವರು ತಮ್ಮ ಹುದ್ದೆಯ ಧಾರಣಾಧಿಕಾರವನ್ನು ಉಳಿಸಿಕೊಳ್ಳತಕ್ಕದ್ದು.

**13. ಕುಲಪತಿಯವರ ಅಧಿಕಾರಗಳು ಮತ್ತು ಕರ್ತವ್ಯಗಳು.-** (1) ಕುಲಪತಿಯವರು ಶೈಕ್ಷಣಿಕ ಮುಖ್ಯಸ್ಥರು ಮತ್ತು ವಿಶ್ವವಿದ್ಯಾಲಯದ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾಗಿರತಕ್ಕದ್ದು ಮತ್ತು ಕುಲಾಧಿಪತಿಯವರು ಮತ್ತು ಸಹಕುಲಾಧಿಪತಿಯವರ ಗೈರುಹಾಜರಿಯಲ್ಲಿ, ವಿಶ್ವವಿದ್ಯಾಲಯದ ಯಾವುದೇ ಘಟಿಕೋತ್ಸವದ ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಪದವಿಗಳು, ಡಿಪ್ಲೊಮಾ ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು, ಅವುಗಳನ್ನು ಸ್ವೀಕರಿಸಲು ಹಕ್ಕುಳ್ಳವರಾಗಿರುವ ವ್ಯಕ್ತಿಗಳಿಗೆ ಪ್ರದಾನ ಮಾಡತಕ್ಕದ್ದು. ಅವರು ಪ್ರಶಾಸನ ಸಭೆಯ, ಪ್ರಶಿಕ್ಷಣ ಪರಿಷತ್ತಿನ ಹಾಗೂ ಹಣಕಾಸು ಸಮಿತಿಯ ಪದನಿಮಿತ್ತ ಸದಸ್ಯರಾಗಿದ್ದು ಅವುಗಳ ಅಧ್ಯಕ್ಷರಾಗಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಯಾವುದೇ ಸಭೆಯಲ್ಲಿ ಹಾಜರಿದ್ದು ಅಲ್ಲಿ ಭಾಷಣ ಮಾಡಲು ಹಕ್ಕುಳ್ಳವರಾಗಿರತಕ್ಕದ್ದು. ಆದರೆ ಅವರು, ಸಂಬಂಧಪಟ್ಟ ಪ್ರಾಧಿಕಾರದ ಒಬ್ಬ ಸದಸ್ಯರಾಗಿದ್ದ ಹೊರತು ಅಲ್ಲಿ ಮತ ನೀಡಲು ಹಕ್ಕುಳ್ಳವರಾಗಿರತಕ್ಕದ್ದಲ್ಲ.

(2) ಈ ಅಧಿನಿಯಮದ ಮತ್ತು ಶಾಸನಗಳ ಉಪಬಂಧಗಳನ್ನು ಪಾಲಿಸಲಾಗಿದೆ ಮತ್ತು ಅವುಗಳನ್ನು ನೆರವೇರಿಸಲಾಗಿದೆ ಎಂಬುದನ್ನು ಖಚಿತಪಡಿಸಿಕೊಳ್ಳುವುದು ಕುಲಪತಿಯವರ ಕರ್ತವ್ಯವಾಗಿರತಕ್ಕದ್ದು ಮತ್ತು ಈ ಉದ್ದೇಶಕ್ಕಾಗಿ ಅವರು ಅವಶ್ಯಕವಾದ ಎಲ್ಲ ಅಧಿಕಾರಗಳನ್ನು ಚಲಾಯಿಸಬಹುದು.

(3) ಕುಲಪತಿಯವರು ಪ್ರಶಾಸನ ಸಭೆ, ಪ್ರಶಿಕ್ಷಣ ಪರಿಷತ್ತು ಮತ್ತು ಹಣಕಾಸು ಸಮಿತಿಯ ಸಭೆಗಳನ್ನು ಸಮಾವೇಶಗೊಳಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

(4) (ಎ) ಕುಲಪತಿಯವರು ಯಾವುದೇ ವಿಷಯದ ಬಗ್ಗೆ ಕ್ರಮಕೈಗೊಳ್ಳಲು ಅಧಿಕಾರ ಹೊಂದಿರತಕ್ಕದ್ದು ಮತ್ತು ತಾವು ಅವಶ್ಯವೆಂದು ಭಾವಿಸುವಂಥ ಕ್ರಮವನ್ನು ಆದೇಶದ ಮೂಲಕ ಕೈಗೊಳ್ಳತಕ್ಕದ್ದು. ಆದರೆ, ತದನಂತರ ಸಾಧ್ಯವಾದಷ್ಟು ಬೇಗನೆ, ಕೈಗೊಳ್ಳಲಾದ ಕ್ರಮವನ್ನು, ವಿಷಯವನ್ನು ಸಾಮಾನ್ಯವಾಗಿ ವ್ಯವಹರಿಸುತ್ತಿದ್ದ ಅಧಿಕಾರಿ ಅಥವಾ ಪ್ರಾಧಿಕಾರ ಅಥವಾ ನಿಕಾಯಕ್ಕೆ ವರದಿ ಮಾಡತಕ್ಕದ್ದು:

ಪರಂತು, ಬಾಧಿತನಾಗುವ ಸಂಭವವಿರುವ ವ್ಯಕ್ತಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ನೀಡಿದ ಹೊರತು ಅಂಥ ಯಾವುದೇ ಆದೇಶವನ್ನು ಹೊರಡಿಸತಕ್ಕದ್ದಲ್ಲ.

(ಬಿ) ಈ ಉಪ-ಪ್ರಕರಣದ ಅಡಿಯಲ್ಲಿ ಕುಲಪತಿಯವರು ಕೈಗೊಂಡ ಕ್ರಮವು ವಿಶ್ವವಿದ್ಯಾಲಯದ ಸೇವೆಯಲ್ಲಿರುವ ಯಾವೊಬ್ಬ ವ್ಯಕ್ತಿಯನ್ನು ಬಾಧಿಸಿದಾಗ, ಅಂಥ ವ್ಯಕ್ತಿಯು, ಅಂಥ ಕ್ರಮದ ಬಗ್ಗೆ ನೋಟೀಸನ್ನು ತಾನು ಪಡೆದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಪ್ರಶಾಸನ ಸಭೆಗೆ ಒಂದು ಅಪೀಲನ್ನು ಸಲ್ಲಿಸಲು ಹಕ್ಕುಳ್ಳವನಾಗಿರತಕ್ಕದ್ದು. ಕುಲಪತಿಯವರು ಅಂಥ ಅಪೀಲಿನ ಮೇಲೆ ಪ್ರಶಾಸನ ಸಭೆಯು ಹೊರಡಿಸಿದ ಆದೇಶವನ್ನು ಜಾರಿತರತಕ್ಕದ್ದು.

(5) ಕುಲಪತಿಯವರು, ವಿಶ್ವವಿದ್ಯಾಲಯದ ಬೋಧಕರು ಮತ್ತು ಇತರ ಉದ್ಯೋಗಿಗಳ ನೇಮಕಾತಿ, ಅಮಾನತ್ತುಗೊಳಿಸುವಿಕೆ ಮತ್ತು ವಜಾ-ಇವುಗಳಿಗೆ ಸಂಬಂಧಿಸಿದಂತೆ ಪ್ರಶಾಸನ ಸಭೆಯ ಆದೇಶಗಳನ್ನು ಜಾರಿಗೊಳಿಸತಕ್ಕದ್ದು.

(6) ಕುಲಪತಿಯವರು, ವಿಶ್ವವಿದ್ಯಾಲಯದ ವ್ಯವಹಾರಗಳ ಮೇಲೆ ನಿಯಂತ್ರಣವನ್ನು ಹೊಂದಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದಲ್ಲಿ ಶಿಸ್ತನ್ನು ಯಥೋಚಿತವಾಗಿ ಪಾಲಿಸುವಂತೆ ನೋಡಿಕೊಳ್ಳಲು ಜವಾಬ್ದಾರರಾಗಿರತಕ್ಕದ್ದು.

(7) ಕುಲಪತಿಯವರು, ನಿಯಮಿಸಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**14. ಫ್ಯಾಕಲ್ಟಿಗಳ ಡೀನರು.–** (1) ಕುಲಪತಿಯವರು, ಪ್ರತಿಯೊಬ್ಬ ಡೀನ್‌ರನ್ನು, ಫ್ಯಾಕಲ್ಟಿಯಲ್ಲಿರುವ ಪ್ರಾಧ್ಯಾಪಕರ ಪೈಕಿಯಿಂದ, ಮೂರು ವರ್ಷಗಳ ಅವಧಿಗಾಗಿ ನೇಮಕ ಮಾಡತಕ್ಕದ್ದು ಮತ್ತು ಅವರು ಪುನರ್ ನೇಮಕಕ್ಕೆ ಅರ್ಹರಾಗಿರತಕ್ಕದ್ದು:

ಪರಂತು, ಫ್ಯಾಕಲ್ಟಿಯಲ್ಲಿ ಯಾವುದೇ ಕಾಲದಲ್ಲಿ ಪ್ರಾಧ್ಯಾಪಕರು ಇರದಿದ್ದರೆ, ಕುಲಪತಿಯವರು ಫ್ಯಾಕಲ್ಟಿಯ ಡೀನರ ಅಧಿಕಾರಗಳನ್ನು ಚಲಾಯಿಸತಕ್ಕದ್ದು.

(2) ಡೀನರ ಪದವು, ಖಾಲಿಯಾಗಿದ್ದಾಗ, ಅಥವಾ ಅನಾರೋಗ್ಯದ, ಗೈರುಹಾಜರಿಯ ಅಥವಾ ಇತರ ಯಾವುದೇ ಕಾರಣದಿಂದ ತಮ್ಮ ಪದದ ಕರ್ತವ್ಯಗಳನ್ನು ನಿರ್ವಹಿಸಲು ಅಸಮರ್ಥರಾದಾಗ, ಅವರ ಪದದ ಕರ್ತವ್ಯಗಳನ್ನು ಈ ಉದ್ದೇಶಕ್ಕಾಗಿ ಕುಲಪತಿಯವರು ನೇಮಕ ಮಾಡಬಹುದಾದಂಥ ವ್ಯಕ್ತಿಯು ನೆರವೇರಿಸತಕ್ಕದ್ದು.

(3) ಡೀನರು ಫ್ಯಾಕಲ್ಟಿಯ ಮುಖ್ಯಸ್ಥರಾಗಿರತಕ್ಕದ್ದು ಮತ್ತು ಫ್ಯಾಕಲ್ಟಿಯಲ್ಲಿ ಸಂಶೋಧನೆಯನ್ನು ನಡೆಸುವುದಕ್ಕೆ ಮತ್ತು ಗುಣಮಟ್ಟಗಳನ್ನು ಕಾಪಾಡಿಕೊಂಡುಬರುವುದಕ್ಕೆ ಹೊಣೆಗಾರರಾಗಿರತಕ್ಕದ್ದು. ಡೀನ್‌ರು ನಿಯಮಿಸಬಹುದಾದಂಥ ಪ್ರಕಾರ್ಯಗಳನ್ನು ಹೊಂದಿರತಕ್ಕದ್ದು.

ಡೀನರು ಸಂದರ್ಭಾನುಸಾರ ಅಧ್ಯಯನ ಮಂಡಳಿಗಳ ಅಥವಾ ಫ್ಯಾಕಲ್ಟಿಯ ಸಮಿತಿಯ ಯಾವುದೇ ಸಭೆಯಲ್ಲಿ ಹಾಜರಿರಲು ಮತ್ತು ಮಾತನಾಡಲು ಅಧಿಕಾರ ಹೊಂದಿರತಕ್ಕದ್ದು, ಆದರೆ ಅವರು ಅದರ ಸದಸ್ಯರಾಗಿದ್ದ ಹೊರತು ಮತ ನೀಡಲು ಅಧಿಕಾರ ಹೊಂದಿರತಕ್ಕದ್ದಲ್ಲ.

**15. ಕುಲಸಚಿವ.–** (1) ಕುಲಸಚಿವರು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು. ಸರ್ಕಾರವು, ಕರ್ನಾಟಕ ಆಡಳಿತ ಸೇವೆಗಳಿಗೆ ಸೇರಿದ, ಹಿರಿಯ ವೇತನ ಶ್ರೇಣಿಯ ಅಥವಾ ಅದಕ್ಕಿಂತ ಹೆಚ್ಚಿನ ಶ್ರೇಣಿಯ ಒಬ್ಬ ಅಧಿಕಾರಿಯನ್ನು ವಿಶ್ವವಿದ್ಯಾಲಯದ ಕುಲಸಚಿವರಾಗಿ ನೇಮಕ ಮಾಡಬಹುದು.

(2) ಕುಲಸಚಿವರು, ಪ್ರಶಾಸನ ಸಭೆ ಮತ್ತು ಪ್ರಶಿಕ್ಷಣ ಪರಿಷತ್ತಿನ ಪದನಿಮಿತ್ತ ಸದಸ್ಯ ಕಾರ್ಯದರ್ಶಿ ಮತ್ತು ಹಣಕಾಸು ಸಮಿತಿಯ ಸದಸ್ಯ ಆಗಿರತಕ್ಕದ್ದು.

(3) ಕುಲಸಚಿವರಿಗೆ ಒಬ್ಬರು ಅಥವಾ ಹೆಚ್ಚು ಉಪ–ಕುಲಸಚಿವರು ಹಾಗೂ ಸಹಾಯಕ ಕುಲಸಚಿವರುಗಳು ಸಹಾಯಕರಾಗಿರಬಹುದು.

**16. ಕುಲಸಚಿವರ ಅಧಿಕಾರಗಳು ಮತ್ತು ಕರ್ತವ್ಯಗಳು.–** (1) ಕುಲಸಚಿವರ ಸ್ಥಾನವು ಖಾಲಿಯಾದಾಗ ಅಥವಾ ಕುಲಸಚಿವರು, ಖಾಯಿಲೆ, ಗೈರು ಹಾಜರಿ ಅಥವಾ ಇನ್ನಾವುದೇ ಕಾರಣದಿಂದ ತನ್ನ ಸ್ಥಾನದ ಕರ್ತವ್ಯಗಳನ್ನು ನೆರವೇರಿಸುವುದು ಸಾಧ್ಯವಾಗದಿದ್ದಾಗ ಕುಲಸಚಿವರ ಕರ್ತವ್ಯಗಳನ್ನು ಉದ್ದೇಶವಾಗಿ ಕುಲಪತಿಯವರು ನೇಮಿಸಬಹುದಾದ ವ್ಯಕ್ತಿಯು ನೆರವೇರಿಸತಕ್ಕದ್ದು.

(2) (ಎ) ಕುಲಸಚಿವರು, ಪ್ರಶಾಸನ ಸಭೆಯ ಆದೇಶಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಬೋಧಕರು ಮತ್ತು ಶೈಕ್ಷಣಿಕ ಸಿಬ್ಬಂದಿಯ ಹೊರತಾಗಿ ಅಂಥ ನೌಕರರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಮತ್ತು ವಿಚಾರಣೆ ಇತ್ಯರ್ಥದಲ್ಲಿರುವಾಗ ಅಮಾನತುಗೊಳಿಸಲು, ಅವರಿಗೆ ಎಚ್ಚರಿಕೆ ನೀಡಲು ಅಥವಾ ಅವರಿಗೆ ವಾಗ್ದಂಡನೆ ಅಥವಾ ವೇತನ ಬಡ್ತಿಗಳನ್ನು ತಡೆಹಿಡಿಯಲು ಅಧಿಕಾರ ಹೊಂದಿರತಕ್ಕದ್ದು:

ಪರಂತು, ಈ ಸಂಬಂಧದಲ್ಲಿ ಕೈಗೊಳ್ಳಲು ಉದ್ದೇಶಿಸಿದ ಕ್ರಮದ ವಿರುದ್ಧ ಕಾರಣ ತೋರಿಸುವ ಸೂಕ್ತ ಅವಕಾಶವನ್ನು ಸಂಬಂಧಪಟ್ಟ ವ್ಯಕ್ತಿಗೆ ನೀಡಿದ ಹೊರತು, ಅಂಥ ಯಾವುದೇ ದಂಡವನ್ನು ವಿಧಿಸತಕ್ಕದ್ದಲ್ಲ.

(ಬಿ) (ಎ) ಖಂಡದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ದಂಡವನ್ನು ವಿಧಿಸುವ ಕುಲಸಚಿವರ ಆದೇಶದ ವಿರುದ್ಧ ಕುಲಾಧಿಪತಿಯವರಿಗೆ ಅಪೀಲನ್ನು ಸಲ್ಲಿಸಬಹುದು.

(ಸಿ) ಕುಲಸಚಿವರ ಅಧಿಕಾರಗಳಿಗೆ ಮೀರಿ ದಂಡ ವಿಧಿಸುವ ಅಗತ್ಯವಿದೆ ಎಂದು ವಿಚಾರಣೆಯಿಂದ ತಿಳಿದು ಬಂದ ಸಂದರ್ಭದಲ್ಲಿ, ಕುಲಸಚಿವರು, ವಿಚಾರಣೆಯಲ್ಲಿಯ ತೀರ್ಮಾನದ ಮೇಲೆ ತನ್ನ ಶಿಫಾರಸ್ಸುಗಳೊಡನೆ ಕುಲಪತಿಯವರಿಗೆ ಒಂದು ವರದಿಯನ್ನು ಸಲ್ಲಿಸತಕ್ಕದ್ದು;

ಪರಂತು, ದಂಡ ವಿಧಿಸುವಂತೆ ಕುಲಪತಿಯವರು ಮಾಡಿದ ಆದೇಶದ ವಿರುದ್ಧ ಪ್ರಶಾಸನ ಸಭೆಗೆ ಅಪೀಲನ್ನು ಸಲ್ಲಿಸತಕ್ಕದ್ದು.

(ಡಿ) (ಬಿ) ಖಂಡದ ಅಥವಾ (ಸಿ) ಖಂಡದ ಅಡಿಯಲ್ಲಿ ಯಾವುದೇ ಅಪೀಲನ್ನು, ಅಪೀಲುದಾರನು ಯಾವ ಆದೇಶದ ವಿರುದ್ಧ ಅಪೀಲು ಸಲ್ಲಿಸಿರುವರೋ ಆ ಆದೇಶದ ದಿನಾಂಕದಿಂದ ಅರವತ್ತು ದಿನಗಳು ಮುಕ್ತಾಯವಾದ ತರುವಾಯ ಸಲ್ಲಿಸತಕ್ಕದಲ್ಲ.

(3) ಕುಲಸಚಿವರು, ಪ್ರಶಾಸನ ಸಭೆಯ, ಪ್ರಶಿಕ್ಷಣ ಪರಿಷತ್ತಿನ ಫ್ಯಾಕಲ್ಟಿಗಳ ಮತ್ತು ಅಧ್ಯಯನ ಮಂಡಲಿಗಳ ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು.

(4) ಈ ಮುಂದಿನವುಗಳು ಕುಲಸಚಿವರ ಕರ್ತವ್ಯಗಳಾಗಿರತಕ್ಕದ್ದು:-

(ಎ) ಕುಲಪತಿಯವರು ಅಥವಾ ಪ್ರಶಾಸನ ಸಭೆಯು ತಮ್ಮ ಪ್ರಭಾರಕ್ಕೆ ಒಪ್ಪಿಸಿದ ವಿಶ್ವವಿದ್ಯಾಲಯದ ದಾಖಲೆಗಳ, ಸಾಮಾನ್ಯ ಮೊಹರಿನ ಮತ್ತು ಇತರ ಸ್ವತ್ತಿನ ಅಭಿರಕ್ಷಕರಾಗಿರತಕ್ಕದ್ದು;

(ಬಿ) ಪ್ರಶಾಸನ ಸಭೆಯ, ಪ್ರಶಿಕ್ಷಣ ಪರಿಷತ್ತಿನ, ಅಧ್ಯಯನ ಮಂಡಳಿಗಳ, ಪರೀಕ್ಷಾ ಮಂಡಳಿಗಳ ಮತ್ತು ವಿಶ್ವವಿದ್ಯಾಲಯದ ಪ್ರಾಧಿಕಾರಗಳು ನೇಮಕಮಾಡಿದ ಯಾವುದೇ ಸಮಿತಿಯ ಸಭೆಗಳನ್ನು ನಡೆಸುವುದಕ್ಕೆ ನೋಟೀಸುಗಳನ್ನು ನೀಡತಕ್ಕದ್ದು;

(ಸಿ) ಪ್ರಶಾಸನ ಸಭೆಯ, ಪ್ರಶಿಕ್ಷಣ ಪರಿಷತ್ತಿನ, ಅಧ್ಯಯನ ಮಂಡಳಿಗಳ, ಪರೀಕ್ಷಕರ ಮಂಡಳಿಗಳ ಮತ್ತು ವಿಶ್ವವಿದ್ಯಾಲಯದ ಪ್ರಾಧಿಕಾರಗಳು ನೇಮಕ ಮಾಡಿದ ಸಮಿತಿಗಳ ಸಭೆಗಳ ಎಲ್ಲಾ ವ್ಯವಹರಣೆಗಳ ಸಭಾ ನಡೆವಳಿಗಳನ್ನು ಇಟ್ಟುಕೊಂಡು ಬರತಕ್ಕದ್ದು;

(ಡಿ) ಪ್ರಶಾಸನ ಸಭೆಯ ಮತ್ತು ಪ್ರಶಿಕ್ಷಣ ಪರಿಷತ್ತಿನ ಅಧಿಕೃತ ಪತ್ರ ವ್ಯವಹಾರಗಳನ್ನು ನಡೆಸತಕ್ಕದ್ದು;

(ಇ) ವಿಶ್ವವಿದ್ಯಾಲಯದ ಪ್ರಾಧಿಕಾರಗಳ ಸಭೆಗಳ ಕಾರ್ಯಸೂಚಿಯ ಪ್ರತಿಗಳನ್ನು, ಅವುಗಳನ್ನು ಹೊರಡಿಸಿದ ಕೂಡಲೇ ಮತ್ತು ಅಂಥ ಸಭೆಗಳ ಸಭಾ ನಡವಳಿಗಳ ಪ್ರತಿಗಳನ್ನು, ಅಂಥ ಸಭೆ ನಡೆದ ಒಂದು ತಿಂಗಳ ಒಳಗೆ ಕುಲಾಧಿಪತಿಯವರಿಗೆ ಕಳುಹಿಸಿಕೊಡತಕ್ಕದ್ದು; ಮತ್ತು

(ಎಫ್) ಶಾಸನಗಳಲ್ಲಿ, ನಿರ್ದಿಷ್ಟಪಡಿಸಿದ ಅಥವಾ ಪ್ರಶಾಸನ ಸಭೆಯು ಅಥವಾ ಕುಲಪತಿಯವರು ಕಾಲಕಾಲಕ್ಕೆ ಅಗತ್ಯಪಡಿಸಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**17. ಹಣಕಾಸು ಅಧಿಕಾರಿ.-** ಹಣಕಾಸು ಅಧಿಕಾರಿಯು, ಈ ಬಗ್ಗೆ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ಅವಧಿಗೆ ಸರ್ಕಾರದಿಂದ ನೇಮಕಗೊಂಡ ವಿಶ್ವವಿದ್ಯಾಲಯದ ಒಬ್ಬ ಪೂರ್ಣಕಾಲಿಕ ವೇತನ ಪಡೆಯುವ ಅಧಿಕಾರಿಯಾಗಿರತಕ್ಕದ್ದು ಮತ್ತು ಹಣಕಾಸು ಅಧಿಕಾರಿಯ ಸೇವಾ ಷರತ್ತುಗಳು ಮತ್ತು ನಿಬಂಧನೆಗಳು ಮೊದಲನೇ ಶಾಸನ ನಿರ್ದಿಷ್ಟಪಡಿಸಿದಂಥವುಗಳಾಗಿರತಕ್ಕದ್ದು.

**18. ಹಣಕಾಸು ಅಧಿಕಾರಿಯ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು.-** (1) ಹಣಕಾಸು, ಅಧಿಕಾರಿಯ ಉಪಲಬ್ದಿಗಳು ಮತ್ತು ಇತರ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ನಿಯಮಿಸ ಬಹುದಾದಂಥವುಗಳಾಗಿರತಕ್ಕದ್ದು. ಹಣಕಾಸು ಅಧಿಕಾರಿಯು ತನಗೆ ಅರವತ್ತು ವರ್ಷಗಳ ವಯಸ್ಸಾದಾಗ ಅಥವಾ 17ನೇ ಪ್ರಕರಣದಲ್ಲಿ ಸರ್ಕಾರವು ನಿರ್ದಿಷ್ಟಪಡಿಸಿದ ಅವಧಿಯು ಮುಕ್ತಾಯವಾದ ಮೇಲೆ, ಇವುಗಳಲ್ಲಿ ಯಾವುದು ಮೊದಲೋ ಆಗ ನಿವೃತ್ತರಾಗತಕ್ಕದ್ದು.

ಪರಂತು, ಹಣಕಾಸು ಅಧಿಕಾರಿಯು ಅರವತ್ತು ವರ್ಷ ವಯಸ್ಸಾಗಿದ್ದರೂ ಅವರ ಉತ್ತರಾಧಿಕಾರಿಯು ನೇಮಕವಾಗಿ ಅಧಿಕಾರವಹಿಸಿಕೊಳ್ಳುವವರೆಗೂ ಅಥವಾ ಒಂದು ವರ್ಷದ ಅವಧಿಯು ಮುಕ್ತಾಯವಾಗುವ ವರೆಗೂ, ಇವುಗಳಲ್ಲಿ ಯಾವುದು ಮೊದಲೋ ಆ ವರೆಗೆ ಪದದಲ್ಲಿ ಮುಂದುವರಿಯತಕ್ಕದ್ದು.

(2) ಹಣಕಾಸು ಅಧಿಕಾರಿಯ ಸ್ಥಾನವು ಖಾಲಿಯಾಗಿದ್ದಾಗ ಅಥವಾ ಅನಾರೋಗ್ಯ, ಗೈರು ಹಾಜರಿ ಅಥವಾ ಯಾವುದೇ ಇತರ ಕಾರಣದಿಂದ ತಮ್ಮ ಅಧಿಕಾರ ಸ್ಥಾನದ ಕರ್ತವ್ಯಗಳನ್ನು ನಿರ್ವಹಿಸಲು ಅಸಮರ್ಥರಾದಾಗ, ಹಣಕಾಸು ಅಧಿಕಾರಿಯ ಕರ್ತವ್ಯಗಳನ್ನು ಈ ಉದ್ದೇಶಕ್ಕಾಗಿ ಕುಲಪತಿಯವರು ನೇಮಕಮಾಡಬಹುದಾದಂಥ ವ್ಯಕ್ತಿಯು ನೆರವೇರಿಸತಕ್ಕದ್ದು.

(3) ಹಣಕಾಸು ಅಧಿಕಾರಿಯು, ಹಣಕಾಸು ಸಮಿತಿಯ ಪದನಿಮಿತ್ತ ಕಾರ್ಯದರ್ಶಿಯಾಗಿರತಕ್ಕದ್ದು, ಆದರೆ ಅವರು ಆ ಸಮಿತಿಯ ಸದಸ್ಯರೆಂದು ಭಾವಿಸತಕ್ಕದ್ದಲ್ಲ ;

(4) (ಎ) ಹಣಕಾಸು ಅಧಿಕಾರಿಯು, ವಿಶ್ವವಿದ್ಯಾಲಯದ ನಿಧಿಗಳ ಮೇಲೆ ಸಾಮಾನ್ಯ ಮೇಲ್ವಿಚಾರಣೆ ನಡೆಸತಕ್ಕದ್ದು ಮತ್ತು ವಿಶ್ವವಿದ್ಯಾಲಯಕ್ಕೆ ಅದರ ಹಣಕಾಸು ನೀತಿಯ ಸಂಬಂಧದಲ್ಲಿ ಸಲಹೆ ನೀಡತಕ್ಕದ್ದು ; ಮತ್ತು

(ಬಿ) ನಿಯಮಿಸಬಹುದಾದಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು :

ಪರಂತು, ಹಣಕಾಸು ಅಧಿಕಾರಿಯು, ಪ್ರಶಾಸನ ಸಭೆಯ ಪೂರ್ವಾನುಮತಿಯಿಲ್ಲದೇ ನಿಯಮಿಸಬಹುದಾದಂಥ ಮೊತ್ತಕ್ಕೆ ಮೀರಿ ಯಾವುದೇ ವೆಚ್ಚವನ್ನು ವಹಿಸತಕ್ಕದ್ದಲ್ಲ ಅಥವಾ ಯಾವುದೇ ಹೂಡಿಕೆ ಮಾಡತಕ್ಕದ್ದಲ್ಲ.

(5) ಪ್ರಶಾಸನ ಸಭೆಯ ನಿಯಂತ್ರಣಕ್ಕೊಳಪಟ್ಟು ಹಣಕಾಸು ಅಧಿಕಾರಿಯು,–

(ಎ) ನ್ಯಾಸದ ಮತ್ತು ದತ್ತಿ ನೀಡಲಾದ ಸ್ವತ್ತು ಒಳಗೊಂಡಂತೆ ವಿಶ್ವವಿದ್ಯಾಲಯದ ಸ್ವತ್ತನ್ನು ಮತ್ತು ಹೂಡಿಕೆಗಳನ್ನು ಧಾರಣಮಾಡತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು.

(ಬಿ) ಒಂದು ವರ್ಷಕ್ಕಾಗಿ ಆವರ್ತಕ ಮತ್ತು ಅನಾವರ್ತಕ ವೆಚ್ಚಗಳು ಪ್ರಶಾಸನ ಸಭೆಯು ನಿಗದಿ ಪಡಿಸಿದ ಪರಿಮಿತಿಗಳನ್ನು ಮೀರದಂತೆ ಮತ್ತು ಯಾವ ಉದ್ದೇಶಕ್ಕಾಗಿ ಆ ಹಣವನ್ನು ಮಂಜೂರುಮಾಡಲಾಗಿತ್ತೋ ಅಥವಾ ಹಂಚಿಕೆಮಾಡಲಾಗಿತ್ತೋ ಅದಕ್ಕಾಗಿ ಬಳಸುವಂತೆ ನೋಡಿಕೊಳ್ಳತಕ್ಕದ್ದು.

(ಸಿ) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕಗಳು ಆರ್ಥಿಕ ಅಂದಾಜುಗಳು ಮತ್ತು ಬಜೆಟ್‌ಅನ್ನು ಸಿದ್ಧಪಡಿಸುವುದಕ್ಕೆ ಮತ್ತು ಅದನ್ನು ಪ್ರಶಾಸನ ಸಭೆಯ ಮುಂದೆ ಮಂಡಿಸುವುದಕ್ಕೆ ಜಬಾಬ್ದಾರರಾಗಿರತಕ್ಕದ್ದು.

(ಡಿ) ನಗದು ಮತ್ತು ಬ್ಯಾಂಕ್ ಶಿಲ್ಕು ಮತ್ತು ಹೂಡಿಕೆಗಳ ಮೇಲೆ ನಿರಂತರ ಗಮನವಿಡತಕ್ಕದ್ದು.

(ಇ) ರಾಜಸ್ವ ಸಂಗ್ರಹಣೆಯ ಪ್ರಗತಿಯನ್ನು ಮತ್ತು ಅನುಸರಿಸಬೇಕಾದ ಸಂಗ್ರಹಣಾವಿಧಾನಗಳ ಮೇಲೆ ಗಮನವಿಡತಕ್ಕದ್ದು.

(ಎಫ್) ಕಟ್ಟಡಗಳ, ಭೂಮಿಯ, ಪೀಠೋಪಕರಣಗಳ ಮತ್ತು ಸಲಕರಣೆಗಳ ರಿಜಿಸ್ಟರುಗಳನ್ನು ಇಂದೀಕರಿಸಿ ನಿರ್ವಹಿಸತಕ್ಕದ್ದು ಮತ್ತು ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ಎಲ್ಲ ಕಛೇರಿಗಳಲ್ಲಿ ಮತ್ತು ಇತರ ಸ್ಥಳಗಳಲ್ಲಿ ಸಲಕರಣೆಗಳ ಮತ್ತು ಇತರ ಬಳಕೆವಸ್ತುಗಳ ದಾಸ್ತಾನು ಪರೀಕ್ಷೆ ಮಾಡುವಂತೆ ನೋಡಿಕೊಳ್ಳತಕ್ಕದ್ದು.

(ಜಿ) ಯಾವುದೇ ಅನಧಿಕೃತ ವೆಚ್ಚದ ಬಗ್ಗೆ ಅಥವಾ ಇತರ ಹಣಕಾಸು ಅಕ್ರಮಗಳ ಬಗ್ಗೆ ಕುಲಪತಿಯವರ ಗಮನಕ್ಕೆ ತರತಕ್ಕದ್ದು ಮತ್ತು ತಪ್ಪಿತಸ್ಥ ವ್ಯಕ್ತಿಗಳ ವಿರುದ್ಧ ಸೂಕ್ತ ಕ್ರಮಕೈಗೊಳ್ಳುವುದಕ್ಕೆ ಸಲಹೆ ನೀಡತಕ್ಕದ್ದು ; ಮತ್ತು

(ಎಚ್) ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ಯಾವುದೇ ಕಛೇರಿ ಅಥವಾ ಇತರ ಸ್ಥಳದಿಂದ ತನ್ನ ಕರ್ತವ್ಯಗಳನ್ನು ನೆರವೇರಿಸುವುದಕ್ಕಾಗಿ ತಾನು ಅಗತ್ಯವೆಂದು ಭಾವಿಸಬಹುದಾದ ಮಾಹಿತಿ ಅಥವಾ ವಿವರಣಾ ಪಟ್ಟಿಗಳನ್ನು ಕೇಳಿ ತರಿಸಿಕೊಳ್ಳತಕ್ಕದ್ದು.

(6) ವಿಶ್ವವಿದ್ಯಾನಿಲಯಕ್ಕೆ ಸಂದಾಯವಾಗತಕ್ಕ ಯಾವುದೇ ಹಣಕ್ಕಾಗಿ ಹಣಕಾಸು ಅಧಿಕಾರಿಯ ಅಥವಾ ಪ್ರಶಾಸನ ಸಭೆಯು ಈ ಸಂಬಂಧದಲ್ಲಿ ವಿಧ್ಯುಕ್ತವಾಗಿ ಪ್ರಾಧೀಕರಿಸಿದ ವ್ಯಕ್ತಿಯ ಅಥವಾ ವ್ಯಕ್ತಿಗಳ ನೀಡಿದ ರಸೀದಿಗಳು ಅಂಥ ಹಣದ ಸಂದಾಯವಾಗಿರುವುದಕ್ಕೆ ಪರ್ಯಾಪ್ತ ತೀರಿಕೆಯಾಗಿರತಕ್ಕದ್ದು.

## ಅಧ್ಯಾಯ – IV

## ವಿಶ್ವವಿದ್ಯಾಲಯದ ಪ್ರಾಧಿಕಾರಗಳು

**19. ವಿಶ್ವವಿದ್ಯಾಲಯದ ಪ್ರಾಧಿಕಾರಗಳು.–** ಪ್ರಶಾಸನ ಸಭೆ, ಪ್ರಶಿಕ್ಷಣ ಪರಿಷತ್ತು, ಫ್ಯಾಕಲ್ಟಿಗಳು ಮತ್ತು ಹಣಕಾಸು ಸಮಿತಿ, ಅಧ್ಯಯನ ಮಂಡಳಿಗಳು, ಮತ್ತು ವಿಶ್ವವಿದ್ಯಾಲಯದ ಪ್ರಾಧಿಕಾರಗಳೆಂದು ಶಾಸನಗಳ ಮೂಲಕ ಘೋಷಿಸಬಹುದಾದಂಥ ಇತರ ಪ್ರಾಧಿಕಾರಗಳು, ವಿಶ್ವವಿದ್ಯಾಲಯದ ಪ್ರಾಧಿಕಾರಗಳಾಗಿರತಕ್ಕದ್ದು.

**20. ಪ್ರಶಾಸನ ಸಭೆ.–** ಕುಲಾಧಿಪತಿಯವರು, ಪ್ರಥಮ ಕುಲಪತಿಯವರ ನೇಮಕವಾದ ಮೇಲೆ ಆದಷ್ಟುಬೇಗನೇ ಈ ಮುಂದಿನ ವ್ಯಕ್ತಿಗಳನ್ನು ಒಳಗೊಂಡ ಪ್ರಶಾಸನಸಭೆಯನ್ನು ರಚಿಸತಕ್ಕದ್ದು, ಎಂದರೆ:–

(ಎ) ಕುಲಪತಿ

(ಬಿ) ಉನ್ನತ ಶಿಕ್ಷಣದ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ ಅಥವಾ ಅವರ ನಾಮನಿರ್ದೇಶಿತರು.

(ಸಿ) ಆರ್ಥಿಕ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ ಅಥವಾ ಅವರ ನಾಮನಿರ್ದೇಶಿತರು.

(ಡಿ) ಕಂದಾಯ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ (ಧಾರ್ಮಿಕ ಮತ್ತು ಧರ್ಮಾರ್ಥ ದತ್ತಿಗಳು) ಅಥವಾ ಅವರ ನಾಮನಿರ್ದೇಶಿತರು.

(ಇ) ಅಧ್ಯಕ್ಷರು, ವಿಶ್ವವಿದ್ಯಾಲಯ ಅನುದಾನ ಆಯೋಗ ಅಥವಾ ಅವರ ನಾಮನಿರ್ದೇಶಿತರು.

(ಎಫ್) ಮಹಾನಿರ್ದೇಶಕರು, ಪುರಾತತ್ವ ಇಲಾಖೆ, ಭಾರತ ಸರ್ಕಾರ

(ಜಿ) ಪ್ರಸಿದ್ಧ ಶಿಕ್ಷಣ ತಜ್ಞರು, ಸಂಸ್ಕೃತ ವಿದ್ವಾಂಸರು ಅಥವಾ ಇತರ ವೃತ್ತಿಗಳ ವ್ಯಕ್ತಿಗಳ, ಪೈಕಿಯಿಂದ ಕುಲಾಧಿಪತಿಯವರು ನಾಮನಿರ್ದೇಶಿಸಿದ ಇಬ್ಬರು ಸದಸ್ಯರು, ಇವರ ಪೈಕಿ ಒಬ್ಬರು ಮಹಿಳೆ ಆಗಿರತಕ್ಕದ್ದು.

(ಎಚ್) ಪ್ರಸಿದ್ಧ ಸಂಸ್ಕೃತ ಶಿಕ್ಷಣ ತಜ್ಞರು ಅಥವಾ ಸಂಸ್ಕೃತ ಸಾಹಿತ್ಯಕೃತಿ ರಚಿಸಿದ ಪ್ರಸಿದ್ಧ ವ್ಯಕ್ತಿಗಳು ಮತ್ತು ಪ್ರಶಸ್ತಿ ವಿಜೇತರು ಹಾಗೂ ಇತರ ವೃತ್ತಿಗಳ ವ್ಯಕ್ತಿಗಳಿಂದ ರಾಜ್ಯಸರ್ಕಾರವು ನಾಮನಿರ್ದೇಶಿಸಿದ ಆರು ವ್ಯಕ್ತಿಗಳು ಅವರಲ್ಲಿ,-

(i) ಅನುಸೂಚಿತ ಜಾತಿಗಳು ಅಥವಾ ಅನುಸೂಚಿತ ಬುಡಕಟ್ಟುಗಳಿಗೆ ಸೇರಿದ ಒಬ್ಬ ವ್ಯಕ್ತಿ;

(ii) ಇತರ ಹಿಂದುಳಿದ ವರ್ಗಗಳಿಗೆ ಸೇರಿದ ಒಬ್ಬ ವ್ಯಕ್ತಿ,

(iii) ಒಬ್ಬ ಮಹಿಳೆ

(iv) ಧಾರ್ಮಿಕ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ಒಬ್ಬ ವ್ಯಕ್ತಿ ಮತ್ತು

(v) ಇತರೆ ಇಬ್ಬರು.

– ಇರತಕ್ಕದ್ದು

ಪರಂತು, ಘಟಕ ಕಾಲೇಜಿನಲ್ಲಿ ಅಥವಾ ವಿಶ್ವವಿದ್ಯಾನಿಲಯದಲ್ಲಿ ಯಾವುದೇ ಸಾಮರ್ಥ್ಯದಲ್ಲಿ ನಿಯೋಜಿತನಾದ ಯಾವೊಬ್ಬ ವ್ಯಕ್ತಿಯೂ ನಾಮನಿರ್ದೇಶನಕ್ಕೆ ಅರ್ಹನಾಗಿರತಕ್ಕದ್ದಲ್ಲ.

(ಐ) ಕರ್ನಾಟಕ ವಿಧಾನಸಭೆಯಿಂದ ಮತ್ತು ಕರ್ನಾಟಕ ವಿಧಾನ ಪರಿಷತ್ತಿನಿಂದ ಚುನಾಯಿತರಾದ ಒಬ್ಬೊಬ್ಬ ಸದಸ್ಯರು.

**21. ಪದಾವಧಿ.–** (1) ಈ ಅಧಿನಿಯಮದ ಅಡಿಯಲ್ಲಿಯ ಯಾವುದೇ ಪ್ರಾಧಿಕಾರಗಳಿಗೆ ನಾಮನಿರ್ದೇಶಿತನಾದ ಯಾವೊಬ್ಬ ಸದಸ್ಯನು ಸಂಬಂಧಪಟ್ಟ ನಾಮನಿರ್ದೇಶಿಸುವ ಪ್ರಾಧಿಕಾರದ ಇಷ್ಟಪರ್ಯಂತ ಪದಧಾರಣ ಮಾಡತಕ್ಕದ್ದು. ಈ ಅಧಿನಿಯಮದ ಅಡಿಯಲ್ಲಿಯ ಯಾವುದೇ ಪ್ರಾಧಿಕಾರಗಳಿಗೆ ನಾಮನಿರ್ದೇಶಿತನಾದ ಯಾವೊಬ್ಬ ವ್ಯಕ್ತಿಯು ಎರಡನೇ ಅವಧಿಗಾಗಿ ನಾಮನಿರ್ದೇಶಿತನಾಗುವುದಕ್ಕೆ ಅಥವಾ ಚುನಾಯಿತನಾಗುವುದಕ್ಕೆ ಅರ್ಹನಾಗಿರತಕ್ಕದ್ದಲ್ಲ:

ಪರಂತು, ನಾಮನಿರ್ದೇಶಿತನಾದ ಒಬ್ಬ ಪ್ರಶಾಸನ ಸಭೆಯ ಸದಸ್ಯನು, ಯಾವ ಹುದ್ದೆಯ ಕಾರಣದಿಂದ ತಾನು ಪ್ರಶಾಸನ ಸಭೆಯ ಸದಸ್ಯನಾಗುವನೋ ಅಂಥ ಒಂದು ಹುದ್ದೆಗೆ ತಾತ್ಕಾಲಿಕವಾಗಿ ನೇಮಕನಾಗಿರುವಲ್ಲಿ ತಾನು ನೇಮಕನಾದ ಹುದ್ದೆಯ ಪ್ರಭಾರವನ್ನು ತೆಗೆದುಕೊಂಡ ದಿನದಿಂದ ಏಳು ದಿನಗಳ ಒಳಗೆ ತಾನು ಸಹಿಮಾಡಿದ ಲಿಖಿತ ನೋಟೀಸನ್ನು ಕುಲಪತಿಯವರಿಗೆ ನೀಡಿ ತನ್ನ ನಾಮನಿರ್ದೇಶನದ ಬಲದಿಂದ ಪ್ರಶಾಸನ ಸಭೆಯ ಸದಸ್ಯನಾಗಿ ಮುಂದುವರೆಯುವನೋ ಅಥವಾ ಅಂಥ ಸದಸ್ಯನ ಪದವನ್ನು ಬಿಟ್ಟುಕೊಟ್ಟು ಹುದ್ದೆಯ ಬಲದಿಂದ ಪದನಿಮಿತ್ತ ಸದಸ್ಯನಾಗುವುದನ್ನು ಆಯ್ಕೆ ಮಾಡಿಕೊಳ್ಳುವನೋ ಎಂಬುದನ್ನು ತಿಳಿಸತಕ್ಕದ್ದು ಮತ್ತು ಸದರಿ ಆಯ್ಕೆಯು ಅಂತಿಮವಾಗಿರತಕ್ಕದ್ದು, ಅಂಥ ಆಯ್ಕೆಯನ್ನು ಮಾಡಲು ತಪ್ಪಿದರೆ ಅವನು ನಾಮನಿರ್ದೇಶಿತ ಸದಸ್ಯನಾಗಿ ತನ್ನ ಸ್ಥಾನವನ್ನು ಖಾಲಿಮಾಡಿದ್ದಾನೆಂದು ಭಾವಿಸತಕ್ಕದ್ದು.

(2) ಒಬ್ಬ ವ್ಯಕ್ತಿಯು ಪ್ರಶಾಸನಸಭೆಯ ಸದಸ್ಯನಾಗಿರುವುದು ನಿಂತುಹೋದಾಗ, ಅವನು ಪ್ರಶಾಸನ ಸಭೆಯ ಸದಸ್ಯನಾಗಿರುವ ಬಲದಿಂದ ವಿಶ್ವವಿದ್ಯಾಲಯದ ಯಾವುದೇ ಇತರ ಪ್ರಾಧಿಕಾರದ ಸದಸ್ಯನಾಗಿರುವುದೂ ನಿಂತುಹೋಗತಕ್ಕದ್ದು.

(3) ಪ್ರಾಶಾಸನ ಸಭೆಯ ಸದಸ್ಯನು, ಅನುಮತಿಸಬಹುದಾದಂಥ ದಿನಭತ್ಯೆ ಮತ್ತು ಪ್ರಯಾಣ ಭತ್ಯೆಗಳ ಹೊರತಾಗಿ ವಿಶ್ವವಿದ್ಯಾನಿಲಯದಿಂದ ಯಾವುದೇ ಸಂಭಾವನೆಯನ್ನು ಸ್ವೀಕರಿಸಲು ಹಕ್ಕುಳ್ಳವನಾಗಿರತಕ್ಕದ್ದಲ್ಲ ;

ಪರಂತು, ಮೂರನೇ ಉಪ ಪ್ರಕರಣದಲ್ಲಿ ಇರುವುದಾವುದು ತಾನು ಧಾರಣಮಾಡಿದ ಹುದ್ದೆಯ ಬಲದಿಂದ ಹಕ್ಕುಳ್ಳವನಾಗಿರುವ ತನ್ನ ಸಾಮಾನ್ಯ ಉಪಲಬ್ಧಿಗಳನ್ನು ಪಡೆದುಕೊಳ್ಳದಂತೆ ಯಾವುಬ್ಬ ಸದಸ್ಯನನ್ನು ತಡೆಯತಕ್ಕದ್ದಲ್ಲ.

(4) ಪದನಿಮಿತ್ತ ಸದಸ್ಯನಲ್ಲದ ಒಬ್ಬ ಪ್ರಶಾಸನಸಭೆಯ ಸದಸ್ಯನು ತನ್ನ ಪದಾವಧಿಯು ಮುಕ್ತಾಯವಾಗುವ ಮೊದಲು ಯಾವುದೇ ಸಮಯದಲ್ಲಿ ತನ್ನ ಸದಸ್ಯತ್ವಕ್ಕೆ ರಾಜೀನಾಮೆ ಸಲ್ಲಿಸಬಹುದು. ಅಂಥ ರಾಜಿನಾಮೆಯನ್ನು ಸದಸ್ಯನು ಲಿಖಿತಪತ್ರದ ಮೂಲಕ ಕುಲಾಧಿಪತಿಯವರಿಗೆ ಕಳುಹಿಸಿಕೊಡತಕ್ಕದ್ದು ಮತ್ತು ರಾಜೀನಾಮೆಯು, ಕುಲಾಧಿಪತಿಯವರು ಅಂಗೀಕರಿಸಿದ ದಿನಾಂಕದಿಂದ ಪರಿಣಾಮಕ್ಕೆ ಬರತಕ್ಕದ್ದು.

(5) ಯಾವುವೇ ಪ್ರಾಧಿಕಾರಗಳಿಗೆ ನಾಮನಿರ್ದೇಶಿತನಾದ ಯಾವೊಬ್ಬ ಸದಸ್ಯನು, ಆತನ ದುರ್ವ್ಯವಹಾರ, ದುರ್ನಡತೆ ಅಥವಾ ಅನ್ಯ ಕಾರಣದ ಮೇಲೆ ಆ ಬಗ್ಗೆ ವಿಚಾರಣೆ ನಡೆಸಿದ ತರುವಾಯ ಕುಲಾಧಿಪತಿಯವರು ಯಾವುದೇ ಸಮಯದಲ್ಲಿ ಸದಸ್ಯತ್ವದಿಂದ ತೆಗೆದುಹಾಕುವುದಕ್ಕೆ ಬದ್ಧನಾಗಿರತಕ್ಕದ್ದು.

**22. ಪ್ರಶಾಸನ ಸಭೆಯ ಅಧಿಕಾರಗಳು.–** ಪ್ರಶಾಸನ ಸಭೆಯು ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು ವಿಶ್ವವಿದ್ಯಾಲಯದ ಆಡಳಿತಾತ್ಮಕ ಕಾರ್ಯನೀತಿಗಳು, ಕಾರ್ಯಕ್ರಮಗಳು ಮತ್ತು ಪ್ರಕಾರ್ಯಗಳ ನಿರ್ವಹಣೆಯ ಪರಿಶೀಲನೆಮಾಡತಕ್ಕದ್ದು, ಮತ್ತು ಈ ಮುಂದಿನ ಅಧಿಕಾರಗಳನ್ನು ಮತ್ತು ಪ್ರಕಾರ್ಯಗಳನ್ನು ಹೊಂದಿರತಕ್ಕದ್ದು, ಎಂದರೆ:–

(1) ವಿಶ್ವವಿದ್ಯಾಲಯದ ಆಡಳಿತಾತ್ಮಕ ಕಾರ್ಯನೀತಿಗಳನ್ನು ಮತ್ತು ಕಾರ್ಯಕ್ರಮಗಳನ್ನು ಮತ್ತು ಕಾರ್ಯನಿರ್ವಹಣೆಯನ್ನು ಕಾಲಕಾಲಕ್ಕೆ ಪರಿಶೀಲಿಸುವುದು ಮತ್ತು ವಿಶ್ವವಿದ್ಯಾಲಯದ ಸುಧಾರಣೆಗಾಗಿ ಕ್ರಮಗಳನ್ನು ಸಲಹೆಮಾಡುವುದು ;

(2) ಸಲಹೆಗಾಗಿ ಕಳುಹಿಸಿಕೊಡಬಹುದಾದ ಯಾವುದೇ ವಿಷಯದ ಸಂಬಂಧದಲ್ಲಿ ಕುಲಾಧಿಪತಿಯವರಿಗೆ ಸಲಹೆ ನೀಡುವುದು ;

(3) ಅದು ನಿರ್ಧರಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಉದ್ದೇಶಗಳಿಗಾಗಿ ಇತರೆ ವಿಶ್ವವಿದ್ಯಾಲಯಗಳೊಡನೆ, ಇತರ ಪ್ರಶಿಕ್ಷಣ ಪ್ರಾಧಿಕಾರಗಳೊಡನೆ ಮತ್ತು ಕಾಲೇಜುಗಳೊಡನೆ ಸಹಕರಿಸುವುದು

(4) ಸಂಸ್ಕೃತ ಭಾಷೆಯಲ್ಲಿ ಮತ್ತು ಸಾಹಿತ್ಯದಲ್ಲಿ ಸಂಶೋಧನೆ ಮುಂದುವರಿಕೆ ಮತ್ತು ಜ್ಞಾನದ ಪ್ರಸಾರಕ್ಕಾಗಿ ಅವಕಾಶ ಕಲ್ಪಿಸುವುದು ;

(5) ವಿಶ್ವವಿದ್ಯಾಲಯಕ್ಕೆ ಅಗತ್ಯವಾದ ಉಪನ್ಯಾಸಕರ, ರೀಡರುಗಳ, ಪ್ರಾಧ್ಯಾಪಕರ ಮತ್ತು ಯಾವುದೇ ಇತರ ಅಧ್ಯಾಪಕ ವರ್ಗದ ಅಥವಾ ಸಂಶೋಧನೆಯ ಹುದ್ದೆಗಳನ್ನು ಪ್ರಾರಂಭಿಸುವುದು ;

(6) ಪದವಿಗಳು, ಡಿಪ್ಲೋಮ ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರಾರಂಭಿಸುವುದು ;

(7) ನಿಯಮಿಸಬಹುದಾದ ಷರತ್ತುಗಳಿಗೊಳಪಟ್ಟು ಸಂಶೋಧನೆ ನಡೆಸುವ ವ್ಯಕ್ತಿಗಳಿಗೆ ಪದವಿಗಳು, ಡಿಪ್ಲೋಮ ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರದಾನಮಾಡುವುದು ;

(8) ಪ್ರಶಾಸನ ಸಭೆಯ ಸದಸ್ಯರ ಪೈಕಿ ಮೂರನೆ ಎರಡಕ್ಕಿಂತ ಕಡಿಮೆಯಿಲ್ಲದ ಸದಸ್ಯರು ಶಿಫಾರಸ್ಸು ಮಾಡಿದ ಗೌರವ ಪದವಿಗಳು ಅಥವಾ ಇತರ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು.

(9) ಶಾಸನಗಳಿಗೆ ಅನುಸಾರವಾಗಿ, ಫೆಲೋಷಿಪ್‌ಗಳು, ವಿದ್ಯಾರ್ಥಿವೇತನಗಳು, ಬರ್ಸರಿಗಳು, ಪ್ರದರ್ಶಿಕೆಗಳು, ಪದಕಗಳು ಮತ್ತು ಪಾರಿತೋಷಕಗಳನ್ನು ಪ್ರಾರಂಭಿಸುವುದು ಮತ್ತು ಅವುಗಳನ್ನು ನೀಡುವುದು.

(10) ವಾರ್ಷಿಕ ವರದಿ, ವಾರ್ಷಿಕ ಲೆಕ್ಕಪತ್ರಗಳು, ಮತ್ತು ಹಣಕಾಸು ಅಂದಾಜುಗಳನ್ನು ಪರಿಗಣಿಸುವುದು ಮತ್ತು ಅವುಗಳ ಬಗ್ಗೆ ತಾನು ಸೂಕ್ತವೆಂದು ಭಾವಿಸಬಹುದಾದಂಥ ಕ್ರಮಕೈಗೊಳ್ಳುವುದು.

(11) ಯಾವುದೇ ಸಂಸ್ಥೆಯ ಆಡಳಿತವನ್ನು ವಹಿಸಿಕೊಳ್ಳುವುದಕ್ಕಾಗಿ ಮತ್ತು ಅದರ ಆಸ್ತಿಗಳನ್ನು ಮತ್ತು ಹೊಣೆಗಾರಿಕೆಗಳನ್ನು ವಹಿಸಿಕೊಳ್ಳುವುದಕ್ಕಾಗಿ ಅಥವಾ ಈ ಅಧಿನಿಯಮದ ಉಪಬಂಧಗಳಿಗೆ ವಿರೋಧವಾಗಿರದ ಯಾವುದೇ ಇತರ ಉದ್ದೇಶಗಳಿಗಾಗಿ ಕೇಂದ್ರ ಅಥವಾ ಯಾವುದೇ ಇತರ ರಾಜ್ಯ ಸರ್ಕಾರದೊಡನೆ ಅಥವಾ ಖಾಸಗಿ ಸಂಸ್ಥೆಯೊಡನೆ ಯಾವುದೇ ಒಪ್ಪಂದ ಮಾಡಿಕೊಳ್ಳುವುದು;

(12) ವಿಶ್ವವಿದ್ಯಾಲಯದ ಸ್ವತ್ತುಗಳ ಮತ್ತು ನಿಧಿಗಳನ್ನು ಧಾರಣ ಮಾಡುವುದು, ನಿಯಂತ್ರಿಸುವುದು ಮತ್ತು ಆಡಳಿತ ನಡೆಸುವುದು.

(13) ವಿಶ್ವವಿದ್ಯಾಲಯದ ಸಾಮಾನ್ಯ ಮೊಹರಿನ ಸ್ವರೂಪ, ಅಭಿರಕ್ಷೆ ಮತ್ತು ಬಳಕೆಯನ್ನು ನಿರ್ದೇಶಿಸುವುದು;

(14) ಈ ಅಧಿನಿಯಮಕ್ಕೆ ಮತ್ತು ಶಾಸನಗಳಿಗೆ ಅನುಸಾರವಾಗಿ ವಿಶ್ವವಿದ್ಯಾಲಯಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳನ್ನು ವಿನಿಯಮಗೊಳಿಸುವುದು ಮತ್ತು ನಿರ್ಧರಿಸುವುದು;

(15) ನಿರ್ದಿಷ್ಟ ಉದ್ದೇಶಗಳಿಗಾಗಿ ವಿಶ್ವವಿದ್ಯಾಲಯದ ವಿಲೆಗಾಗಿ ಒಪ್ಪಿಸಿದ ಎಲ್ಲ ಸ್ವತ್ತುಗಳ ಮತ್ತು ಎಲ್ಲ ನಿಧಿಗಳ ಆಡಳಿತ ನಡೆಸುವುದು;

(16) (ಎ) ವಿಶ್ವವಿದ್ಯಾಲಯದ ಉಪನ್ಯಾಸಕರು, ವಿಶ್ವವಿದ್ಯಾಲಯದ ರೀಡರ್‌ಗಳು, ವಿಶ್ವವಿದ್ಯಾಲಯದ ಪ್ರಾಧ್ಯಾಪಕರು, ವಿಶ್ವವಿದ್ಯಾಲಯದ ಸಂಶೋಧಕರು ಮತ್ತು ವಿಶ್ವವಿದ್ಯಾಲಯದ ಅಧ್ಯಾಪಕರನ್ನು ನೇಮಕ ಮಾಡುವುದು ಮತ್ತು ಅವರ ಉಪಲಬ್ದಿಗಳು ಯಾವುದಾದರು ಇದ್ದರೆ ಅದನ್ನು ನಿಗದಿಪಡಿಸುವುದು; ಅವರ ಕರ್ತವ್ಯಗಳನ್ನು ಮತ್ತು ಸೇವಾ ಷರತ್ತುಗಳನ್ನು ನಿರ್ದಿಷ್ಟಪಡಿಸುವುದು ಮತ್ತು ತಾತ್ಕಾಲಿಕ ಖಾಲಿ ಹುದ್ದೆಗಳನ್ನು ಭರ್ತಿ ಮಾಡುವುದು ;

(ಬಿ) ಆಡಳಿತಾತ್ಮಕ ಮತ್ತು ಅದೇರೀತಿಯ ಇತರ ಹುದ್ದೆಗಳ ನೇಮಕದ ವಿಧಾನವನ್ನು ನಿರ್ದಿಷ್ಟಪಡಿಸುವ ಶಾಸನಗಳನ್ನು ರಚಿಸುವುದು ಮತ್ತು ಅವರ ಉಪಲಬ್ಧಿಗಳು ಯಾವುದಾದರೂ ಇದ್ದರೆ ಅವುಗಳನ್ನು ನಿಗದಿಪಡಿಸುವುದು ಅವರ ಕರ್ತವ್ಯಗಳನ್ನು ಮತ್ತು ಸೇವಾ ಷರತ್ತುಗಳನ್ನು ನಿರ್ದಿಷ್ಟಪಡಿಸುವುದು ಮತ್ತು ತಾತ್ಕಾಲಿಕ ಖಾಲಿ ಹುದ್ದೆಗಳನ್ನು ಭರ್ತಿ ಮಾಡುವುದು ;

(17) ವಿಶ್ವವಿದ್ಯಾಲಯದ ಉಪನ್ಯಾಸಕರು, ವಿಶ್ವವಿದ್ಯಾಲಯದ ರೀಡರ್‌ಗಳು, ವಿಶ್ವವಿದ್ಯಾಲಯದ ಪ್ರಾಧ್ಯಾಪಕರು, ವಿಶ್ವವಿದ್ಯಾಲಯದ ಸಂಶೋಧಕರು ಮತ್ತು ವಿಶ್ವವಿದ್ಯಾಲಯದ ಅಧ್ಯಾಪಕರು ಮತ್ತು ವಿಶ್ವವಿದ್ಯಾಲಯದ ಇತರ ನೌಕರರನ್ನು ಅಮಾನತ್ತು ಮಾಡುವುದು ಮತ್ತು ವಜಾಮಾಡುವುದು;

(18) ವಿಶ್ವವಿದ್ಯಾಲಯದ ಪರವಾಗಿ ದತ್ತಿಗಳನ್ನು, ಉಯಿಲುದಾನ, ದೇಣಿಗೆಗಳನ್ನು, ಅನುದಾನಗಳನ್ನು ಮತ್ತು ಅದಕ್ಕೆ ವರ್ಗಾವಣೆ ಮಾಡಿದ ಸ್ಥಿರ ಮತ್ತು ಚರ ಸ್ವತ್ತುಗಳನ್ನು ಸ್ವೀಕರಿಸುವುದು.

(19) (ಎ) ವಿಶ್ವವಿದ್ಯಾಲಯದ ಪರವಾಗಿ ಕೇಂದ್ರ ಅಥವಾ ರಾಜ್ಯ ಸರ್ಕಾರದಿಂದ ಮತ್ತು ವಿಶ್ವವಿದ್ಯಾಲಯದ ಅನುದಾನ ಆಯೋಗದಿಂದ ಅಥವಾ ಸಾರ್ವಜನಿಕರಿಂದ ಅಥವಾ ಕೇಂದ್ರ ಅಥವಾ ರಾಜ್ಯ ಸರ್ಕಾರದ ಸ್ವಾಮ್ಯದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಯಾವುದೇ ನಿಗಮದಿಂದ ಸಾಲಗಳನ್ನು ಎತ್ತುವುದು ;

(ಬಿ) ಸರ್ಕಾರದ ಅನುಮೋದನೆಯೊಡನೆ ವಿಶ್ವವಿದ್ಯಾಲಯದ ಉದ್ದೇಶಕ್ಕಾಗಿ ವಿಶ್ವವಿದ್ಯಾಲಯದ ಭದ್ರತೆ ಮೇಲೆ ಹಣವನ್ನು ಸಾಲವಾಗಿ ಪಡೆಯುವುದು ;

(20) ವಿದ್ಯಾರ್ಥಿನಿಲಯಗಳ ತಪಾಸಣೆಗಾಗಿ ವ್ಯವಸ್ಥೆ ಮಾಡುವುದು ಮತ್ತು ನಿರ್ದೇಶಿಸುವುದು ;

(21) ಶಾಸನಗಳ ಮೂಲಕ ನಿಯಮಿಸಬಹುದಾದಂತಹ ಇತರ ಅಧಿಕಾರಗಳನ್ನು ಚಲಾಯಿಸುವುದು ಮತ್ತು ಅಂಥ ಪ್ರಕಾರ್ಯಗಳನ್ನು ನೆರವೇರಿಸುವುದು ;

(22) ಶಾಸನಗಳನ್ನು ರಚಿಸುವುದು ಅಥವಾ ಶಾಸನಗಳನ್ನು ತಿದ್ದುಪಡಿ ಮಾಡುವುದು ಅಥವಾ ನಿರಸನಗೊಳಿಸುವುದು.

**23. ಪ್ರಶಾಸನ ಸಭೆಯ ಸಭೆಗಳು: (1)** ಪ್ರಶಾಸನ ಸಭೆಯು ಪ್ರತಿಯೊಂದು ವರ್ಷದಲ್ಲಿ ಕುಲಾಧಿಪತಿಯವರು ನಿಗದಿಪಡಿಸುವ ದಿನಾಂಕದಂದು ಕೊನೆಯ ಪಕ್ಷ ಮೂರುಸಲವಾದರೂ ಸಭೆ ಸೇರತಕ್ಕದ್ದು. ಅಂಥ ಸಭೆಗಳಲ್ಲಿ ಒಂದನ್ನು ವಾರ್ಷಿಕ ಸಭೆ ಎಂದು ಕರೆಯತಕ್ಕದ್ದು. ಪ್ರಶಾಸನ ಸಭೆಯು ತಾನು ಕಾಲಕಾಲಕ್ಕೆ ನಿರ್ಧರಿಸಬಹುದಾದಂತಹ ಇತರ ಸಮಯಗಳಲ್ಲಿ ಸಭೆ ಸೇರಬಹುದು;

(2) ಒಟ್ಟು ಸದಸ್ಯರ ಸಂಖ್ಯೆಯ ಮೂರನೇ ಒಂದರಷ್ಟು ಸದಸ್ಯರು ಪ್ರಶಾಸನ ಸಭೆಯ ಕೋರಂ ಆಗಿರತಕ್ಕದ್ದು ;

ಪರಂತು ಅಂಥ ಕೋರಂ, ವಿಶ್ವವಿದ್ಯಾಲಯದ ಘಟಿಕೋತ್ಸವದ ಸಭೆಗಾಗಿ ಪದವಿ ಡಿಪ್ಲೋಮಾ ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳ ಪ್ರಧಾನ ಮಾಡುವ ಉದ್ದೇಶಕ್ಕಾಗಿ ನಡೆದ ಪ್ರಶಾಸನ ಸಭೆಯಲ್ಲಿ ಅಗತ್ಯವಿರತಕ್ಕದ್ದಲ್ಲ;

**(3)** ಕುಲಾಧಿಪತಿಯವರು, ಅವರು ಸೂಕ್ತವೆಂದು ಭಾವಿಸಿದಾಗ ಮತ್ತು ಪ್ರಶಾಸನ ಸಭೆಯ ಸದಸ್ಯರ ಶೇಕಡಾ ಐವತ್ತಕ್ಕೆ ಕಡಿಮೆ ಅಲ್ಲದಷ್ಟು ಸದಸ್ಯರು ಸಹಿಮಾಡಿ ಲಿಖಿತದಲ್ಲಿ ನೀಡಿದ ಕೋರಿಕೆಯ ಮೇರೆಗೆ ಪ್ರಶಾಸನ ಸಭೆಯ ವಿಶೇಷ ಸಭೆಯನ್ನು ಕರೆಯಬಹುದು ;

**24. ಪ್ರಶಿಕ್ಷಣ ಪರಿಷತ್ತು : (1)** ಕುಲಾಧಿಪತಿಯವರು, ಪ್ರಥಮ ಕುಲಪತಿಯವರ ನೇಮಕವಾದ ಕೂಡಲೆ ಪ್ರಶಿಕ್ಷಣ ಪರಿಷತ್ತನ್ನು ರಚಿಸತಕ್ಕದ್ದು.

(2) ಪ್ರಶಿಕ್ಷಣ ಪರಿಷತ್ತು ಕುಲಪತಿಯವರ ಜೊತೆಗೆ ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು ಎಂದರೆ:–

(ಎ) ಉನ್ನತ ಶಿಕ್ಷಣದ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ;

(ಬಿ) ಆರ್ಥಿಕ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ.

(ಸಿ) ಕಂದಾಯ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ (ಧಾರ್ಮಿಕ ಮತ್ತು ಧರ್ಮಾರ್ಥ ದತ್ತಿಗಳು).

(ಡಿ) ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ.

(ಇ) ನಿರ್ದೇಶಕರು, ಪುರಾತತ್ವ ಇಲಾಖೆ,

(ಎಫ್) ಫ್ಯಾಕಲ್ಟಿಗಳ ಡೀನರು

(ಜಿ) ಸರ್ಕಾರವು ನಾಮ ನಿರ್ದೇಶಿಸಿದ ಎಂಟು ಜನರು, ಇವರು ಕರ್ನಾಟಕ ಸಂಸ್ಕೃತ ಮತ್ತು ವೇದ ವಿಶ್ವವಿದ್ಯಾಲಯವು ಅಧ್ಯಯನಗಳನ್ನು ನಡೆಸುತ್ತಿರುವ ಸಂಸ್ಕೃತ ಸಾಹಿತ್ಯ, ಇತಿಹಾಸ, ನಾಟಕ, ವಾಸ್ತುಶಿಲ್ಪ, ಪುರಾತತ್ವಶಾಸ್ತ್ರ, ಮೂರ್ತಿಶಿಲ್ಪ, ತತ್ವಜ್ಞಾನ, ಸಾಮಾಜಿಕ ಚಳುವಳಿಗಳು, ವೇದಗಳು ಮತ್ತು ಇತರೆ ಅಂಥವೇ ಕ್ಷೇತ್ರಗಳಲ್ಲಿ ಅಸಾಧಾರಣ ಕೊಡುಗೆ ನೀಡಿದವರಾಗಿರಬೇಕು; ಮತ್ತು ಅವರ ಪೈಕಿ ಒಬ್ಬರು ಸರ್ಕಾರವು ನಿರ್ದಿಷ್ಟಪಡಿಸಿದ ಹಿಂದುಳಿದ ವರ್ಗಗಳಿಗೆ ಸೇರಿದವರಾಗಿರತಕ್ಕದ್ದು.

(ಎಚ್) ಕುಲಪತಿಯವರು, ಜೇಷ್ಠತೆಯ ಕ್ರಮದಲ್ಲಿ ಸರದಿಯ ಮೂಲಕ ಎರಡು ವರ್ಷಗಳ ಅವಧಿಗಾಗಿ ನಾಮನಿರ್ದೇಶಿಸಿದ ಸಂಯೋಜಿತ ಕಾಲೇಜುಗಳ ಐವರು ಪ್ರಿನ್ಸಿಪಾಲರುಗಳು.

(3) ಕುಲಪತಿಯವರು ಪ್ರಶಿಕ್ಷಣ ಪರಿಷತ್ತಿನ ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು.

(4) ಶಿಕ್ಷಣ ಇಲಾಖೆ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ ಅಥವಾ ಆರ್ಥಿಕ ಇಲಾಖೆ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ ಅಥವಾ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಭಾರದಲ್ಲಿರುವ ಕಾರ್ಯದರ್ಶಿ ಇವರು ಯಾವುದೇ ಕಾರಣಕ್ಕಾಗಿ ಪ್ರಶಿಕ್ಷಣ ಪರಿಷತ್ತಿನ ಸಭೆಗಳಿಗೆ ಹಾಜರಾಗಲು ಸಾಧ್ಯವಾಗದ ಸಂದರ್ಭದಲ್ಲಿ ಸರ್ಕಾರದ ಉಪ ಕಾರ್ಯದರ್ಶಿಯ ದರ್ಜೆಗೆ ಕಡಿಮೆಯಲ್ಲದ ತನ್ನ ಇಲಾಖೆಯ ಯಾವೊಬ್ಬ ಅಧಿಕಾರಿಯನ್ನು ಪ್ರತಿನಿಯೋಜಿಸಬಹುದು.

(5) ಈ ಅಧಿನಿಯಮದ ಅಡಿಯಲ್ಲಿಯ ಯಾವುದೇ ಪ್ರಾಧಿಕಾರಗಳಿಗೆ ನಾಮನಿರ್ದೇಶಿತನಾದ ಯಾವೊಬ್ಬ ಸದಸ್ಯನು ಸಂಬಂಧಪಟ್ಟ ನಾಮನಿರ್ದೇಶಿಸುವ ಪ್ರಾಧಿಕಾರದ ಇಷ್ಟಪರ್ಯಂತ ಪದಧಾರಣ ಮಾಡತಕ್ಕದ್ದು. ಈ ಅಧಿನಿಯಮದ ಅಡಿಯಲ್ಲಿಯ ಯಾವುದೇ ಪ್ರಾಧಿಕಾರಗಳಿಗೆ ನಾಮನಿರ್ದೇಶಿತನಾದ ಯಾವೊಬ್ಬ ವ್ಯಕ್ತಿಯು ಎರಡನೇ ಅವಧಿಗಾಗಿ ನಾಮನಿರ್ದೇಶಿತನಾಗುವುದಕ್ಕೆ ಅಥವಾ ಚುನಾಯಿತನಾಗುವುದಕ್ಕೆ ಅರ್ಹನಾಗಿರತಕ್ಕದ್ದಲ್ಲ ;

ಪರಂತು, ನಾಮನಿರ್ದೇಶಿತನಾದ ಒಬ್ಬ ಪ್ರಶಿಕ್ಷಣ ಪರಿಷತ್ತಿನ ಸದಸ್ಯನು, ಯಾವ ಹುದ್ದೆಯ ಕಾರಣದಿಂದ ತಾನು ಪ್ರಶಿಕ್ಷಣ ಪರಿಷತ್ತಿನ ಸದಸ್ಯನಾಗುವನೋ ಅಂಥ ಒಂದು ಹುದ್ದೆಗೆ ತಾತ್ಕಾಲಿಕವಾಗಿ ನೇಮಕನಾದಲ್ಲಿ, ತಾನು ನೇಮಕನಾದ ಹುದ್ದೆಯ ಪ್ರಭಾರವನ್ನು ತೆಗೆದುಕೊಂಡ ದಿನದಿಂದ ಏಳು ದಿನಗಳ ಒಳಗೆ, ತಾನು ಸಹಿಮಾಡಿದ ಲಿಖಿತ ನೋಟೀಸನ್ನು ಕುಲಪತಿಯವರಿಗೆ ನೀಡಿ, ತನ್ನ ನಾಮ ನಿರ್ದೇಶನದ ಬಲದಿಂದ ಪ್ರಶಿಕ್ಷಣ ಪರಿಷತ್ತಿನ ಸದಸ್ಯನಾಗಿ ಮುಂದುವರೆಯುವನೇ ಅಥವಾ ಅಂಥ ಸದಸ್ಯನ ಪದವನ್ನು ಬಿಟ್ಟುಕೊಟ್ಟು ಹುದ್ದೆಯ ಬಲದಿಂದ ಪದನಿಮಿತ್ತ ಸದಸ್ಯನಾಗುವುದನ್ನು ಆಯ್ಕೆ ಮಾಡಿಕೊಳ್ಳುವನೇ ಎಂಬುದನ್ನು ತಿಳಿಸತಕ್ಕದ್ದು ಮತ್ತು ಸದರಿ ಆಯ್ಕೆಯು ಅಂತಿಮವಾಗಿರತಕ್ಕದ್ದು, ಅಂಥ ಆಯ್ಕೆಯನ್ನು ಮಾಡಲು ತಪ್ಪಿದರೆ ಅವನು ನಾಮನಿರ್ದೇಶಿತ ಸದಸ್ಯನಾಗಿ ತನ್ನ ಸ್ಥಾನವನ್ನು ಖಾಲಿಮಾಡಿದ್ದಾನೆಂದು ಭಾವಿಸತಕ್ಕದ್ದು.

(6) ಒಬ್ಬ ವ್ಯಕ್ತಿಯು ಪ್ರಶಿಕ್ಷಣ ಪರಿಷತ್ತಿನ ಸದಸ್ಯನಾಗಿರುವುದು ನಿಂತುಹೋದಾಗ, ಅವನು ಪ್ರಶಿಕ್ಷಣ ಪರಿಷತ್ತಿನ ಸದಸ್ಯನಾಗಿರುವ ಬಲದಿಂದ ವಿಶ್ವವಿದ್ಯಾಲಯದ ಯಾವುದೇ ಇತರ ಪ್ರಾಧಿಕಾರದ ಸದಸ್ಯನಾಗಿರುವುದೂ ನಿಂತುಹೋಗತಕ್ಕದ್ದು.

(7) ಪ್ರಶಿಕ್ಷಣ ಪರಿಷತ್ತಿನ ಸದಸ್ಯನು, ಅನುಮತಿಸಬಹುದಾದಂಥ ದಿನಭತ್ಯೆ ಮತ್ತು ಪ್ರಯಾಣ ಭತ್ಯೆಗಳ ಹೊರತಾಗಿ ವಿಶ್ವವಿದ್ಯಾನಿಲಯದಿಂದ ಯಾವುದೇ ಸಂಭಾವನೆಯನ್ನು ಸ್ವೀಕರಿಸಲು ಹಕ್ಕುಳ್ಳವನಾಗಿರತಕ್ಕದ್ದಲ್ಲ ;

ಪರಂತು, ಮೂರನೇ ಉಪ ಪ್ರಕರಣದಲ್ಲಿ ಇರುವುದಾವುದು ತಾನು ಧಾರಣಮಾಡಿದ ಹುದ್ದೆಯ ಬಲದಿಂದ ಹಕ್ಕುಳ್ಳವನಾಗಿರುವ ತನ್ನ ಸಾಮಾನ್ಯ ಉಪಲಬ್ಧಿಗಳನ್ನು ಪಡೆದುಕೊಳ್ಳದಂತೆ ಯಾವೊಬ್ಬ ಸದಸ್ಯನನ್ನು ತಡೆಯತಕ್ಕದ್ದಲ್ಲ.

(8) ಪದನಿಮಿತ್ತ ಸದಸ್ಯನಲ್ಲದ ಒಬ್ಬ ಪ್ರಶಿಕ್ಷಣ ಪರಿಷತ್ತಿನ ಸದಸ್ಯನು ತನ್ನ ಪದಾವಧಿಯು ಮುಕ್ತಾಯವಾಗುವ ಮೊದಲು ಯಾವುದೇ ಸಮಯದಲ್ಲಿ ತನ್ನ ಸದಸ್ಯತ್ವಕ್ಕೆ ರಾಜೀನಾಮೆ ಸಲ್ಲಿಸಬಹುದು. ಅಂಥ ರಾಜೀನಾಮೆಯನ್ನು ಸದಸ್ಯನು ಲಿಖಿತಪತ್ರದ ಮೂಲಕ ಕುಲಾಧಿಪತಿಯವರಿಗೆ ಕಳುಹಿಸಿಕೊಡತಕ್ಕದ್ದು ಮತ್ತು ರಾಜೀನಾಮೆಯು, ಕುಲಾಧಿಪತಿಯವರು ಅಂಗೀಕರಿಸಿದ ದಿನಾಂಕದಿಂದ ಪರಿಣಾಮಕ್ಕೆ ಬರತಕ್ಕದ್ದು.

**25. ಪ್ರಶಿಕ್ಷಣ ಪರಿಷತ್ತಿನ ಅಧಿಕಾರಗಳು:** ಪ್ರಶಿಕ್ಷಣ ಪರಿಷತ್ತು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು ಎಂದರೆ,–

(1) ಅಧ್ಯಾಪಕ ವಿದ್ಯಾರ್ಹತೆಗಳನ್ನು ನೇಮಿಸುವುದು.

(2) ನಿಯಮಿಸಬಹುದಾದಂಥ ಶುಲ್ಕಗಳನ್ನು ವಿಧಿಸುವುದು ಮತ್ತು ಸಂಗ್ರಹಿಸುವುದು.

(3) ಶಾಸನಗಳಿಗನುಸಾರವಾಗಿ ವಿಶ್ವವಿದ್ಯಾಲಯಕ್ಕೆ ವಿದ್ಯಾರ್ಥಿಗಳಿಗೆ ಪ್ರವೇಶ ನೀಡುವುದನ್ನು ನಿಯಂತ್ರಿಸುವುದು.

(4) ಅಧ್ಯಯನ ಮಂಡಳಿಗಳಿಗೆ ಸದಸ್ಯರನ್ನು ನೇಮಕ ಮಾಡುವುದು.

(5) (ಎ) ಶಾಸನಗಳಲ್ಲಿ ಹೇಳಿದ ಕಾರ್ಯವಿಧಾನಕ್ಕೆ ಅನುಸಾರವಾಗಿ ಮಂಡಳಿಗಳ ಶಿಫಾರಸ್ಸನ್ನು ಪರಿಗಣಿಸಿದ ತರುವಾಯ ರೆಫರಿ ಮತ್ತು ಪರೀಕ್ಷಕರನ್ನು ನೇಮಕ ಮಾಡುವುದು.

(ಬಿ) ಅವರ ಸಂಭಾವನೆಗಳನ್ನು ನಿಗದಿಪಡಿಸುವುದು.

(6) ವಿಶ್ವವಿದ್ಯಾಲಯದ ನಿವಾಸದ ಮತ್ತು ಶಿಸ್ತಿನ ಮೇಲ್ವಿಚಾರಣೆ ಮತ್ತು ನಿಯಂತ್ರಣ ಮತ್ತು ಅವರ ಆರೋಗ್ಯ ಮತ್ತು ಕ್ಷೇಮವನ್ನು ತಿಳಿದುಕೊಳ್ಳುವುದಕ್ಕಾಗಿ ವ್ಯವಸ್ಥೆ ಮಾಡುವುದು.

(7) ವಿಶ್ವವಿದ್ಯಾಲಯಗಳು ಸ್ಥಾಪಿಸಿದ ಮತ್ತು ನಿರ್ವಹಿಸುತ್ತಿರುವ ಗ್ರಂಥಾಲಯಗಳು, ವಸ್ತು ಸಂಗ್ರಹಾಲಯಗಳು, ಸಂಶೋಧನಾ ಸಂಸ್ಥೆಗಳು ಮತ್ತು ಇತರೆ ಸಂಸ್ಥೆಗಳನ್ನು ಪ್ರಾರಂಭಿಸುವುದು ಮತ್ತು ನಿರ್ವಹಿಸುವುದು;

(8) ವಿಶ್ವವಿದ್ಯಾಲಯವು ಪ್ರಾರಂಭಿಸಿದ ವಿದ್ಯಾರ್ಥಿನಿಲಯಗಳನ್ನು ನಿರ್ವಹಿಸುವುದು;

(9) ವಿಶ್ವವಿದ್ಯಾಲಯವು ಪ್ರಾರಂಭಿಸಿದ ಯಾವುದೇ ಪ್ರಕಟಣಾ ಬ್ಯೂರೋವನ್ನು ನಿರ್ವಹಿಸುವುದು;

(10) ವಿಶ್ವವಿದ್ಯಾಲಯದೊಳಗೆ ಸಂಶೋಧನೆಗೆ ಉತ್ತೇಜಿಸುವುದು; ಮತ್ತು ಅಂಥ ಸಂಶೋಧನೆಯ ವರದಿಗಳನ್ನು ಕಾಲಕಾಲಕ್ಕೆ ಪಡೆದುಕೊಳ್ಳುವುದು;

(11) ಶೈಕ್ಷಣಿಕ ವಿಷಯಕ್ಕೆ ಸಂಬಂಧಪಟ್ಟ ವಿಷಯಗಳನ್ನು ವಿನಿಯಮಗೊಳಿಸುವುದು;

(12) ಅಧ್ಯಯನ ವ್ಯಾಸಂಗ ಕ್ರಮಗಳನ್ನು ವಿನಿಯಮಗೊಳಿಸುವುದು;

(13) ವಿದ್ಯಾರ್ಥಿಗಳನ್ನು ಪರೀಕ್ಷೆಗಳಿಗೆ, ಪದವಿಗಳಿಗೆ, ಡಿಪ್ಲೋಮಗಳಿಗೆ, ಪ್ರಮಾಣಪತ್ರ ಕೋರ್ಸುಗಳಿಗೆ ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳಿಗೆ ಪ್ರವೇಶ ನೀಡತಕ್ಕ ವಿಷಯದ ಬಗ್ಗೆ ಪರೀಕ್ಷಾ ಯೋಜನೆಯನ್ನು ಮತ್ತು ಷರತ್ತುಗಳನ್ನು ವಿನಿಯಮಗೊಳಿಸುವುದು;

(14) ವಿಶ್ವವಿದ್ಯಾಲಯದ ವಿವಿಧ ಪರೀಕ್ಷೆಗಳ ಫಲಿತಾಂಶಗಳ ಘೋಷಣೆಯನ್ನು ವಿನಿಯಮಗೊಳಿಸುವುದು;

(15) ಕಾಲೇಜುಗಳಲ್ಲಿ ಮತ್ತು ಮಾನ್ಯತೆ ಪಡೆದ ಸಂಸ್ಥೆಗಳಲ್ಲಿ ಅಧ್ಯಯನ ಮತ್ತು ಬೋಧನೆಯನ್ನು ಸಮನ್ವಯಗೊಳಿಸುವುದನ್ನು ವಿನಿಯಮಗೊಳಿಸುವುದು;

(16) ವಿಶ್ವವಿದ್ಯಾಲಯದಲ್ಲಿ ಸಂಶೋಧನೆಗೆ ಉತ್ತೇಜನ ನೀಡುವುದಕ್ಕಾಗಿ ಮತ್ತು ಇತರ ವಿಶೇಷ ಅಧ್ಯಯನಗಳನ್ನು ಉತ್ತೇಜಿಸುವುದಕ್ಕಾಗಿ ಯೋಜನೆಗಳನ್ನು ರೂಪಿಸುವುದು;

(17) ಫ್ಯಾಕಲ್ಟಿಗಳಿಗೆ ವಿಷಯಗಳನ್ನು ಹಂಚಿಕೆ ಮಾಡುವುದಕ್ಕಾಗಿ ಪ್ರಸ್ತಾವಗಳನ್ನು ಮಾಡುವುದು ಮತ್ತು ತನ್ನ ಸದಸ್ಯರುಗಳನ್ನು ಫ್ಯಾಕಲ್ಟಿಗಳಿಗೆ ವಹಿಸಿಕೊಡುವುದು;

(18) ಪರೀಕ್ಷೆಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಸಂಬಂಧಪಟ್ಟಂತೆ ವಿನಾಯತಿ ನೀಡುವುದಕ್ಕಾಗಿ ಮಾನದಂಡಗಳನ್ನು ನಿರ್ಧರಿಸುವುದು;

(19) ವಿಶ್ವವಿದ್ಯಾಲಯವು ಅಗತ್ಯಪಡಿಸಿದ ಪ್ರಾಧ್ಯಾಪಕರ, ರೀಡರುಗಳ, ಉಪನ್ಯಾಸಕರ, ಮತ್ತು ಇತರ ಅಧ್ಯಾಪಕರ ಹುದ್ದೆಗಳನ್ನು ಪ್ರಾರಂಭಿಸುವುದಕ್ಕಾಗಿ ಮತ್ತು ಅಂಥ ಹುದ್ದೆಗಳಿಗಾಗಿ ಕರ್ತವ್ಯಗಳನ್ನು ನಿಯಮಿಸುವುದಕ್ಕಾಗಿ ಪ್ರಸ್ತಾವಗಳನ್ನು ಮಾಡುವುದು;

(20) ಫೆಲೋಶಿಪ್‌ಗಳು, ಟ್ರಾವಲಿಂಗ್ ಫೆಲೋಶಿಪ್, ವಿದ್ಯಾರ್ಥಿವೇತನಗಳು, ಶಿಷ್ಯವೇತನಗಳು, ಅಥವಾ ಪ್ರಶಸ್ತಿಗಳನ್ನು ಪ್ರಾರಂಭಿಸುವುದು ಮತ್ತು ನೀಡುವುದಕ್ಕಾಗಿ ಪ್ರಸ್ತಾವಗಳನ್ನು ಮಾಡುವುದು;

(21) ಪರೀಕ್ಷೆಗಳ ಸಮತೆಯನ್ನು ನಿಯಮಿಸುವುದಕ್ಕಾಗಿ ವಿನಿಯಮಗೊಳಿಸುವುದು;

(22) ಪದವಿಗಳು, ಡಿಪ್ಲೋಮಗಳು ಮತ್ತು ಇತರೆ ಶೈಕ್ಷಣಿಕ ಪ್ರಶಸ್ತಿಗಳಿಗಾಗಿ ಅರ್ಹತೆ ನೀಡುವ ಸಂಬಂಧದಲ್ಲಿ ವಿಶ್ವವಿದ್ಯಾಲಯದಲ್ಲಿ ಅನುಮೋದಿತ ಅಧ್ಯಯನ ವ್ಯಾಸಂಗ ಕ್ರಮಗಳಿಂದ ವಿನಾಯಿತಿ ನೀಡುವುದನ್ನು ವಿನಿಯಮಗೊಳಿಸುವುದು;

(23) ಸಂಶೋಧನೆಗಾಗಿ ಮತ್ತು ಕಲಿಕೆಯ ಮುಂದುವರಿಕೆಗೆ ಮತ್ತು ಪ್ರಸಾರಕ್ಕಾಗಿ ಸೂಕ್ತವಾಗಬಹುದಾದಂಥ ಕಲಿಕೆ ಮತ್ತು ಅಧ್ಯಯನ ವ್ಯಾಸಂಗ ಕ್ರಮಗಳ ಶಾಖೆಗಳಲ್ಲಿ ಶಿಕ್ಷಣ, ಬೋಧನೆ ಮತ್ತು ತರಬೇತಿಗಾಗಿ ಅವಕಾಶ ಕಲ್ಪಿಸುವುದು;

(24) ಮಾನ್ಯತೆ ಪಡೆದ ಸಂಸ್ಥೆಗಳು ವ್ಯಾಸಂಗವಿಷಯಗಳಲ್ಲಿ ವಿಶೇಷ ಅಧ್ಯಯನ ಕೈಗೊಳ್ಳುವುದು ಸಾಧ್ಯವಾಗುವಂತೆ ಮಾಡಲು ಏರ್ಪಾಡುಗಳನ್ನು ಮಾಡುವುದು;

(25) ಈ ಅಧಿನಿಯಮದ ಅಥವಾ ಶಾಸನಗಳ ಮೂಲಕ ಅದಕ್ಕೆ ಪ್ರದಾನ ಮಾಡಬಹುದಾದ ಅಥವಾ ವಿಧಿಸಬಹುದಾದಂಥ ಇತರೆ ಅಧಿಕಾರಗಳನ್ನು ಚಲಾಯಿಸುವುದು ಮತ್ತು ಅಂಥ ಕರ್ತವ್ಯಗಳನ್ನು ನೆರವೇರಿಸುವುದು;

(26) ಶಾಸನಗಳಿಗನುಸಾರವಾಗಿ ತನ್ನ ಯಾವುವೇ ಅಧಿಕಾರಗಳನ್ನು ಕುಲಪತಿಯವರಿಗೆ ಅಥವಾ ತನ್ನ ಸದಸ್ಯರ ಪೈಕಿಯಿಂದ ರಚಿಸಿದ ಸಮಿತಿಗೆ ಪ್ರತ್ಯಾಯೋಜಿಸುವುದು;

**26. ಪ್ರಶಿಕ್ಷಣ ಪರಿಷತ್ತಿನ ಸಭೆಗಳು:** (1) ಪ್ರಶಿಕ್ಷಣ ಪರಿಷತ್ತು ನಿಯಮಿಸಬಹುದಾದಂಥ ಸಮಯದಲ್ಲಿ ಮತ್ತು ಸ್ಥಳಗಳಲ್ಲಿ ಸಭೆ ಸೇರತಕ್ಕದ್ದು ಮತ್ತು (2) ಮತ್ತು (3)ನೇ ಉಪಪ್ರಕರಣಗಳ ಉಪಬಂಧಗಳಿಗೊಳಪಟ್ಟು ಸಭೆಯ ಕೋರಂ ಒಳಗೊಂಡಂತೆ

ಅದರ ಸಭೆಯಲ್ಲಿ ವ್ಯವಹರಿಸಬೇಕಾದ ವಿಷಯಗಳ ಸಂಬಂಧದಲ್ಲಿ ನಿಯಮಿಸಬಹುದಾದಂಥ ಕಾರ್ಯವಿಧಾನ ನಿಯಮಗಳನ್ನು ಪಾಲಿಸತಕ್ಕದ್ದು,–

ಪರಂತು ಪ್ರಶಿಕ್ಷಣ ಪರಿಷತ್ತು ಪ್ರತಿ ಮೂರು ತಿಂಗಳಿಗೊಮ್ಮೆ ಸಭೆ ಸೇರತಕ್ಕದ್ದು;

(2) ಕುಲಪತಿಯವರು ಅಥವಾ ಅವರ ಗೈರು ಹಾಜರಿಯಲ್ಲಿ ಸದಸ್ಯರು ಆಯ್ಕೆ ಮಾಡಿದ ಯಾವೊಬ್ಬ ಸದಸ್ಯರು ಪ್ರಶಿಕ್ಷಣ ಪರಿಷತ್ತಿನ ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು.

(3) ಪ್ರಶಿಕ್ಷಣ ಪರಿಷತ್ತಿನ ಯಾವುದೇ ಸಭೆಯಲ್ಲಿ ಎಲ್ಲಾ ಪ್ರಶ್ನೆಗಳನ್ನು ಹಾಜರಿದ್ದ ಮತ್ತು ಮತ ಚಲಾಯಿಸುವ ಸದಸ್ಯರ ಬಹುಮತದಿಂದ ನಿರ್ಧರಿಸತಕ್ಕದ್ದು ಮತ್ತು ಮತಗಳು ಸಮನಾಗಿ ಬಂದ ಸಂದರ್ಭದಲ್ಲಿ ಕುಲಪತಿಯವರು ಅಥವಾ ಸಂದರ್ಭಾನುಸಾರ ಅಧ್ಯಕ್ಷತೆ ವಹಿಸಿದ ಸದಸ್ಯರು ಎರಡನೆಯ ಅಥವಾ ನಿರ್ಣಾಯಕ ಮತ ಚಲಾಯಿಸತಕ್ಕದ್ದು;

(4) (ಎ) ಪ್ರಶಿಕ್ಷಣ ಪರಿಷತ್ತು ಸಮಾಲೋಚನೆಯ ಉದ್ದೇಶಕ್ಕಾಗಿ, ಪರಿಶೀಲನೆಯಲ್ಲಿರುವ ಯಾವುದೇ ವಿಷಯದಲ್ಲಿ ವಾಸ್ತವಿಕ ಅನುಭವದ ವಿಶೇಷ ಜ್ಞಾನವಿರುವ ಯಾವೊಬ್ಬ ವ್ಯಕ್ತಿಯು ಯಾವುದೇ ಸಭೆಗೆ ಹಾಜರಾಗಲು ಆಹ್ವಾನಿಸಬಹುದು. ಅಂಥವ್ಯಕ್ತಿಯು ಸಭೆಯಲ್ಲಿ ಮಾತನಾಡಬಹುದು ಮತ್ತು ಅನ್ಯಥಾ ಈ ಸಭೆಯ ನಡೆವಳಿಗಳಲ್ಲಿ ಭಾಗವಹಿಸಬಹುದು, ಆದರೆ ಮತಚಲಾಯಿಸಲು ಹಕ್ಕುಳ್ಳವನಾಗಿರತಕ್ಕದ್ದಲ್ಲ;

(ಬಿ) ಹಾಗೇ ಆಹ್ವಾನಿಸಲಾದ ವ್ಯಕ್ತಿಯು, ಪ್ರಶಿಕ್ಷಣ ಪರಿಷತ್ತಿನ ಸದಸ್ಯನಿಗೆ ಅನುಮತಿಸಬಹುದಾದಂಥ ದಿನಭತ್ಯೆ ಮತ್ತು ಪ್ರಯಾಣ ಭತ್ಯೆ ಪಡೆಯಲು ಹಕ್ಕುಳ್ಳವನಾಗಿರತಕ್ಕದ್ದು;

**27. ಫ್ಯಾಕಲ್ಟಿಗಳ ರಚನೆ ಮತ್ತು ಪ್ರಕಾರ್ಯಗಳು.**– (1) ವಿಶ್ವವಿದ್ಯಾಲಯವು, ಸಂಸ್ಕೃತ ಭಾಷೆಗಳು, ಸಂಸ್ಕೃತದಲ್ಲಿ ವಿಜ್ಞಾನಗಳು, ಲಲಿತ ಕಲೆಗಳು, ಸಮಾಜ ವಿಜ್ಞಾನಗಳ ಫ್ಯಾಕಲ್ಟಿಗಳನ್ನು ಮತ್ತು ಶಾಸನಗಳ ಮೂಲಕ ನಿಯಮಿಸಬಹುದಾದಂಥ ಇತರ ಫ್ಯಾಕಲ್ಟಿಗಳನ್ನು ಹೊಂದಿರತಕ್ಕದ್ದು.

(2) ಫ್ಯಾಕಲ್ಟಿಗಳ ರಚನೆ ಮತ್ತು ಪ್ರಕಾರ್ಯಗಳು ಇತರ ಎಲ್ಲ ವಿಷಯಗಳಲ್ಲಿ, ನಿಯಮಿಸಬಹುದಾದಂತೆ ಇರತಕ್ಕದ್ದು.

(3) ಪ್ರತಿಯೊಂದು ಫ್ಯಾಕಲ್ಟಿಯು ಮೊದಲನೇ ಶಾಸನಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ವಿದ್ಯಾ ವಿಭಾಗಗಳನ್ನು ಒಳಗೊಂಡಿರತಕ್ಕದ್ದು.

**28. ಹಣಕಾಸು ಸಮಿತಿ.**– (1) ಹಣಕಾಸು ಸಮಿತಿಯು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) ಕುಲಪತಿ,

(ಬಿ) ಹಣಕಾಸಿನ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ,

(ಸಿ) ಶಿಕ್ಷಣದ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ,

(ಡಿ) ಪ್ರಶಿಕ್ಷಣ ಪರಿಷತ್ತು ತನ್ನ ಸದಸ್ಯರ ಪೈಕಿಯಿಂದ ನಾಮನಿರ್ದೇಶಿಸಿದ ಇಬ್ಬರು ಸದಸ್ಯರಲ್ಲಿ ಒಬ್ಬರು ಪ್ರಾಧ್ಯಾಪಕರಾಗಿರತಕ್ಕದ್ದು ಮತ್ತು ಇನ್ನೊಬ್ಬರು ಪ್ರಶಿಕ್ಷಣ ಪರಿಷತ್ತಿಗೆ ಕುಲಾಧಿಪತಿಯವರಿಂದ ನಾಮ ನಿರ್ದೇಶಿತರಾದ ವ್ಯಕ್ತಿಯಾಗಿರತಕ್ಕದ್ದು.

(2) ಯಾವುದೇ ಕಾರಣದಿಂದಾಗಿ (1)ನೇ ಉಪ-ಪ್ರಕರಣದ (ಬಿ) ಖಂಡ ಅಥವಾ (ಸಿ) ಖಂಡದಲ್ಲಿ ಉಲ್ಲೇಖಿಸಲಾದ ಅಧಿಕಾರಿಯು ಹಣಕಾಸು ಸಮಿತಿಯ ಯಾವುದೇ ಸಭೆಗೆ ಹಾಜರಾಗಲು ಅಸಮರ್ಥರಾದರೆ ಅವರು ಸರ್ಕಾರದ ಉಪ-ಕಾರ್ಯದರ್ಶಿ ದರ್ಜೆಗೆ ಕಡಿಮೆಯದಲ್ಲದ ದರ್ಜೆಯ ತನ್ನ ಇಲಾಖೆಯ ಯಾವೊಬ್ಬ ಅಧಿಕಾರಿಯನ್ನು ಅಂಥ ಸಭೆಯಲ್ಲಿ ಹಾಜರಿರಲು ಪ್ರತಿನಿಯೋಜಿಸಬಹುದು. ಅಧಿಕಾರಿ ಅಥವಾ ಪ್ರತಿನಿಯೋಜಿತ ವ್ಯಕ್ತಿಯು ಸಮಿತಿಯ ಚರ್ಚೆಗಳಲ್ಲಿ ಭಾಗವಹಿಸಲು ಮತ್ತು ಮತ ನೀಡಲು ಹಕ್ಕುಳ್ಳವನಾಗಿರತಕ್ಕದ್ದು.

(3) ಕುಲಪತಿಯವರು, ಹಣಕಾಸು ಸಮಿತಿಯ ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು ಮತ್ತು ಹಣಕಾಸು ಅಧಿಕಾರಿಯು ಪದನಿಮಿತ್ತ ಕಾರ್ಯದರ್ಶಿಯಾಗಿರತಕ್ಕದ್ದು.

(4) ಪದನಿಮಿತ್ತ ಸದಸ್ಯರಲ್ಲದ ಹಣಕಾಸು ಸಮಿತಿಯ ಎಲ್ಲ ಸದಸ್ಯರು ಮೂರು ವರ್ಷಗಳ ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು.

(5) ಹಣಕಾಸು ಸಮಿತಿಯ ಲೆಕ್ಕಪತ್ರಗಳನ್ನು ಪರೀಕ್ಷಿಸಲು ಮತ್ತು ವೆಚ್ಚಗಳ ಪ್ರಸ್ತಾವಗಳನ್ನು ಪರಿಶೀಲಿಸಲು ಕಡೇಪಕ್ಷ ಮೂರು ತಿಂಗಳಿಗೊಮ್ಮೆಯಾದರೂ ಸಭೆ ಸೇರತಕ್ಕದ್ದು;

(6) ಹಣಕಾಸು ಅಧಿಕಾರಿಯು ಸಿದ್ಧಪಡಿಸಿದ ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕ ಪತ್ರಗಳನ್ನು ಪರ್ಯಾಲೋಚನೆ ಮತ್ತು ಟೀಕೆ-ಟಿಪ್ಪಣಿಗಳಿಗಾಗಿ ಹಣಕಾಸು ಸಮಿತಿಯ ಮುಂದೆ ಮಂಡಿಸತಕ್ಕದ್ದು ಮತ್ತು ತದನಂತರ ಅನುಮೋದನೆಗಾಗಿ ಪ್ರಶಾಸನ ಸಭೆಗೆ ಸಲ್ಲಿಸತಕ್ಕದ್ದು.

(7) ಹಣಕಾಸು ಸಮಿತಿಯು, ಉತ್ಪಾದನಾಪರ ಕಾರ್ಯಗಳ ಸಂದರ್ಭಗಳಲ್ಲಿ ಸಾಲಗಳಿಂದ ಬರುವ ಉತ್ಪತ್ತಿಗಳನ್ನು ಒಳಗೊಳ್ಳಬಹುದಾದ ವಿಶ್ವವಿದ್ಯಾಲಯದ ಆದಾಯ ಮತ್ತು ಸಂಪನ್ಮೂಲಗಳನ್ನು ಆಧರಿಸಿ ಆ ವರ್ಷದ ಒಟ್ಟು ಆವರ್ತಕ ವೆಚ್ಚ ಮತ್ತು ಒಟ್ಟು ಅನಾವರ್ತಕ ವೆಚ್ಚಗಳಿಗಾಗಿ ಪರಿಮಿತಿಗಳನ್ನು ಶಿಫಾರಸ್ಸು ಮಾಡತಕ್ಕದ್ದು.

(8) ಹಣಕಾಸು ಸಮಿತಿಯು,-

(ಎ) ವಿಶ್ವವಿದ್ಯಾಲಯದ ಹಣಕಾಸು ಸ್ಥಿತಿಯನ್ನು ಆಗಿಂದಾಗ್ಗೆ ಪುನರವಲೋಕನ ಮಾಡತಕ್ಕದ್ದು;

(ಬಿ) ವಾರ್ಷಿಕ  ಹಣಕಾಸು ಅಂದಾಜುಗಳಲ್ಲಿ ಬಂಡವಾಳ ಹೂಡಿಕೆ ಅಥವಾ ವೆಚ್ಚಕ್ಕೆ ಯಾವುದೇ ಹಣದ ಏರ್ಪಾಡು ಮಾಡಿಲ್ಲದ ಅಥವಾ ವಾರ್ಷಿಕ ಹಣಕಾಸು ಅಂದಾಜುಗಳಲ್ಲಿ ಏರ್ಪಾಡು ಮಾಡಿರುವ ಮೊಬಲಗನ್ನು ಮೀರಿದ ವೆಚ್ಚವನ್ನು ಒಳಗೊಳ್ಳುವ ಪ್ರತಿಯೊಂದು ಪ್ರಸ್ತಾವದ ಬಗ್ಗೆ ಪ್ರಶಿಕ್ಷಣ ಪರಿಷತ್ತಿಗೆ ಶಿಫಾರಸ್ಸು ಮಾಡತಕ್ಕದ್ದು;

(ಸಿ) ವಿಶ್ವವಿದ್ಯಾಲಯದ ಲೆಕ್ಕಪತ್ರಗಳನ್ನು ನಿರ್ವಹಿಸುವುದಕ್ಕಾಗಿ ವಿಧಾನಗಳನ್ನು ಮತ್ತು ಪ್ರಕ್ರಿಯೆಗಳನ್ನು ಮತ್ತು ರೀತಿಗಳನ್ನು ನಿಯಮಿಸತಕ್ಕದ್ದು;

(ಡಿ) ವಿಶ್ವವಿದ್ಯಾಲಯದ ಹಣಕಾಸಿಗೆ ಸಂಬಂಧಪಟ್ಟ ಎಲ್ಲ ವಿಷಯಗಳ ಬಗ್ಗೆ ಪ್ರಶಿಕ್ಷಣ ಪರಿಷತ್ತಿಗೆ ಶಿಫಾರಸ್ಸುಗಳನ್ನು ಮಾಡತಕ್ಕದ್ದು; ಮತ್ತು

(ಇ) ನಿಯಮಿಸಬಹುದಾದಂಥ ಇತರ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.

(9) ಹಣಕಾಸು ಅಧಿಕಾರಿಯು ಸಿದ್ಧಪಡಿಸಿದ ವಿಶ್ವವಿದ್ಯಾಲಯದ ಹಣಕಾಸು ಅಂದಾಜುಗಳನ್ನು ಪರ್ಯಾಲೋಚನೆ ಮತ್ತು ಟೀಕೆ-ಟಿಪ್ಪಣಿಗಳಿಗಾಗಿ ಹಣಕಾಸು ಸಮಿತಿಯ ಮುಂದೆ ಮಂಡಿಸತಕ್ಕದ್ದು. ನಂತರ ಪರ್ಯಾಲೋಚನೆಗಾಗಿ, ಸದರಿ ಅಂದಾಜುಗಳನ್ನು ಹಣಕಾಸು ಸಮಿತಿಯಿಂದ ಮಾರ್ಪಾಟಾದ ರೂಪದಲ್ಲಿ ಪ್ರಶಿಕ್ಷಣ ಪರಿಷತ್ತಿನ ಮುಂದೆ ಮಂಡಿಸತಕ್ಕದ್ದು. ಪ್ರಶಿಕ್ಷಣ ಪರಿಷತ್ತು ಹಣಕಾಸು ಸಮಿತಿಯು ಮಾಡಿದ ಮಾರ್ಪಾಡುಗಳನ್ನು ಅಂಗೀಕರಿಸಬಹುದು.

**29. ಅಧ್ಯಯನ ಮಂಡಲಿಗಳು.-** ಪ್ರತಿಯೊಂದು ಬೋಧನಾ ವಿಭಾಗಕ್ಕೆ ಲಗತ್ತಾಗಿ ಸೇರಿದಂತೆ ಅಧ್ಯಯನ ಮಂಡಲಿಗಳು ಇರತಕ್ಕದ್ದು. ಅಧ್ಯಯನ ಮಂಡಲಿಗಳ ರಚನೆ ಮತ್ತು ಅಧಿಕಾರಗಳು ಶಾಸನ ನಿಯಮಿಸಬಹುದಾದಂತೆ ಇರತಕ್ಕದ್ದು.

**30. ಇತರ ಪ್ರಾಧಿಕಾರಗಳ ರಚನೆ.-** ಶಾಸನವು ವಿಶ್ವವಿದ್ಯಾಲಯದ ಪ್ರಾಧಿಕಾರಗಳೆಂದು ಘೋಷಿಸಬಹುದಾದಂಥ ಇತರ ನಿಕಾಯಗಳ ರಚನೆಗೆ ನಿಯಮಿಸಬಹುದಾದ ರೀತಿಯಲ್ಲಿ ಉಪಬಂಧ ಕಲ್ಪಿಸತಕ್ಕದ್ದು.

**31. ಸದಸ್ಯರ ಅನರ್ಹತೆಗಳು:** (1) ಒಬ್ಬ ವ್ಯಕ್ತಿಯು ವಿಶ್ವವಿದ್ಯಾಲಯದ ಯಾವುವೇ ಪ್ರಾಧಿಕಾರಗಳ ಸದಸ್ಯನಾಗಿ ನಾಮನಿರ್ದೇಶಿತನಾಗಲು ಅಥವಾ ನಾಮನಿರ್ದೇಶನದ ದಿನಾಂಕದಂದು ಆತನು,

(ಎ) ಅಸ್ವಸ್ಥ ಚಿತ್ತನಾಗಿದ್ದರೆ;

(ಬಿ) ಅನುನ್ಮುಕ್ತ ದಿವಾಳಿಯಾಗಿದ್ದಾನೆಂದು ನ್ಯಾಯನಿರ್ಣಿತನಾಗಿದ್ದರೆ;

(ಸಿ) ನೈತಿಕ ಅಧಃಪತನವನ್ನು ಒಳಗೊಳ್ಳುವ ಯಾವುದೇ ಅಪರಾಧಕ್ಕಾಗಿ ಕ್ರಿಮಿನಲ್ ನ್ಯಾಯಾಲಯದಿಂದ ಕಾರವಾಸ ಶಿಕ್ಷೆಗೆ ಅಪರಾಧ ನಿರ್ಣಿತನಾಗಿದ್ದರೆ;

– ಅನರ್ಹನಾಗಿರತಕ್ಕದ್ದು;

(2) ಅನರ್ಹತೆಗೆ ಸಂಬಂಧಪಟ್ಟಂತೆ ಯಾವುದೇ ವಿವಾದ ಅಥವಾ ಸಂದೇಹವಿದ್ದಲ್ಲಿ ಪ್ರಶಾಸನ ಸಭೆಯು (1)ನೇ ಉಪ ಪ್ರಕರಣದ ಅಡಿಯಲ್ಲಿ ಆ ವ್ಯಕ್ತಿಯು ಅನರ್ಹನಾಗಿರುವನೇ ಅಥವಾ ಇಲ್ಲವೇ ಎಂಬುದನ್ನು ನಿರ್ಧರಿಸತಕ್ಕದ್ದು. ಮತ್ತು ಅದರ ತೀರ್ಮಾನವು ಅಂತಿಮವಾಗಿರತಕ್ಕದ್ದು.

(3) ಈ ಅಧಿನಿಯಮದ ಅಡಿಯಲ್ಲಿ ಯಾವುವೇ ಪ್ರಾಧಿಕಾರಗಳಿಗೆ ನಾಮನಿರ್ದೇಶಿತನಾದ ಯಾವೊಬ್ಬ ವ್ಯಕ್ತಿಯು, ಸಂಬಂಧಪಟ್ಟ ನಾಮನಿರ್ದೇಶನ ಮಾಡುವ ಪ್ರಾಧಿಕಾರದ ಇಷ್ಟಪರ್ಯಂತ ಪದಧಾರಣ ಮಾಡತಕ್ಕದ್ದು.

(4) ಯಾವುವೇ ಪ್ರಾಧಿಕಾರಗಳಿಗೆ ನಾಮನಿರ್ದೇಶಿತನಾದ ಯಾವೊಬ್ಬ ವ್ಯಕ್ತಿಯನ್ನು, ಆತನ ದುರ್ವರ್ತನೆ, ದುರ್ನಡತೆ ಅಥವಾ ಅನ್ಯಥಾ ಕಾರಣದ ಮೇಲೆ ವಿಚಾರಣೆಯನ್ನು ನಡೆಸಿದ ತರುವಾಯ ಕುಲಾಧಿಪತಿಯವರು ಯಾವುದೇ ಕಾಲದಲ್ಲಿ ಸದಸ್ಯತ್ವದಿಂದ ತೆಗೆದುಹಾಕಬಹುದು.:

ಪರಂತು, ಪ್ರಶಾಸನ ಸಭೆಯ ಮತ್ತು ಪ್ರಶಿಕ್ಷಣ ಪರಿಷತ್ತಿನ ಯಾವೊಬ್ಬ ಸದಸ್ಯನು ವಯೋನಿವೃತ್ತನಾದಾಗ ಆತನು ಸದಸ್ಯತ್ವವನ್ನು ಹೊಂದಿರುವುದ ನಿಂತುಹೋಗತಕ್ಕದ್ದು.

**32. ಕೆಲವೊಂದು ಸಂದರ್ಭಗಳಲ್ಲಿ ಪ್ರಶಾಸನ ಸಭೆ ಮತ್ತು ಪ್ರಶಿಕ್ಷಣ ಪರಿಷತ್ತಿಗೆ ನಾಮನಿರ್ದೇಶನ ಹೊಂದಲು ಅನರ್ಹತೆಗಳು:** (1) 21 ಅಥವಾ 24ನೇ ಪ್ರಕರಣಗಳಲ್ಲಿ ಏನೇ ಇದ್ದರೂ ಈ ಮುಂದಿನ ಪ್ರಾಧಿಕಾರಗಳಲ್ಲಿ ಯಾವುದಾದರೊಂದರಲ್ಲಿ ಅಥವಾ ಅವೆರಡರಲ್ಲೂ ಒಟ್ಟು ಆರು ವರ್ಷಗಳ ಕಾಲ ಸದಸ್ಯನಾಗಿರುವ ಯಾವೊಬ್ಬ ವ್ಯಕ್ತಿಯು, ಎಂದರೆ,–

(ಎ) ಪ್ರಶಾಸನ ಸಭೆ; ಮತ್ತು

(ಬಿ) ಪ್ರಶಿಕ್ಷಣ ಪರಿಷತ್ತು ಆ ಎರಡು ಪ್ರಾಧಿಕಾರಗಳಲ್ಲಿ ಯಾವುದಕ್ಕೂ ನಾಮನಿರ್ದೇಶನ ಹೊಂದಲು ಅರ್ಹನಾಗಿರತಕ್ಕದ್ದಲ್ಲ.

**ವಿವರಣೆ:–** ಈ ಉಪ ಪ್ರಕರಣದಲ್ಲಿ ಹೇಳಿದ ಆರು ವರ್ಷಗಳ ಒಟ್ಟು ಅವಧಿಯನ್ನು ಲೆಕ್ಕ ಹಾಕುವಾಗ ಒಬ್ಬ ವ್ಯಕ್ತಿ ಒಂದು ಪ್ರಾಧಿಕಾರದಲ್ಲಿ ನಾಮನಿರ್ದೇಶಿತನಾಗಿ ಅಧಿಕಾರ ಸ್ಥಾನದಲ್ಲಿದ್ದ ಒಟ್ಟು ಮೂರು ವರ್ಷಗಳು ಇನ್ನೊಂದು ಪ್ರಾಧಿಕಾರದಲ್ಲಿ ನಾಮನಿರ್ದೇಶಿತನಾಗಿ ಅಧಿಕಾರ ಸ್ಥಾನದಲ್ಲಿದ್ದ ಒಟ್ಟು ಮೂರು ವರ್ಷಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು ಮತ್ತು ಅದಕ್ಕನುಸಾರವಾಗಿ ಆ ವ್ಯಕ್ತಿಯು ಅಂಥ ಪ್ರಾಧಿಕಾರಗಳಲ್ಲಿ ಯಾವುದೊಂದಕ್ಕೆ ನಾಮನಿರ್ದೇಶಿತನಾಗಲು ಅರ್ಹನಾಗತಕ್ಕದ್ದಲ್ಲ;

ಪರಂತು ಈ ಉಪ ಪ್ರಕರಣದ ಉದ್ದೇಶಕ್ಕಾಗಿ ಒಬ್ಬ ವ್ಯಕ್ತಿಯನ್ನು ಒಂದು ಪ್ರಾಧಿಕಾರಕ್ಕೆ ನಾಮನಿರ್ದೇಶನ ಮಾಡಿದ್ದು ಮೊದಲು ಹೇಳಿದ ಪ್ರಾಧಿಕಾರದ ಸದಸ್ಯತ್ವದ ಕಾರಣದಿಂದ ಎರಡನೇ ಪ್ರಾಧಿಕಾರಕ್ಕೆ ಅವನು ಸದಸ್ಯನಾದರೆ ಆತನು ಮೊದಲನೆ ಪ್ರಾಧಿಕಾರದ ಸದಸ್ಯನಾಗಿದ್ದ ಅವಧಿಯನ್ನು ಮಾತ್ರ ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು.

(2) (1)ನೇ ಉಪ ಪ್ರಕರಣದಲ್ಲಿರುವುದು ಯಾವುದೂ,–

(ಎ) 20ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ (ಜಿ) ಬಾಬಿನಲ್ಲಿ ಹೇಳಿದ ಪ್ರಶಾಸನ ಸಭೆ ಸದಸ್ಯರನ್ನು ಬಿಟ್ಟು ಉಳಿದ ಸದಸ್ಯರಿಗೆ,

(ಬಿ) 24ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಯಿಂದ (ಎಫ್) ವರೆಗೆ ಹೇಳಿದ ಸದಸ್ಯರಿಗೆ,

– ಅನ್ವಯಿಸಿತಕ್ಕದ್ದಲ್ಲ.

**33. ಆಕಸ್ಮಿಕ ಖಾಲಿಸ್ಥಾನಗಳನ್ನು ಭರ್ತಿ ಮಾಡುವುದು.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ಇತರ ನಿಕಾಯದ ಪದನಿಮಿತ್ತ ಸದಸ್ಯರಲ್ಲದ ಸದಸ್ಯರ ಪೈಕಿ ಉಂಟಾಗುವ ಎಲ್ಲ ಆಕಸ್ಮಿಕ ಖಾಲಿಸ್ಥಾನಗಳನ್ನು, ಆ ಸದಸ್ಯನನ್ನು ನಾಮನಿರ್ದೇಶಿಸಿದ ವ್ಯಕ್ತಿ ಅಥವಾ ನಿಕಾಯವು, ಅನುಕೂಲವಾದಷ್ಟು ಬೇಗನೆ ಭರ್ತಿ ಮಾಡತಕ್ಕದ್ದು ಮತ್ತು ಆಕಸ್ಮಿಕ ಖಾಲಿಸ್ಥಾನದಲ್ಲಿ ನಾಮನಿರ್ದೇಶಿತನಾದ ವ್ಯಕ್ತಿಯು, ಯಾವ ವ್ಯಕ್ತಿಯ ಸ್ಥಾನದಲ್ಲಿ ಭರ್ತಿಗೊಂಡಿರುವನೋ ಆ ವ್ಯಕ್ತಿಯು ಸದಸ್ಯನಾಗಿರುತ್ತಿದ್ದ ಉಳಿದ ಅವಧಿಯವರೆಗೆ ಅಂಥ ಪ್ರಾಧಿಕಾರ ಅಥವಾ ನಿಕಾಯದ ಸದಸ್ಯನಾಗಿರತಕ್ಕದ್ದು:

ಪರಂತು, ಅಂಥ ಯಾವುದೇ ಆಕಸ್ಮಿಕ ಖಾಲಿಸ್ಥಾನವು, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಇತರ ನಿಕಾಯದ ಸದಸ್ಯನ ಪದಾವಧಿಯು ಮುಕ್ತಾಯವಾಗುವ ದಿನಾಂಕಕ್ಕೆ ಮುಂಚಿನ ಆರು ತಿಂಗಳೊಳಗಾಗಿ ಉಂಟಾದರೆ, ಅಂಥ ಯಾವುದೇ ಖಾಲಿಸ್ಥಾನವನ್ನು ಭರ್ತಿಮಾಡತಕ್ಕದ್ದಲ್ಲ.

**34. ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಮತ್ತು ನಿಕಾಯಗಳ ವ್ಯವಹರಣೆಗಳು, ಖಾಲಿಸ್ಥಾನಗಳು ಇರುವುದರಿಂದಾಗಿ ಅಮಾನ್ಯವಾಗತಕ್ಕದ್ದಲ್ಲ.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಇತರ ನಿಕಾಯದ ಯಾವುದೇ ಕೃತ್ಯ ಅಥವಾ ವ್ಯವಹರಣೆಯು, ಯಾವುದೇ ಖಾಲಿಸ್ಥಾನ ಇದೆ ಎಂಬ ಅಥವಾ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಇತರ ನಿಕಾಯದ ಸದಸ್ಯನ ನೇಮಕಾತಿಯಲ್ಲಿನ ಯಾವುದೇ ದೋಷ ಅಥವಾ ಅಕ್ರಮತೆಯ ಅಥವಾ ಪ್ರಕರಣದ ಗುಣಗಳಿಗೆ ಬಾಧಕವಾಗದ, ಅಂಥ ಕೃತ್ಯ ಅಥವಾ ವ್ಯವಹರಣೆಯಲ್ಲಿನ ಯಾವುದೇ ದೋಷ ಅಥವಾ ಅಕ್ರಮತೆಯ ಕಾರಣ ಮಾತ್ರದಿಂದಲೇ ಅಮಾನ್ಯವಾಗತಕ್ಕದ್ದಲ್ಲ.

**35. ವಿಶ್ವವಿದ್ಯಾಲಯದ ಸದಸ್ಯತ್ವದಿಂದ ತೆಗೆದುಹಾಕುವುದು.–** (1) ಪ್ರಶಾಸನ ಸಭೆಯು, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಸದಸ್ಯತ್ವದಿಂದ ಯಾವೊಬ್ಬ ವ್ಯಕ್ತಿಯನ್ನು, ಅಂಥ ವ್ಯಕ್ತಿಯು, ಕಾರ್ಯಕಾರಿ ಸಮಿತಿಯ ಅಭಿಪ್ರಾಯದಲ್ಲಿ ನೈತಿಕ ಅಧಃಪತನವನ್ನು ಒಳಗೊಳ್ಳುವ ಒಂದು ಅಪರಾಧಕ್ಕಾಗಿ ಕ್ರಿಮಿನಲ್ ನ್ಯಾಯಾಲಯದಿಂದ ಅಪರಾಧ ನಿರ್ಣಿತನಾಗಿ ಅಥವಾ ಗುರುತರ ದುರ್ವರ್ತನೆಯ ದೋಷಿಯಾಗಿದ್ದರೆ ಪ್ರಶಾಸನ ಸಭೆಯು ಒಟ್ಟು ಸದಸ್ಯರ ಬಹುಮತದಿಂದ ಮತ್ತು ಸಭೆಯಲ್ಲಿ ಹಾಜರಿದ್ದು ಮತ ನೀಡುವ ಪ್ರಶಾಸನ ಸಭೆಯ ಮೂರನೇ ಎರಡರಷ್ಟು ಸಂಖ್ಯೆಯ ಸದಸ್ಯರಿಗಿಂತ ಕಡಿಮೆಯಿಲ್ಲದ ಬಹುಮತದಿಂದ ಒಂದು ಗೊತ್ತುವಳಿಯನ್ನು ಅಂಗೀಕರಿಸಿ ಆ ಬಗ್ಗೆ ಲಿಖಿತದಲ್ಲಿ ಆದೇಶವನ್ನು ಹೊರಡಿಸುವ ಮೂಲಕ ತೆಗೆದು

ಹಾಕಬಹುದು ಮತ್ತು ಅದೇ ಕಾರಣಕ್ಕಾಗಿ ಪ್ರಶಾಸನ ಸಭೆಯು ವಿಶ್ವವಿದ್ಯಾಲಯವು ಆ ವ್ಯಕ್ತಿಗೆ ಪ್ರದಾನ ಮಾಡಿರುವ ಅಥವಾ ನೀಡಿರುವ ಯಾವುದೇ ಪದವಿ ಅಥವಾ ಡಿಪ್ಲೋಮಾವನ್ನು ಹಿಂತೆಗೆದುಕೊಳ್ಳಬಹುದು.

(2) ಪ್ರಶಾಸನ ಸಭೆಯು, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಸದಸ್ಯತ್ವದಿಂದ ಯಾವೊಬ್ಬ ವ್ಯಕ್ತಿಯನ್ನು, ಅವನು ಅಸ್ವಸ್ಥಚಿತ್ತದವನಾದರೆ, ಕಿವುಡನಾದರೆ, ಮೂಕನಾದರೆ, ಅಥವಾ ಕುಷ್ಠರೋಗದಿಂದ ನರಳುತ್ತಿದ್ದರೆ ಅಥವಾ ದಿವಾಳಿಯೆಂದು ನ್ಯಾಯ ನಿರ್ಣಯಿಸಬೇಕೆಂದು ಅರ್ಜಿ ಸಲ್ಲಿಸಿದ್ದರೆ ಅಥವಾ ಹಾಗೆಂದು ನ್ಯಾಯ ನಿರ್ಣೀತನಾಗಿದ್ದರೆ, ಈ ಬಗ್ಗೆ ಹೊರಡಿಸಲಾದ ಲಿಖಿತ ಆದೇಶದ ಮೂಲಕ ತೆಗೆದುಹಾಕಬಹುದು.

(3) ಈ ಪ್ರಕರಣದ ಅಡಿಯಲ್ಲಿ ಯಾವೊಬ್ಬ ವ್ಯಕ್ತಿಯ ವಿರುದ್ಧ ತೆಗೆದುಕೊಳ್ಳಲು ಉದ್ದೇಶಿಸಿದ ಕ್ರಮದ ವಿರುದ್ಧ ಕಾರಣ ತೋರಿಸಲು ಅವನಿಗೆ ಒಂದು ಯುಕ್ತ ಅವಕಾಶವನ್ನು ನೀಡಿದ ಹೊರತು, ಅವನ ಮೇಲೆ ಕ್ರಮವನ್ನು ಕೈಗೊಳ್ಳತಕ್ಕದ್ದಲ್ಲ.

(4) ಸಂದರ್ಭಾನುಸಾರ, (1)ನೇ ಉಪ-ಪ್ರಕರಣದ ಅಥವಾ (2)ನೇ ಉಪ-ಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಆದೇಶದ ಒಂದು ಪ್ರತಿಯನ್ನು ಅದನ್ನು ಹಾಗೆ ಹೊರಡಿಸಿದ ತರುವಾಯ ಸಾಧ್ಯವಾದಷ್ಟು ಬೇಗನೆ, ನಿಯಮಿಸಲಾದ ರೀತಿಯಲ್ಲಿ ಸಂಬಂಧಪಟ್ಟ ವ್ಯಕ್ತಿಗೆ ಕಳುಹಿಸತಕ್ಕದ್ದು.

**36. ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಮತ್ತು ನಿಕಾಯಗಳ ರಚನೆಗೆ ಸಂಬಂಧಪಟ್ಟ ವಿವಾದಗಳು.-** ಯಾವೊಬ್ಬ ವ್ಯಕ್ತಿಯು, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ವಿಶ್ವವಿದ್ಯಾಲಯದ ಇತರ ನಿಕಾಯದ ಸದಸ್ಯನಾಗಿ ಯಥೋಚಿತವಾಗಿ ನಾಮನಿರ್ದೇಶಿತನಾಗಿದ್ದಾನೆಯೇ ಅಥವಾ ಸದಸ್ಯನಾಗಿರಲು ಹಕ್ಕುಳ್ಳವನಾಗಿದ್ದಾನೆಯೇ ಎಂಬ ಬಗ್ಗೆ ಯಾವುದೇ ಪ್ರಶ್ನೆ ಉದ್ಭವಿಸಿದರೆ, ಪ್ರಶ್ನೆಯನ್ನು ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಅದರ ಬಗ್ಗೆ ಅವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

**37. ಸಮಿತಿಗಳ ರಚನೆ.-** ವಿಶ್ವವಿದ್ಯಾಲಯದ ಎಲ್ಲ ಪ್ರಾಧಿಕಾರಗಳು ಸಮಿತಿಗಳನ್ನು ರಚಿಸಲು ಅಥವಾ ಪುನರ್ ರಚಿಸಲು ಮತ್ತು ತಾವು ಉಚಿತವೆಂದು ಭಾವಿಸುವ ಅಂಥ ತಮ್ಮ ಅಧಿಕಾರಗಳನ್ನು ಅವುಗಳಿಗೆ ಪ್ರತ್ಯಾಯೋಜಿಸಲು ಅಧಿಕಾರ ಹೊಂದಿರತಕ್ಕದ್ದು. ಅಂಥ ಸಮಿತಿಗಳು, ಅನ್ಯಥಾ ಉಪಬಂಧಿಸಿರುವುದನ್ನುಳಿದು, ಸಂಬಂಧಪಟ್ಟ ಪ್ರಾಧಿಕಾರದ ಸದಸ್ಯರನ್ನು ಮತ್ತು ಪ್ರಾಧಿಕಾರವು ಪ್ರತಿಯೊಂದು ಸಂದರ್ಭದಲ್ಲಿ ತಾನು ಉಚಿತವೆಂದು ಭಾವಿಸಬಹುದಾದಂಥ ಇತರ ವ್ಯಕ್ತಿಗಳು, ಯಾರಾದರೂ ಇದ್ದರೆ, ಅವರನ್ನು ಒಳಗೊಂಡಿರತಕ್ಕದ್ದು.

## ಅಧ್ಯಾಯ – V

## ಶಾಸನಗಳು

**38. ಶಾಸನಗಳು.-** ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಶಾಸನಗಳು, ಈ ಮುಂದಿನ ಎಲ್ಲ ಅಥವಾ ಯಾವುವೇ ವಿಷಯಗಳಿಗಾಗಿ ಉಪಬಂಧ ಕಲ್ಪಿಸಬಹುದು, ಎಂದರೆ: –

(1) ಪದವಿಗಳನ್ನು ಪ್ರದಾನ ಮಾಡಲು ಘಟಿಕೋತ್ಸವವನ್ನು ಏರ್ಪಡಿಸುವುದು;

(2) ಗೌರವ ಪದವಿಗಳನ್ನು ಮತ್ತು ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು;

(3) ವಿಶ್ವವಿದ್ಯಾಲಯದ ಪ್ರಾಧಿಕಾರಗಳ ರಚನೆ, ಅಧಿಕಾರಗಳು ಮತ್ತು ಪ್ರಕಾರ್ಯಗಳು;

(4) ವಿಶ್ವವಿದ್ಯಾಲಯದ ಪ್ರಾಧಿಕಾರಗಳ ಸದಸ್ಯರ ಪೈಕಿಯಿಂದ ಖಾಲಿಸ್ಥಾನಗಳನ್ನು ಭರ್ತಿ ಮಾಡುವ ರೀತಿ;

(5) ಪ್ರಾಧಿಕಾರಗಳ ಮತ್ತು ಅವುಗಳ ಸಮಿತಿಗಳ ಸದಸ್ಯರಿಗೆ ಸಂದಾಯ ಮಾಡಬೇಕಾಗಿರುವ ಭತ್ಯೆಗಳು;

(6) ಪ್ರಾಧಿಕಾರಗಳ ಆದೇಶಗಳ ಅಥವಾ ತೀರ್ಮಾನಗಳ ಪ್ರಮಾಣೀಕರಣ;

(7) ಪ್ರಾಧಿಕಾರಗಳ ಸಭೆಗಳಲ್ಲಿನ ಕಾರ್ಯಕಲಾಪಗಳಿಗೆ, ಅಂಥ ಸಭೆಗಳಲ್ಲಿ ಇರಬೇಕಾದ ಗಣಪೂರ್ತಿಯನ್ನೂ ಒಳಗೊಂಡಂತೆ, ಅಂಥ ಸಭೆಗಳ ಕಾರ್ಯವಿಧಾನ;

(8) ವಿಶ್ವವಿದ್ಯಾಲಯದ ಸಂಶೋಧನಾ ಇಲಾಖೆಗಳ ರಚನೆ;

(9) ಕುಲಾಧಿಪತಿಯವರು ಮತ್ತು ಸಹಕುಲಾಧಿಪತಿಗಳಲ್ಲದ ವಿಶ್ವವಿದ್ಯಾಲಯದ ಅಧಿಕಾರಿಗಳ ಪದಾವಧಿ ಮತ್ತು ನೇಮಕಾತಿ ವಿಧಾನಗಳು ಮತ್ತು ಸೇವಾ ಷರತ್ತುಗಳು;

(10) ವಿಶ್ವವಿದ್ಯಾಲಯದಿಂದ ನಿಯೋಜಿತರಾದ ಬೋಧಕರು ಮತ್ತು ಇತರ ವ್ಯಕ್ತಿಗಳ ವಿದ್ಯಾರ್ಹತೆಗಳು;

(11) ವಿಶ್ವವಿದ್ಯಾಲಯದಿಂದ ನಿಯೋಜಿತರಾದ ಬೋಧಕರು ಮತ್ತು ಇತರ ವ್ಯಕ್ತಿಗಳ ವರ್ಗೀಕರಣ, ನೇಮಕಾತಿ ವಿಧಾನ ಮತ್ತು ಸೇವಾ ನಿಬಂಧನೆಗಳು ಮತ್ತು ಷರತ್ತುಗಳ ನಿರ್ಧಾರ;

(12) ವಿಶ್ವವಿದ್ಯಾಲಯದಿಂದ ನಿಯೋಜಿತರಾದ ಅಧಿಕಾರಿಗಳು, ಬೋಧಕರು ಮತ್ತು ಇತರ ವ್ಯಕ್ತಿಗಳ ಪ್ರಯೋಜನಕ್ಕಾಗಿ ನಿವೃತ್ತಿ ವೇತನ, ಉಪದಾನ, ವಿಮೆ ಅಥವಾ ಭವಿಷ್ಯ ನಿಧಿಗಳ ಪ್ರಾರಂಭ;

(13) ಸಂಶೋಧನಾ ವೇತನಗಳು, ಪ್ರವಾಸೀ ಸಂಶೋಧನಾ ವೇತನಗಳು, ವಿದ್ಯಾರ್ಥಿ ವೇತನ, ಶಿಷ್ಯ ವೇತನ, ಬರ್ಸರಿಗಳು, ಪ್ರದರ್ಶನಗಳು, ಪದಕಗಳು ಮತ್ತು ಬಹುಮಾನಗಳನ್ನು ನೀಡುವುದನ್ನು ಪ್ರಾರಂಭಿಸುವುದು ಮತ್ತು ಅವುಗಳನ್ನು ನೀಡುವ ಬಗ್ಗೆ ಷರತ್ತುಗಳು;

(14) ವಸತಿ ನಿಲಯಗಳು ಮತ್ತು ಹಾಸ್ಟೆಲುಗಳ ಸ್ಥಾಪನೆ ಮತ್ತು ನಿರ್ವಹಣೆ;

(15) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ವಸತಿ ಮತ್ತು ವಿಶ್ವವಿದ್ಯಾಲಯವು ನಿರ್ವಹಿಸುವ ಹಾಸ್ಟೆಲುಗಳು ಮತ್ತು ವಸತಿ ನಿಲಯಗಳ ಷರತ್ತುಗಳು ಮತ್ತು ಅಂಥ ವಸತಿಗೆ ಶುಲ್ಕಗಳು ಮತ್ತು ಇತರ ವೆಚ್ಚಗಳನ್ನು ವಿಧಿಸುವುದು;

(16) ವಿಶ್ವವಿದ್ಯಾಲಯದ ಅಧಿಕಾರಿಗಳ ಮೇಲೆ ಪ್ರಾಧಿಕಾರಗಳಲ್ಲಿ ನಿಹಿತವಾಗಿರುವ ಅಧಿಕಾರಗಳ ಪ್ರತ್ಯಾಯೋಜನೆ;

(17) ವಿಶ್ವವಿದ್ಯಾಲಯಕ್ಕೆ ವಿದ್ಯಾರ್ಥಿಗಳ ಪ್ರವೇಶ;

(18) ಪರೀಕ್ಷಾ ನಿಕಾಯಗಳು ಮತ್ತು ಪರೀಕ್ಷಕರ ನೇಮಕಾತಿ ಷರತ್ತುಗಳು ಮತ್ತು ವಿಧಾನ ಹಾಗೂ ಅವರ ಕರ್ತವ್ಯಗಳು;

(19) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಲ್ಲಿ ಶಿಸ್ತು ನಿರ್ವಹಣೆಯ ಷರತ್ತುಗಳು;

(20) ಸಂಶೋಧನೆಗೆ ವಿಧಿಸಬೇಕಾದ ಶುಲ್ಕಗಳು; ಮತ್ತು

(21) ಶಾಸನಗಳಿಂದ ನಿಯಮಿಸುವ ಅಗತ್ಯವಿರುವ ಅಥವಾ ನಿಯಮಿಸಬಹುದಾದ ಇತರ ಯಾವುದೇ ವಿಷಯ.

**39. ಶಾಸನಗಳನ್ನು ರಚಿಸುವ ಬಗೆ.-** (1) ಪ್ರಶಾಸನ ಸಭೆಯು ಈ ಪ್ರಕರಣದಲ್ಲಿ ಇನ್ನು ಮುಂದೆ ಉಪಬಂಧಿಸಿದ ವಿಧಾನದಲ್ಲಿ ಕಾಲಕಾಲಕ್ಕೆ ಶಾಸನಗಳನ್ನು ರಚಿಸಬಹುದು ಹಾಗೂ ಅವುಗಳನ್ನು ತಿದ್ದುಪಡಿ ಮಾಡಬಹುದು ಅಥವಾ ನಿರಸನಗೊಳಿಸಬಹುದು.

(2) ಪ್ರಶಿಕ್ಷಣ ಪರಿಷತ್ತು ಅಥವಾ ಕುಲಪತಿಯವರು ಯಾವುವೇ ಶಾಸನಗಳ ಅಥವಾ ಅವುಗಳಿಗೆ ಮಾಡಬೇಕಾದ ಯಾವುವೇ ತಿದ್ದುಪಡಿಗಳ ಕರಡನ್ನು ಅಥವಾ ಶಾಸನದ ನಿರಸನದ ಪ್ರಸ್ತಾವದ ಕರಡನ್ನು ಪ್ರಶಾಸನ ಸಭೆಯ ಅಂಗೀಕಾರಕ್ಕಾಗಿ ಸಲ್ಲಿಸಬಹುದು ಮತ್ತು ಅಂಥ ಕರಡನ್ನು ಪ್ರಶಾಸನ ಸಭೆಯು ತನ್ನ ಮುಂದಿನ ಸಭೆಯಲ್ಲಿ ಪರಿಗಣಿಸತಕ್ಕದ್ದು:

ಪರಂತು, ಕುಲಪತಿಯವರು ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಧಿಕಾರಗಳಿಗೆ ಮತ್ತು ರಚನೆಗೆ ಬಾಧಕವಾಗುವಂತೆ ಯಾವುವೇ ಶಾಸನಗಳಿಗೆ ಯಾವುವೇ ತಿದ್ದುಪಡಿಗಳನ್ನು ಮಾಡುವ ಪ್ರಸ್ತಾವಗಳನ್ನು, ಅಂಥ ಪ್ರಾಧಿಕಾರಕ್ಕೆ ತನ್ನ ಅಭಿಪ್ರಾಯವನ್ನು ಹೇಳಿಕೊಳ್ಳಲು ಅವಕಾಶವನ್ನು ನೀಡದೇ ಮಂಡಿಸತಕ್ಕದ್ದಲ್ಲ ಮತ್ತು ಹಾಗೆ ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಪ್ರಶಾಸನ ಸಭೆ ಪರಿಗಣಿಸತಕ್ಕದ್ದು.

(3) ಪ್ರಶಿಕ್ಷಣ ಪರಿಷತ್ತು ಅಥವಾ ಕುಲಪತಿಯವರು (2)ನೇ ಉಪಪ್ರಕರಣದ ಅಡಿಯಲ್ಲಿ ಪ್ರಸ್ತಾವಿಸಿದ ಕರಡನ್ನು ಪ್ರಶಾಸನ ಸಭೆಯು ಪರಿಗಣಿಸಬಹುದು ಮತ್ತು ಆ ಕರಡನ್ನು ಅಂಗೀಕರಿಸಬಹುದು ಅಥವಾ ತಿರಸ್ಕರಿಸಬಹುದು ಅಥವಾ ತಿದ್ದುಪಡಿಗಳೊಡನೆ ಅಥವಾ ತಿದ್ದುಪಡಿಗಳಿಲ್ಲದೆ ಅದನ್ನು ಪುನರ್ ಪರಿಗಣನೆ ಮಾಡಲು ಸಂದರ್ಭಾನುಸಾರ ಪ್ರಶಿಕ್ಷಣ ಪರಿಷತ್ತಿಗೆ ಅಥವಾ ಕುಲಪತಿಯವರಿಗೆ ಹಿಂದಿರುಗಿಸಬಹುದು.

(4) (ಎ) ಪ್ರಶಾಸನ ಸಭೆಯ ಯಾವೊಬ್ಬ ಸದಸ್ಯನು, ಪ್ರಶಾಸನ ಸಭೆಗೆ ಕರಡು ಶಾಸನಗಳನ್ನು ಅಥವಾ ಶಾಸನಗಳ ತಿದ್ದುಪಡಿ ಅಥವಾ ನಿರಸನಕ್ಕಾಗಿ ಪ್ರಸ್ತಾವವನ್ನು ಸಲ್ಲಿಸಬಹುದು ಮತ್ತು ಪ್ರಶಾಸನ ಸಭೆಯು, ಆ ವಿಷಯವು ಪ್ರಶಿಕ್ಷಣ ಸಭೆಯ ಪರಿಮಿತಿಯಲ್ಲಿ ಬರುವಂತಹದಲ್ಲದಿದ್ದರೆ ಕರಡನ್ನು ಒಪ್ಪಿಕೊಳ್ಳಬಹುದು ಅಥವಾ ತಿರಸ್ಕರಿಸಬಹುದು.

(ಬಿ) ವಿಷಯವು ಪ್ರಶಿಕ್ಷಣ ಪರಿಷತ್ತಿನ ಪರಿಮಿತಿಯಲ್ಲಿ ಬರುತ್ತಿದ್ದರೆ ಅಂಥ ಕರಡನ್ನು ಪ್ರಶಾಸನ ಸಭೆಯು ಪ್ರಶಿಕ್ಷಣ ಪರಿಷತ್ತಿಗೆ ಪರಿಗಣನೆಗಾಗಿ ಕಳುಹಿಸತಕ್ಕದ್ದು. ಪ್ರಶಿಕ್ಷಣ ಪರಿಷತ್ತು, ಪ್ರಶಾಸನ ಸಭೆಗೆ ತಾನು ಕರಡನ್ನು ಒಪ್ಪಿಲ್ಲವೆಂದು ವರದಿ ಮಾಡಬಹುದು ಅಥವಾ ಪ್ರಶಿಕ್ಷಣ ಪರಿಷತ್ತು ಅಂಗೀಕರಿಸಬಹುದಾದ ರೂಪದಲ್ಲಿ ಕರಡನ್ನು ಪ್ರಶಾಸನ ಸಭೆಗೆ ಸಲ್ಲಿಸಬಹುದು ಮತ್ತು ಪ್ರಶಾಸನ ಸಭೆಯು ತಿದ್ದುಪಡಿ ಇಲ್ಲದೆ ಅಥವಾ ತಿದ್ದುಪಡಿಗಳೊಡನೆ ಕರಡನ್ನು ಅಂಗೀಕರಿಸಬಹುದು ಅಥವಾ ತಿರಸ್ಕರಿಸಬಹುದು.

(5) ಪ್ರಶಾಸನಸಭೆಯು, ಹಣಕಾಸಿನ ವಿಷಯಗಳನ್ನು ಒಳಗೊಂಡ ಶಾಸನಗಳ ಸಂಬಂಧದಲ್ಲಿ ಹಣಕಾಸು ಸಮಿತಿಯ ಅಭಿಪ್ರಾಯವನ್ನು ಪಡೆಯತಕ್ಕದ್ದು.

(6) ಪ್ರಶಾಸನ ಸಭೆಯು ಕರಡು ಶಾಸನಗಳ ಸಂಬಂಧದಲ್ಲಿ ಅವುಗಳನ್ನು ಪರಿಗಣಿಸುವುದಕ್ಕೆ ಮುಂಚೆ ತಾನು ಅವಶ್ಯವೆಂದು ಭಾವಿಸಿದರೆ, ವಿಶ್ವವಿದ್ಯಾಲಯದ ಯಾವೊಬ್ಬ ಅಧಿಕಾರಿಯ, ಪ್ರಾಧಿಕಾರದ ಅಥವಾ ನಿಕಾಯದ ಅಭಿಪ್ರಾಯವನ್ನು ಸಹ ಪಡೆಯಬಹುದು.

(7) ಪ್ರಶಾಸನ ಸಭೆಯು ತಾನು ಅಂಗೀಕರಿಸಿದ ಪ್ರತಿಯೊಂದು ಶಾಸನವನ್ನು, ತನ್ನ ನಿರ್ದಿಷ್ಟ ಶಿಫಾರಸ್ಸುಗಳೊಡನೆ ಅನುಮೋದನೆಗಾಗಿ ಕುಲಾಧಿಪತಿಯವರಿಗೆ ಒಪ್ಪಿಸುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(8) ರಾಜ್ಯ ಸರ್ಕಾರವು, ಕರಡು ಶಾಸನಗಳನ್ನು ಸ್ವೀಕರಿಸಿದ ಮೇಲೆ, ಅವುಗಳನ್ನು ಸ್ವೀಕರಿಸಿದ ದಿನಾಂಕದಿಂದ ಎರಡು ತಿಂಗಳುಗಳೊಳಗೆ ತನ್ನ ಟೀಕೆ ಟಿಪ್ಪಣಿಗಳು ಮತ್ತು ನಿರ್ದಿಷ್ಟ ಶಿಫಾರಸ್ಸುಗಳೊಡನೆ, ಅಂಥ ಕರಡು ಶಾಸನಗಳನ್ನು ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಕುಲಾಧಿಪತಿಯವರು, ರಾಜ್ಯ ಸರ್ಕಾರದಿಂದ ಕರಡು ಶಾಸನಗಳನ್ನು ಸ್ವೀಕರಿಸಿದ ದಿನಾಂಕದಿಂದ ಎರಡು ತಿಂಗಳೊಳಗೆ ತನ್ನ ಅನುಮೋದನೆಯನ್ನು ನೀಡಬಹುದು ಅಥವಾ ಅದಕ್ಕೆ ತನ್ನ ಅನುಮೋದನೆಯನ್ನು ತಡೆಹಿಡಿಯಬಹುದು ಅಥವಾ ಅದನ್ನು ಮತ್ತಷ್ಟು ಪರಿಗಣನೆಗಾಗಿ ಪ್ರಶಾಸನ ಸಭೆಗೆ ಕಳುಹಿಸಬಹುದು.

(9) ಪ್ರಶಾಸನ ಸಭೆಯು ಅಂಗೀಕರಿಸಿದ ಶಾಸನಗಳನ್ನು ಕುಲಾಧಿಪತಿಯವರು ಅನುಮೋದಿಸುವವರೆಗೆ ಜಾರಿಗೊಳಿಸತಕ್ಕದ್ದಲ್ಲ.

**40. ವಿನಿಯಮಗಳು.–** (1) ಪ್ರಶಿಕ್ಷಣ ಪರಿಷತ್ತು ಎಲ್ಲಾ ಅಥವಾ ಯಾವುವೇ ಅಧಿಕಾರಗಳನ್ನು ಚಲಾಯಿಸಲು ಉಪಬಂಧಿಸುವುದಕ್ಕಾಗಿ ಮತ್ತು ವಿಶೇಷವಾಗಿ ಈ ಮುಂದಿನ ವಿಷಯಗಳ ಬಗ್ಗೆ ಉಪಬಂಧ ಕಲ್ಪಿಸುವುದಕ್ಕಾಗಿ ಈ ಅಧಿನಿಯಮಕ್ಕೆ ಸುಸಂಗತವಾಗಿರುವ ವಿನಿಯಮಗಳನ್ನು ರಚಿಸಬಹುದು, ಎಂದರೆ:–

(ಎ) ವಿಶ್ವವಿದ್ಯಾಲಯಕ್ಕೆ ವಿದ್ಯಾರ್ಥಿಗಳ ಪ್ರವೇಶ;

(ಬಿ) ಇತರ ವಿಶ್ವವಿದ್ಯಾಲಯಗಳ ಪರೀಕ್ಷೆಗಳು ಮತ್ತು ಪದವಿಗಳನ್ನು, ವಿಶ್ವವಿದ್ಯಾಲಯದ ಪರೀಕ್ಷೆ ಮತ್ತು ಪದವಿಗಳಿಗೆ ಸಮನಾದುವೆಂದು ಮನ್ನಣೆ ನೀಡುವುದು;

(ಸಿ) ವಿಶ್ವವಿದ್ಯಾಲಯದ ವ್ಯಾಸಂಗ ಕ್ರಮಗಳು ಮತ್ತು ಪರೀಕ್ಷೆಗಳು ಮತ್ತು ವಿಶ್ವವಿದ್ಯಾಲಯದ ಅಥವಾ ಸಂಯೋಜನೆಗೊಂಡ ಕಾಲೇಜುಗಳ ಅಥವಾ ವಿಶ್ವವಿದ್ಯಾಲಯದ ಇತರ ಸಂಸ್ಥೆಗಳ ವಿದ್ಯಾರ್ಥಿಗಳನ್ನು ಯಾವ ಷರತ್ತುಗಳ ಮೇಲೆ ವಿಶ್ವವಿದ್ಯಾಲಯದ ಪರೀಕ್ಷೆಗಳು ಅಥವಾ ಪದವಿಗಳು, ಡಿಪ್ಲೊಮೋಗಳು ಮತ್ತು ಇತರ ಪ್ರಮಾಣ ಪತ್ರಗಳಿಗೆ ಸೇರಿಸಿಕೊಳ್ಳತಕ್ಕದ್ದೋ ಆ ಷರತ್ತುಗಳು;

(ಡಿ) ವಿನಾಯಿತಿಗಳನ್ನು ನೀಡುವುದು.

(ಇ) ವಿನಿಯಮಗಳ ಮೂಲಕ ನಿಯಂತ್ರಿಸುವ ಅಗತ್ಯವಿರುವ ಅಥವಾ

ನಿಯಂತ್ರಿಸಬಹುದಾದ ಯಾವುವೇ ಇತರ ವಿಷಯಗಳು

(2) ಪ್ರಶಿಕ್ಷಣ ಪರಿಷತ್ತು ಅಂಗೀಕರಿಸಿದ ಎಲ್ಲ ವಿನಿಯಮಗಳನ್ನು ಕುಲಾಧಿಪತಿಯವರ ಅನುಮೋದನೆಗಾಗಿ ಸಲ್ಲಿಸಲು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು. ರಾಜ್ಯ ಸರ್ಕಾರವು, ವಿಶ್ವವಿದ್ಯಾಲಯದಿಂದ ಸ್ವೀಕರಿಸಿದ ವಿನಿಯಮಗಳನ್ನು ಅವುಗಳನ್ನು ಸ್ವೀಕರಿಸಿದ ದಿನದಿಂದ ಎರಡು ತಿಂಗಳೊಳಗೆ ತನ್ನ ಟೀಕೆ ಟಿಪ್ಪಣಿಗಳೊಡನೆ ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು. ಕುಲಾಧಿಪತಿಯವರು, ರಾಜ್ಯ ಸರ್ಕಾರದಿಂದ ಈ ವಿನಿಯಮಗಳನ್ನು ಸ್ವೀಕರಿಸಿದ ದಿನದಿಂದ ಒಂದು ತಿಂಗಳೊಳಗೆ ಅವುಗಳನ್ನು ಅನುಮೋದಿಸಬಹುದು ಅಥವಾ ಮತ್ತಷ್ಟು ಪರಿಶೀಲನೆಗಾಗಿ ಅವುಗಳನ್ನು ಪ್ರಶಿಕ್ಷಣ ಪರಿಷತ್ತಿಗೆ ಹಿಂದಿರುಗಿಸಬಹುದು.

(3) ಎಲ್ಲ ವಿನಿಯಮಗಳು, ಕುಲಾಧಿಪತಿಯವರು ಅವುಗಳನ್ನು ಅನುಮೋದಿಸಿದ ದಿನಾಂಕದಿಂದ ಅಥವಾ ಕುಲಾಧಿಪತಿಯವರು ನಿರ್ದೇಶಿಸಬಹುದಾದಂಥ ಇತರ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

## ಅಧ್ಯಾಯ - VI

## ಕಾಲೇಜುಗಳ ಸಂಯೋಜನೆ ಮತ್ತು ಸಂಸ್ಥೆಗಳಿಗೆ ಮನ್ನಣೆ

**41. ಕಾಲೇಜುಗಳ ಸಂಯೋಜನೆ:–** (1) ವಿಶ್ವವಿದ್ಯಾನಿಲಯದ ಪ್ರದೇಶದಲ್ಲಿರುವ ಕಾಲೇಜುಗಳನ್ನು ಈ ಪ್ರಕರಣದಲ್ಲಿ ನಿರ್ದಿಷ್ಟ ಪಡಿಸಿದ ಷರತ್ತುಗಳನ್ನು ಪೂರೈಸಿದ ತರುವಾಯ, ರಾಜ್ಯ ಸರ್ಕಾರವು ಮಾಡಿದ ಶಿಫಾರಸ್ಸುಗಳ ಮೇಲೆ ವಿಶ್ವವಿದ್ಯಾನಿಲಯದ ಸಂಯೋಜಿತ ಕಾಲೇಜುಗಳಾಗಿ ಸಂಯೋಜಿಸತಕ್ಕದ್ದು.

(2) ಕುಲಸಚಿವರು ಹೊಸ ಕಾಲೇಜುಗಳ ಸಂಯೋಜನೆಯ ಬಗ್ಗೆ, ಅಸ್ತಿತ್ವದಲ್ಲಿರುವ ಸಂಯೋಜಿತ ಕಾಲೇಜುಗಳಲ್ಲಿ ಹೊಸ ವ್ಯಾಸಂಗ ಕ್ರಮಗಳು, ಸಂಯೋಜಿತ ಕಾಲೇಜುಗಳಲ್ಲಿ ಹೊಸ ವಿಷಯಗಳು ಮತ್ತು ಮಂಜೂರಾದ ಪ್ರವೇಶಾವಕಾಶದಲ್ಲಿನ ಬದಲಾವಣೆಯ ಬಗ್ಗೆ ಅರ್ಜಿಗಳ ಸ್ವೀಕೃತಿಗೆ ಕೊನೆಯ ದಿನಾಂಕವನ್ನು ನಿಗದಿಪಡಿಸಿ, ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ ಕಡೆಯಪಕ್ಷ ಎರಡು ಪ್ರಮುಖ ವೃತ್ತ ಪತ್ರಿಕೆಗಳಲ್ಲಿ ಅಧಿಸೂಚಿಸತಕ್ಕದ್ದು. ಜಾಹೀರಾತು, ವಿಶ್ವವಿದ್ಯಾನಿಲಯವು ಅಥವಾ ಅಂಥ ಇತರ ಪ್ರಾಧಿಕಾರಗಳು ಆ ಅಭಿಪ್ರಾಯಕ್ಕೆ ಅಗತ್ಯಪಡಿಸಬಹುದಾದಂಥ ಇತರ ವಿವರಗಳನ್ನು ಒಳಗೊಂಡಿರತಕ್ಕದ್ದು.

(3) ವಿಶ್ವವಿದ್ಯಾನಿಲಯಕ್ಕೆ ಸಂಯೋಜನೆಗಾಗಿ ಅರ್ಜಿಸಲ್ಲಿಸುವ ಕಾಲೇಜು, ಈ ಮುಂದಿನವುಗಳಿಗೆ ಸಂಬಂಧಪಟ್ಟಂತೆ ಮಾಹಿತಿಯನ್ನು ಒದಗಿಸುವುದರೊಂದಿಗೆ ಜಾಹೀರಾತಿನಲ್ಲಿ ನಿಗದಿಪಡಿಸಿದ ಕಾಲಮಿತಿಯೊಳಗೆ ಅರ್ಜಿಯನ್ನು ಕುಲಸಚಿವರಿಗೆ ಕಳುಹಿಸತಕ್ಕದ್ದು, ಎಂದರೆ:–

(ಎ) ಆ ಕಾಲೇಜು ಒದಗಿಸಲು ಉದ್ದೇಶಿಸಿದ ಶಿಕ್ಷಣದ ಮಾದರಿಯನ್ನು ನೆರೆ ಹೊರೆಯಲ್ಲಿರುವ ಇತರ ಕಾಲೇಜುಗಳು ಅದೇ ಮಾದರಿಯ ಶಿಕ್ಷಣಕ್ಕೆ ಮಾಡಿರುವ ಪ್ರಸ್ತುತ ಏರ್ಪಾಟನ್ನು ಮತ್ತು ಕಾಲೇಜನ್ನು ಯಾವ ಸ್ಥಳದಲ್ಲಿ ಸ್ಥಾಪಿಸಬೇಕಾಗಿದೆಯೋ ಆ ಸ್ಥಳದ ಸೂಕ್ತತೆಯನ್ನೂ ಗಮನದಲ್ಲಿಟ್ಟುಕೊಂಡು, ಆ ಕಾಲೇಜು ಸ್ಥಳೀಯ ಅವಶ್ಯಕತೆಯನ್ನು ಪೂರೈಸುತ್ತದೆಂದು;

(ಬಿ) ಅದು ಕ್ರಮಬದ್ಧವಾಗಿ ರಚಿಸಲಾದ ಆಡಳಿತ ಮಂಡಲಿಯ ನಿರ್ವಹಣೆಗೆ ಒಳಪಟ್ಟಿರುತ್ತದೆಂದು;

(ಸಿ) ಬೋಧಕ ಸಿಬ್ಬಂದಿಯ ಸಂಖ್ಯೆ ಮತ್ತು ಅರ್ಹತೆಗಳು ಮತ್ತು ಅವರ ಪದಾವಧಿಯನ್ನು ನಿಯಂತ್ರಿಸುವ ಷರತ್ತುಗಳು ಆ ಕಾಲೇಜಿನಲ್ಲಿ ಕೈಗೊಳ್ಳಬೇಕಾದ ಶಿಕ್ಷಣ, ಬೋಧನೆ ಅಥವಾ ತರಬೇತಿಗಳ ವ್ಯಾಸಂಗ ಕ್ರಮಗಳಿಗೆ ತಕ್ಕ ಏರ್ಪಾಟನ್ನು ಮಾಡುವಂಥಾದ್ದಾಗಿದೆ ಎಂದು;

(ಡಿ) ಯಾವ ಕಟ್ಟಡಗಳಲ್ಲಿ ಆ ಕಾಲೇಜು ಇರಬೇಕಾಗಿದೆಯೋ ಆ ಕಟ್ಟಡಗಳು ಸೂಕ್ತವಾಗಿವೆ ಎಂದು ಮತ್ತು ತಂದೆ ತಾಯಿಗಳ ಅಥವಾ ಪಾಲಕರೊಡನೆ ವಾಸವಾಗಿರದೆ ಇರುವ ವಿದ್ಯಾರ್ಥಿಗಳಿಗಾಗಿ ಆ ಕಾಲೇಜಿನಲ್ಲಿ ಅಥವಾ ಆ ಕಾಲೇಜು ಅನುಮೋದಿಸಿದ ವಸತಿಗಳಲ್ಲಿ ನಿವಾಸಕ್ಕಾಗಿ ಮತ್ತು ಮೇಲ್ವಿಚಾರಣೆ ಮತ್ತು ಕಲ್ಯಾಣಕ್ಕಾಗಿ, ವಿನಿಯಮಗಳಿಗೆ ಅನುಗುಣವಾಗಿ ಏರ್ಪಾಟು ಮಾಡಲಾಗುವುದೆಂದು;

(ಇ) ಗ್ರಂಥಾಲಯಕ್ಕಾಗಿ ಸೂಕ್ತ ವ್ಯವಸ್ಥೆ ಮಾಡಲಾಗಿದೆ ಅಥವಾ ಮಾಡಲಾಗುವುದೆಂದು;

(ಎಫ್) ಪ್ರಾಯೋಗಿಕ ವಿಜ್ಞಾನದ ಯಾವುದೇ ಶಾಖೆಯಲ್ಲಿ ಸಂಯೋಜನೆಯನ್ನು ಕೋರಿರುವಲ್ಲಿ, ಶಾಸನಗಳು, ಮತ್ತು ವಿನಿಯಮಗಳಿಗೆ ಅನುಗುಣವಾಗಿ ಸರಿಯಾದ ರೀತಿಯಲ್ಲಿ ಸಜ್ಜುಗೊಳಿಸಿದ ಪ್ರಯೋಗಶಾಲೆ ಅಥವಾ ವಸ್ತು ಸಂಗ್ರಹಾಲಯದಲ್ಲಿ ವ್ಯವಸ್ಥೆಗಳನ್ನು ಆ ವಿಜ್ಞಾನದ ಶಾಖೆಯಲ್ಲಿ ಶಿಕ್ಷಣ ಕೊಡುವುದಕ್ಕಾಗಿ ಮಾಡಲಾಗಿದೆ ಅಥವಾ ಮಾಡಲಾಗುವುದೆಂದು;

(ಜಿ) ಪ್ರಾಂಶುಪಾಲನ ಮತ್ತು ಬೋಧಕ ಸಿಬ್ಬಂದಿಯ ಸದಸ್ಯರ ನಿವಾಸಕ್ಕಾಗಿ ಸಾಧ್ಯವಾದಷ್ಟು ಕಾಲೇಜಿನ ಪರಿಮಿತಿಯಲ್ಲಿ ಅಥವಾ ಅದರ ಹತ್ತಿರ ಅಥವಾ ವಿದ್ಯಾರ್ಥಿಗಳ ನಿವಾಸಕ್ಕಾಗಿ ಒದಗಿಸಿರುವ ಸ್ಥಳದಲ್ಲಿ ವಸತಿಗಾಗಿ ಸೂಕ್ತ ಏರ್ಪಾಟು ಮಾಡತಕ್ಕದ್ದೆಂದು;

(ಎಚ್) ಆ ಕಾಲೇಜಿನ ಹಣಕಾಸು ಸಂಪನ್ಮೂಲಗಳು ಅದರ ನಿರಂತರ ನಿರ್ವಹಣೆ ಮತ್ತು ದಕ್ಷ ಕಾರ್ಯ ನಿರ್ವಹಣೆಗಾಗಿ ತಕ್ಕ ಏರ್ಪಾಟು ಮಾಡುವಂತಹವು ಆಗಿವೆ ಎಂದು; ಮತ್ತು

(ಐ) ವಿದ್ಯಾರ್ಥಿಗಳು ಸಂದಾಯ ಮಾಡಬೇಕಾದ ಫೀಜು ಏನಾದರೂ ಇದ್ದರೆ ಅದನ್ನು ನಿಗದಿಮಾಡುವ ನಿಯಮಗಳನ್ನು ರಚಿಸಲಾಗಿದೆ ಅಥವಾ ರಚಿಸಲಾಗುತ್ತದೆ ಎಂದು

– ಮನದಟ್ಟು ಮಾಡಿಕೊಡತಕ್ಕದ್ದು.

(4) ಹೊಸ ಕಾಲೇಜುಗಳಿಗೆ ಸಂಯೋಜನೆಯ ಅರ್ಜಿಗಳನ್ನು ವ್ಯಕ್ತಿಗಳಿಂದ ಅಂಗೀಕರಿಸತಕ್ಕದ್ದಲ್ಲ, ಆದರೆ ರಾಜ್ಯಸರ್ಕಾರದ ನೆರವು ಇಲ್ಲದೆಯೇ ಕಾಲೇಜುಗಳನ್ನು ನಡೆಸಲು ಸಾಧ್ಯವಾಗುವಂತೆ ಹಣಕಾಸು ಪರಿಸ್ಥಿತಿಯನ್ನು ಹೊಂದಿರುವ, ನೋಂದಾಯಿತ ಸಂಘ ಅಥವಾ ನೋಂದಾಯಿತ ಸಾರ್ವಜನಿಕ ನ್ಯಾಸದಿಂದ ಮಾತ್ರವೇ ಅಂಗೀಕರಿಸತಕ್ಕದ್ದು.

(5) ಅರ್ಜಿಯು, ತನ್ನ ಜೊತೆಗೆ, ಕಾಲೇಜನ್ನು ಸಂಯೋಜಿಸಿದ ನಂತರ ರಾಜ್ಯಸರ್ಕಾರ ಮತ್ತು ವಿಶ್ವವಿದ್ಯಾನಿಲಯದ ಪೂರ್ವಾನುಮೋದನೆ ಇಲ್ಲದೆ ವ್ಯವಸ್ಥಾಪನೆಯಲ್ಲಿ ಯಾವುದೇ ವರ್ಗಾವಣೆ ಅಥವಾ ಕಾಲೇಜಿನ ಹೆಸರಿನಲ್ಲಿ ಅಥವಾ ಕಾರ್ಯರೀತಿಯಲ್ಲಿ ಯಾವುದೇ ಬದಲಾವಣೆ ಮಾಡುವುದಿಲ್ಲವೆಂಬ ಬಗ್ಗೆ ಒಂದು ಮುಚ್ಚಳಿಕೆಯನ್ನು ಒಳಗೊಂಡಿರತಕ್ಕದ್ದು.

(6) (3)ನೇ ಉಪಪ್ರಕರಣದ ಮೇರೆಗೆ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ಅದನ್ನು ಪರಿಶೀಲನೆಗಾಗಿ ಪ್ರಶಾಸನ ಸಭೆಯ ಮುಂದೆ ಇಡತಕ್ಕದ್ದು. ಪ್ರಶಾಸನ ಸಭೆಯ ಸಂಯೋಜನೆಯ ಪ್ರತಿಯೊಂದು ಅರ್ಜಿಯನ್ನು ಪರಿಶೀಲಿಸಿದ ತರುವಾಯ ಸ್ಥಳೀಯ ವಿಚಾರಣಾ ಸಮಿತಿಯಿಂದ ಸ್ಥಳೀಯ ವಿಚಾರಣೆಗೆ ನಿರ್ದೇಶನ ನೀಡತಕ್ಕದ್ದು:

ಪರಂತು, ಸ್ಥಳೀಯ ವಿಚಾರಣಾ ಸಮಿತಿಯು, ಅನುಸೂಚಿತ ಜಾತಿಗಳಿಗೆ ಅಥವಾ ಅನುಸೂಚಿತ ಪಂಗಡಗಳಿಗೆ ಸೇರಿದ ಕನಿಷ್ಠಪಕ್ಷ ಒಬ್ಬರು ಸದಸ್ಯರನ್ನು ಒಳಗೊಂಡಿರತಕ್ಕದ್ದು.

(7) ಸ್ಥಳೀಯ ವಿಚಾರಣಾ ಸಮಿತಿಯು, ಅದನ್ನು ರಚಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ, ಒಂದು ವರದಿಯನ್ನು ಪ್ರಶಿಕ್ಷಣ ಪರಿಷತ್ತಿಗೆ ಸಲ್ಲಿಸತಕ್ಕದ್ದು.

(8) ಪ್ರಶಿಕ್ಷಣ ಪರಿಷತ್ತು, ಸ್ಥಳೀಯ ವಿಚಾರಣಾ ಸಮಿತಿಯ ವರದಿಯನ್ನು ಸ್ವೀಕರಿಸಿದ ತರುವಾಯ ವರದಿಯಲ್ಲಿ ವಿವರಿಸಿದ ಸಮಿತಿಯ ತೀರ್ಮಾನಗಳನ್ನು ಪರಿಗಣಿಸತಕ್ಕದ್ದು ಮತ್ತು ತನಗೆ ಅವಶ್ಯಕವೆಂದು ಕಂಡುಬರಬಹುದಾದ ಅಂಥ ಹೆಚ್ಚಿನ ವಿಚಾರಣೆಯನ್ನು ಮಾಡತಕ್ಕದ್ದು ಮತ್ತು ಅಂಥ ಕೋರಿಕೆಯ ಮೇಲೆ ತನ್ನ ಅಭಿಪ್ರಾಯವನ್ನು ದಾಖಲು ಮಾಡತಕ್ಕದ್ದು ಮತ್ತು ಅದನ್ನು ಪ್ರಶಾಸನ ಸಭೆಗೆ ಕಳುಹಿಸತಕ್ಕದ್ದು.

(9) ಪ್ರಶಾಸನ ಸಭೆಯ ಸಮಿತಿಯ ವರದಿಯನ್ನು ಮತ್ತು ಪ್ರಶಿಕ್ಷಣ ಪರಿಷತ್ತಿನ ಗೊತ್ತುವಳಿಯನ್ನು ಪರಿಗಣಿಸತಕ್ಕದ್ದು ಮತ್ತು ಅವಶ್ಯಕವೆಂದು ಭಾವಿಸ ಬಹುದಾದಂಥ ಹೆಚ್ಚಿನ ವಿಚಾರಣೆಯನ್ನು ಮಾಡಿದ ತರುವಾಯ ಮನವಿಯನ್ನು ಪೂರ್ಣವಾಗಿ ಅಥವಾ ಭಾಗಶಃ ಅಂಗೀಕರಿಸಬೇಕೆ ಅಥವಾ ನಿರಾಕರಿಸ ಬೇಕೇ ಎಂಬ ಪ್ರಶ್ನೆಯ ಬಗ್ಗೆ ತನ್ನ ಅಭಿಪ್ರಾಯವನ್ನು ದಾಖಲಿಸತಕ್ಕದ್ದು.

(10) ಕುಲಸಚಿವರು, ಅರ್ಜಿಯನ್ನು ಮತ್ತು ಅದರ ಅಡಕಗಳನ್ನು, ಅನುಬಂಧಗಳನ್ನು, ಸ್ಥಳೀಯ ವಿಚಾರಣಾ ಸಮಿತಿಯ ವರದಿ ಮತ್ತು ಪ್ರಶಿಕ್ಷಣ ಪರಿಷತ್ತಿನ ಹಾಗೂ ಪ್ರಶಾಸನ ಸಭೆಯ ಎಲ್ಲ ನಡವಳಿಗಳನ್ನು ಅಂತಿಮ ತೀರ್ಮಾನ ಕೈಗೊಳ್ಳುವುದಕ್ಕಾಗಿ ಮುಂಬರುವ ವರ್ಷದ ಮಾರ್ಚ್ 31ಕ್ಕೆ ಮೊದಲು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(11) ರಾಜ್ಯ ಸರ್ಕಾರವು, ಸ್ಥಳೀಯ ವಿಚಾರಣಾ ಸಮಿತಿಯ, ಪ್ರಶಿಕ್ಷಣ ಪರಿಷತ್ತಿನ ಮತ್ತು ಪ್ರಶಾಸನ ಸಭೆಯ ಶಿಫಾರಸ್ಸುಗಳ ಹಿನ್ನೆಲೆಯಲ್ಲಿ ಅಂಥ ಅರ್ಜಿಗಳನ್ನು ಪರಿಗಣಿಸತಕ್ಕದ್ದು ಮತ್ತು ತಾನು ಅವಶ್ಯಕವೆಂದು ಅದಕ್ಕೆ ಕಂಡು ಬರಬಹುದಾದಂತೆ ಅಂಥ ವಿಚಾರಣೆಯ ತರುವಾಯ ಪ್ರವೇಶದಲ್ಲಿ ವ್ಯತ್ಯಾಸಗಳೂ ಸೇರಿದಂತೆ, ಸಂದರ್ಭಾನುಸಾರ ಸಂಯೋಜಿಸಲು ಅಥವಾ ಸಂಯೋಜನೆಯನ್ನು ಅಥವಾ ಅದರ ಯಾವುದೇ ಭಾಗವನ್ನು ನಿರಾಕರಿಸಲು ವಿಶ್ವವಿದ್ಯಾನಿಲಯಕ್ಕೆ ತನ್ನ ಶಿಫಾರಸ್ಸುಗಳನ್ನು ಮಾಡತಕ್ಕದ್ದು.

(12) ವಿಶ್ವವಿದ್ಯಾನಿಲಯವು, ರಾಜ್ಯ ಸರ್ಕಾರದ ನಿರ್ದೇಶನಗಳನ್ನು ಸ್ವೀಕರಿಸಿದ ತರುವಾಯ ಅದರಂತೆ ಔಪಚಾರಿಕ ಆದೇಶಗಳನ್ನು ಹೊರಡಿಸತಕ್ಕದ್ದು.

(13) ಆದಾಗ್ಯೂ ಸಂಯೋಜನೆಯ ಮಂಜೂರಾತಿಯು, ಸಂಬಂಧಪಟ್ಟ ಅಂಥ ಇತರ ಪ್ರಾಧಿಕಾರಗಳು ಅಥವಾ ನಿಕಾಯಗಳ ಪೂರ್ವಾನುಮೋದನೆಗೆ ಒಳಪಟ್ಟಿರತಕ್ಕದ್ದು ಮತ್ತು ನಿರ್ಧರಿಸಲಾದ ಪ್ರವೇಶಾವಕಾಶ ಸಂಖ್ಯೆಯು, ಅಂಥ ಪ್ರಾಧಿಕಾರಗಳು ಅಥವಾ ನಿಕಾಯಗಳು ಆ ಸಂಖ್ಯೆಯನ್ನು ನಿರ್ದಿಷ್ಟಪಡಿಸಿದ್ದರೆ ಅದನ್ನು ಮೀರತಕ್ಕದ್ದಲ್ಲ.

(14) ಸಂಯೋಜನೆಗಾಗಿ ಅಥವಾ ಪ್ರವೇಶ ಸಂಖ್ಯೆಯನ್ನು ನಿಗದಿಪಡಿಸುವುದಕ್ಕಾಗಿ ಅಥವಾ ಅದರ ಯಾವುದೇ ಭಾಗಕ್ಕಾಗಿ, ಅರ್ಜಿಯನ್ನು ರಾಜ್ಯ ಸರ್ಕಾರದ ಶಿಫಾರಸ್ಸಿನ ಮೇಲೆ ವಿಶ್ವವಿದ್ಯಾನಿಲಯವು ಮಂಜೂರ್ಮಾಡಿದ್ದರೆ, ವಿಶ್ವವಿದ್ಯಾನಿಲಯವು, ನಿರ್ದಿಷ್ಟ ಷರತ್ತುಗಳೊಡನೆ ಅಥವಾ ಷರತ್ತುಗಳಿಲ್ಲದೆ, ನಿರ್ದಿಷ್ಟ ಪ್ರವೇಶ ಸಂಖ್ಯೆಯೊಡನೆ ಯಾವ ವ್ಯಾಸಂಗ ವಿಷಯದ ಸಂಬಂಧದಲ್ಲಿ ಮತ್ತು ಯಾವ ಅವಧಿಗಾಗಿ, ಕಾಲೇಜನ್ನು ಅಥವಾ ಕೋರ್ಸನ್ನು ಸಂಯೋಜಿಸಲಾಗಿದೆಯೋ, ಅದರ ಸಂಬಂಧದಲ್ಲಿ ವ್ಯಾಸಂಗಕ್ರಮಗಳನ್ನು ಆದೇಶದಲ್ಲಿ ನಿರ್ದಿಷ್ಟಪಡಿಸತಕ್ಕದ್ದು.

(15) ಅಂಥ ಅರ್ಜಿಯನ್ನು ಅಥವಾ ಅದರ ಯಾವುದೇ ಭಾಗವನ್ನು ರಾಜ್ಯ ಸರ್ಕಾರವು ಅಥವಾ ವಿಶ್ವವಿದ್ಯಾನಿಲಯವು ತಿರಸ್ಕರಿಸಿದ್ದರೆ, ಅಂಥ ತಿರಸ್ಕರಣೆಯ ಕಾರಣಗಳನ್ನು ತಿಳಿಸತಕ್ಕದ್ದು.

(16) (3)ನೇ ಉಪ-ಪ್ರಕರಣದ ಅಡಿಯಲ್ಲಿ ಸಲ್ಲಿಸಿದ ಯಾವುದೇ ಅರ್ಜಿಯನ್ನು (12)ನೇ ಉಪ-ಪ್ರಕರಣದ ಅಡಿಯಲ್ಲಿ ಆದೇಶವನ್ನು ಮಾಡುವುದಕ್ಕೆ ಮೊದಲು ಯಾವುದೇ ಸಮಯದಲ್ಲಿ ಅರ್ಜಿದಾರನು ಹಿಂದಕ್ಕೆ ಪಡೆಯಬಹುದು.

(17) ಪ್ರತಿಯೊಂದು ಶೈಕ್ಷಣಿಕ ವರ್ಷಕ್ಕಾಗಿ, ಪ್ರಸಕ್ತ ಇರುವ ವ್ಯಾಸಂಗ ಕ್ರಮಗಳಿಗಾಗಿ ಮತ್ತು ವ್ಯಾಸಂಗ ಕ್ರಮಗಳನ್ನು ಮುಂದುವರಿಸುವುದಕ್ಕಾಗಿ ಸಂಯೋಜನೆಯನ್ನು ವಿಸ್ತರಿಸುವುದಕ್ಕಾಗಿ, ಹೊಸ ವ್ಯಾಸಂಗ ಕ್ರಮಗಳನ್ನು ಹೊರತುಪಡಿಸಿ ಹೊಸ ಸಂಯೋಜನೆಯ ಮಂಜೂರಾತಿಗಾಗಿ ಅನ್ವಯವಾಗುವ ರೀತಿಯಲ್ಲಿಯೇ, ಸಂಯೋಜನೆಯ ನವೀಕರಣ ಅಥವಾ ಸಂಯೋಜನೆಯ ಮುಂದುವರಿಕೆಗಾಗಿ ಪ್ರಶಿಕ್ಷಣ ಪರಿಷತ್ತಿನೊಡನೆ ಸಮಾಲೋಚಿಸಿ ಪ್ರಶಾಸನ ಸಭೆ ಮಂಜೂರಾತಿ ನೀಡಬಹುದು.

(18) ಪ್ರತಿಯೊಂದು ವ್ಯಾಸಂಗ ಕ್ರಮದ ಸಂದರ್ಭದಲ್ಲಿ ತೆಗೆದುಕೊಳ್ಳಬೇಕಾದ ವಿದ್ಯಾರ್ಥಿಗಳ ಪ್ರವೇಶ ಸಂಖ್ಯೆಯನ್ನು ಸಂದರ್ಭಾನುಸಾರ ಸಂಯೋಜನೆಯನ್ನು ನೀಡುವ ಅಥವಾ ಸಂಯೋಜನೆಯನ್ನು ಮುಂದುವರೆಸುವ ಆದೇಶದಲ್ಲಿ

ಪ್ರತಿಯೊಂದು ಶೈಕ್ಷಣಿಕ ವರ್ಷದ ಪ್ರಾರಂಭಕ್ಕೆ ಸಾಕಷ್ಟು ಮುಂಚೆಯೇ ವಾರ್ಷಿಕ ಆಧಾರದಲ್ಲಿ ವಿಶ್ವವಿದ್ಯಾನಿಲಯವು ನಿರ್ಧರಿಸತಕ್ಕದ್ದು:

ಪರಂತು, ಸಂಯೋಜಿತ ಕಾಲೇಜುಗಳಲ್ಲಿ ಸ್ನಾತಕೋತ್ತರ ಶಿಕ್ಷಣ ಕಾರ್ಯಕ್ರಮಗಳೂ ಸೇರಿದಂತೆ ವೃತ್ತಿಪರ ವ್ಯಾಸಂಗ ಕ್ರಮಗಳ ಸಂದರ್ಭದಲ್ಲಿ ವಿದ್ಯಾರ್ಥಿಗಳ ಪ್ರವೇಶ ಸಂಖ್ಯೆಯನ್ನು ರಾಜ್ಯ ಸರ್ಕಾರವು ನಿರ್ಧರಿಸತಕ್ಕದ್ದು.

**42. ಹೊಸ ಕಾಲೇಜಿನಲ್ಲಿ ವಿದ್ಯಾರ್ಥಿಗಳ ಪ್ರವೇಶಕ್ಕೆ ನಿರ್ಬಂಧ.–** (1) ವಿಶ್ವವಿದ್ಯಾನಿಲಯವು, ಹೊಸ ಕಾಲೇಜಿಗೆ ಅಥವಾ ಸಂದರ್ಭಾನುಸಾರ ಪ್ರಸಕ್ತ ಸಂಯೋಜಿತ ಕಾಲೇಜಿನಲ್ಲಿ ಹೊಸ ವ್ಯಾಸಂಗ ಕ್ರಮಕ್ಕೆ ಅಂಥ ವ್ಯಾಸಂಗ ಕ್ರಮದ ಸಂಬಂಧದಲ್ಲಿ ಅಥವಾ ನಿರ್ದಿಷ್ಟ ವ್ಯಾಸಂಗ ಕ್ರಮದ ಬದಲಾವಣೆಗಾಗಿ ಸಂಯೋಜನೆ ನೀಡಿದ್ದ ಹೊರತು, ಯಾವುದೇ ವಿಶ್ವವಿದ್ಯಾನಿಲಯಕ್ಕೆ ಸಂಯೋಜನೆ ಕೋರುವ ಹೊಸ ಕಾಲೇಜಿಗೆ ಅಥವಾ ಹೊಸ ವ್ಯಾಸಂಗ ಕ್ರಮಕ್ಕೆ ಅಥವಾ ನಿರ್ದಿಷ್ಟ ಪಡಿಸಿದ ವಿದ್ಯಾರ್ಥಿಗಳ ಪ್ರವೇಶ ಸಂಖ್ಯೆಗಿಂತ ಹೆಚ್ಚಿನ ಸಂಖ್ಯೆಗಾಗಿ ಸಂಯೋಜನೆ ಕೋರುವ ಪ್ರಸಕ್ತ ಕಾಲೇಜಿನಲ್ಲಿ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶವನ್ನು ನೀಡತಕ್ಕದ್ದಲ್ಲ.

(2) (1)ನೇ ಉಪ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸುವ ಯಾವುದೇ ಸಂಸ್ಥೆಯ ವಿರುದ್ಧ, ಕರ್ನಾಟಕ ಮಾನ್ಯತೆ ಪಡೆಯದ ಮತ್ತು ಸಂಯೋಜಿತವಾಗಿಲ್ಲದ ಶಿಕ್ಷಣ ಸಂಸ್ಥೆಗಳಿಗೆ ವಿದ್ಯಾರ್ಥಿಗಳ ಪ್ರವೇಶ ನಿಷೇಧ ಅಧಿನಿಯಮ, 1992ರ (1993ರ ಕರ್ನಾಟಕ ಅಧಿನಿಯಮ, 7) ಉಪಬಂಧಗಳ ಅನುಸಾರವಾಗಿ ಕ್ರಮ ಕೈಗೊಳ್ಳತಕ್ಕದ್ದು.

**43. ಪರೀಕ್ಷೆಗಳಿಗೆ ಹಾಜರಾಗಲು ನಿರ್ಬಂಧ.–** ಪ್ರವೇಶಾವಕಾಶವು ಅಮಾನ್ಯವಾಗಿರುವ ಅಥವಾ ವಿಶ್ವವಿದ್ಯಾನಿಲಯದಿಂದ ಪ್ರವೇಶವು ಅನುಮೋದಿತವಾಗಿಲ್ಲದ ಅಥವಾ ನಿರ್ದಿಷ್ಟಪಡಿಸಲಾದ ವಿದ್ಯಾರ್ಥಿಗಳ ಸಂಖ್ಯೆಗಿಂತ ಹೆಚ್ಚಿಗೆಯಾಗಿ ಕಾಲೇಜಿಗೆ ಅಥವಾ ವ್ಯಾಸಂಗ ಕ್ರಮಕ್ಕೆ ಪ್ರವೇಶ ಪಡೆದಿರುವ ಯಾವೊಬ್ಬ ವಿದ್ಯಾರ್ಥಿಯು, ಕಾಲೇಜು ಅಥವಾ ವಿಶ್ವವಿದ್ಯಾನಿಲಯವು ನಡೆಸುವ ಪರೀಕ್ಷೆಗೆ ಹಾಜರಾಗಲು ಅರ್ಹನಾಗಿರತಕ್ಕದ್ದಲ್ಲ.

**44. ಖಾಯಂ ಸಂಯೋಜನೆ.–** (1) ಐದು ವರ್ಷಗಳಿಗೆ ಕಡಿಮೆ ಇಲ್ಲದ ಅವಧಿಗೆ ನಿರಂತರವಾಗಿ ಸಂಯೋಜನೆಗೊಂಡಿರುವ ಮತ್ತು ಕಾಲಕಾಲಕ್ಕೆ ವಿಶ್ವವಿದ್ಯಾನಿಲಯವು ನಿರ್ದಿಷ್ಟಪಡಿಸಿದ ಸಂಯೋಜನೆಯ ಎಲ್ಲ ಷರತ್ತುಗಳನ್ನು ಪೂರೈಸಿರುವ ಮತ್ತು ವಿದ್ಯಾ ವಿಷಯದ ಉತ್ಕೃಷ್ಟತೆಯನ್ನು ಹಾಗೂ ಆಡಳಿತಾತ್ಮಕ ಗುಣಮಟ್ಟಗಳನ್ನು ಸರಾಸರಿಯಾಗಿ ಹೊಂದಿರುವ ಕಾಲೇಜಿಗೆ ಖಾಯಂ ಸಂಯೋಜನೆಯನ್ನು ಮಂಜೂರು ಮಾಡಬಹುದು.

(2) 41ನೇ ಪ್ರಕರಣದ ಉಪಬಂಧಗಳು, ಯಥೋಚಿತ ವ್ಯತ್ಯಾಸಗಳೊಂದಿಗೆ ಖಾಯಂ ಸಂಯೋಜನೆಯ ಮಂಜೂರಾತಿಗೆ ಅನ್ವಯವಾಗತಕ್ಕದ್ದು.

(3) ಖಾಯಂ ಆಗಿ ವಿಶ್ವವಿದ್ಯಾನಿಲಯಕ್ಕೆ ಸಂಯೋಜನೆಗೊಂಡ ಕಾಲೇಜಿನ ಆಡಳಿತಾತ್ಮಕ ಮತ್ತು ಶೈಕ್ಷಣಿಕ ಪ್ರಕಾರ್ಯಗಳು ಕಾಲಕಾಲಕ್ಕೆ ಕೊನೆಪಕ್ಷ ಐದು ವರ್ಷಕ್ಕೆ ಒಂದು ಸಲವಾದರೂ ವಿಶ್ವವಿದ್ಯಾನಿಲಯದ ಮತ್ತು ರಾಜ್ಯ ಸರ್ಕಾರದ ಪರಿಶೀಲನೆಗೆ ಒಳಪಡತಕ್ಕದ್ದು.

(4) ಪೂರ್ವೋಕ್ತ ಉಪ-ಪ್ರಕರಣಗಳಲ್ಲಿ ಏನೇ ಇದ್ದರೂ, ಖಾಯಂ ಆಗಿ ಸಂಯೋಜನೆಗೊಂಡ ಕಾಲೇಜು, (1)ನೇ ಉಪ-ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುವೇ ಷರತ್ತುಗಳನ್ನು ಪೂರೈಸಲು ವಿಫಲವಾಗಿದ್ದಲ್ಲಿ, ಅದರ ಖಾಯಂ ಸಂಯೋಜನೆಯನ್ನು ರದ್ದುಪಡಿಸತಕ್ಕದ್ದು:

ಪರಂತು, ಸಂಬಂಧಪಟ್ಟ ಕಾಲೇಜಿಗೆ ವಿಶ್ವವಿದ್ಯಾನಿಲಯವು ಒಂದು ಅವಕಾಶ ಕೊಟ್ಟ ಹೊರತು ಖಾಯಂ ಸಂಯೋಜನೆಯನ್ನು, ರದ್ದುಗೊಳಿಸತಕ್ಕದ್ದಲ್ಲ:

ಮತ್ತು ಪರಂತು, ಖಾಯಂ ಸಂಯೋಜನೆಯನ್ನು ರದ್ದುಗೊಳಿಸಿದ ತರುವಾಯ ಸಂಬಂಧಪಟ್ಟ ಕಾಲೇಜು, ವಾರ್ಷಿಕ ಆಧಾರದ ಮೇಲೆ ತಾತ್ಕಾಲಿಕವಾಗಿ ಸಂಯೋಜನೆಯ ಮುಂದುವರಿಕೆಯನ್ನು ಕೋರತಕ್ಕದ್ದು.

**45. ಸಂಯೋಜನೆಯನ್ನು ಹಿಂತೆಗೆದುಕೊಳ್ಳುವುದು.–** (1) ಈ ಅಧಿನಿಯಮದ ಯಾವುವೇ ಉಪಬಂಧಗಳನ್ನು ಪಾಲಿಸಲು ವಿಫಲಗೊಂಡರೆ ಅಥವಾ ಸಂಯೋಜನೆಯ ಯಾವುವೇ ಷರತ್ತುಗಳನ್ನು ಪಾಲಿಸಲು ವಿಫಲಗೊಂಡರೆ ಅಥವಾ ಕಾಲೇಜನ್ನು ಶಿಕ್ಷಣದ ಹಿತಾಸಕ್ತಿಗಳಿಗೆ ಪ್ರತಿಕೂಲವಾಗುವ ರೀತಿಯಲ್ಲಿ ನಡೆಸಿಕೊಂಡು ಬರುತ್ತಿದ್ದರೆ, ಸಂಯೋಜನೆಯ ಮೂಲಕ ಕಾಲೇಜಿಗೆ ಪ್ರದತ್ತವಾದ ಹಕ್ಕುಗಳನ್ನು ಪೂರ್ತಿಯಾಗಿ ಅಥವಾ ಭಾಗಶಃ ಹಿಂತೆಗೆದುಕೊಳ್ಳಬಹುದು ಅಥವಾ ಮಾರ್ಪಾಟು ಮಾಡಬಹುದು.

(2) ಅಂಥ ಹಕ್ಕುಗಳನ್ನು ಹಿಂತೆಗೆದುಕೊಳ್ಳುವುದಕ್ಕೆ ಅಥವಾ ಮಾರ್ಪಾಟು ಮಾಡುವುದಕ್ಕೆ ಪ್ರಶಾಸನ ಸಭೆಯಲ್ಲಿ ಮಾತ್ರ ಸೂಚನೆಯನ್ನು ಪ್ರಾರಂಭಿಸತಕ್ಕದ್ದು. ಅಂಥ ಸೂಚನೆಯನ್ನು ಮಂಡಿಸಲು ಉದ್ದೇಶಿಸುವ ಪ್ರಶಾಸನ ಸಭೆಯ ಪದನಿಮಿತ್ತ ಸದಸ್ಯನೂ ಒಳಗೊಂಡಂತೆ ಯಾವೊಬ್ಬ ಸದಸ್ಯನು ಯಾವ ಕಾರಣದ ಮೇಲೆ ಅಂಥ ಸೂಚನೆಯನ್ನು ಮಂಡಿಸಲಾಗಿದೆಯೇ ಆ ಕಾರಣಗಳನ್ನು ಲಿಖಿತದಲ್ಲಿ ನಿರೂಪಿಸಿ ಒಂದು ನೋಟೀಸನ್ನು ಕೊಡತಕ್ಕದ್ದು.

(3) ಸದರಿ ಸೂಚನೆಯನ್ನು ಪರಿಗಣನೆಗೆ ತೆಗೆದುಕೊಳ್ಳುವುದಕ್ಕೆ ಮೊದಲು ಪ್ರಶಾಸನ ಸಭೆಯು ಸೂಚನೆಯ ಒಂದು ಪ್ರತಿಯನ್ನು ಲಿಖಿತದಲ್ಲಿನ ನಿರೂಪಣೆಯಲ್ಲಿ ನಿರ್ದಿಷ್ಟ ಪಡಿಸಿದ ಅವಧಿಯೊಳಗೆ ಆ ಕಾಲೇಜಿನ ಪರವಾಗಿ ಲಿಖಿತದಲ್ಲಿ ಸಲ್ಲಿಸಿದ ಯಾವುದೇ ಮನವಿಯನ್ನು ಪ್ರಶಾಸನ ಸಭೆಯು ಪರ್ಯಾಲೋಚಿಸುವುದು ಎಂಬುದನ್ನು ತಿಳಿಸುತ್ತಾ ಸಂಬಂಧಪಟ್ಟ ಕಾಲೇಜಿನ ಪ್ರಾಂಶುಪಾಲರಿಗೆ ಕಳುಹಿಸತಕ್ಕದ್ದು;

(4) (3)ನೇ ಉಪ-ಪ್ರಕರಣದಲ್ಲಿ ಹಾಗೆ ನಿರ್ದಿಷ್ಟಪಡಿಸಿದ ಅವಧಿಯನ್ನು, ಅವಶ್ಯವಿದ್ದಲ್ಲಿ, ಪ್ರಶಾಸನ ಸಭೆಯು ಯುಕ್ತ ಸಮಯದವರೆಗೆ ವಿಸ್ತರಿಸಬಹುದು;

(5) ಮನವಿಯನ್ನು ಸ್ವೀಕರಿಸಿದ ಮೇಲೆ ಅಥವಾ ಹಿಂದೆ ಹೇಳಲಾದ ಉಪಪ್ರಕರಣಗಳಲ್ಲಿ ಉಲ್ಲೇಖಿಸಲಾದ ಅವಧಿಯು ಮುಗಿದಮೇಲೆ, ಪ್ರಶಾಸನ ಸಭೆಯು ಸೂಚನೆಯ ನೋಟೀಸನ್ನು, ಅದರಲ್ಲಿ ತಿಳಿಸಿದ ಕಾರಣಗಳನ್ನು ಮತ್ತು ಮನವಿಯನ್ನು ಪರ್ಯಾಲೋಚಿಸಿದ ತರುವಾಯ ಮತ್ತು ರಚಿಸಲಾದ ಮತ್ತು ಈ ಸಂಬಂಧದಲ್ಲಿ ಅದರಿಂದ ಪ್ರಾಧಿಕೃತವಾದ ಸಮಿತಿಯಿಂದ ಅಂಥ ಪರಿಶೀಲನೆಯನ್ನು ನಡೆಸಿದ ತರುವಾಯ ಅದಕ್ಕೆ ಅವಶ್ಯವೆಂದು ಕಂಡುಬರಬಹುದಾದಂಥ ಪರಿಶೀಲನೆಯನ್ನು ಮತ್ತು ಹೆಚ್ಚಿನ ವಿಚಾರಣೆಯನ್ನು ನಡೆಸಿದ ತರುವಾಯ, ಆ ಬಗೆಗಿನ ಕಾರಣಗಳಿಗೆ ಸಂಬಂಧಿಸಿದಂತೆ ಒಂದು ನಿರ್ಣಯವನ್ನು ಜಾರಿಗೊಳಿಸಬಹುದು ಮತ್ತು ಅದರ ವರದಿಯನ್ನು ಪ್ರಶಿಕ್ಷಣ ಪರಿಷತ್ತಿಗೆ ಸಲ್ಲಿಸತಕ್ಕದ್ದು;

(6) (5)ನೇ ಉಪ-ಪ್ರಕರಣದ ಅಡಿಯಲ್ಲಿ ವರದಿಯನ್ನು ಸ್ವೀಕರಿಸಿದ ಮೇಲೆ, ಪ್ರಶಿಕ್ಷಣ ಪರಿಷತ್ತು ಅದಕ್ಕೆ ಅವಶ್ಯವೆಂದು ಕಂಡು ಬರಬಹುದಾದಂಥ ಹೆಚ್ಚಿನ ವಿಚಾರಣೆ ಯಾವುದಾದರೂ ಇದ್ದರೆ ಅದನ್ನು ಮಾಡಿದ ತರುವಾಯ, ಆ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ದಾಖಲಿಸತಕ್ಕದ್ದು ಮತ್ತು ಪ್ರಶಾಸನ ಸಭೆಗೆ ವಾಪಸು ಕಳುಹಿಸತಕ್ಕದ್ದು;

(7) ಪ್ರಶಾಸನ ಸಭೆಯು, ಪ್ರಶಿಕ್ಷಣ ಪರಿಷತ್ತಿನ ನಿರ್ಣಯವನ್ನು ಪರ್ಯಾಲೋಚಿಸಿದ ತರುವಾಯ ಸಂಯೋಜನೆಯನ್ನು ಹಿಂತೆಗೆದುಕೊಳ್ಳಬೇಕೆಂದು ಶಿಫಾರಸ್ಸು ಮಾಡುವ ಅಂತಿಮ ನಿರ್ಣಯವನ್ನು ಜಾರಿಗೊಳಿಸತಕ್ಕದ್ದು. ಅಂಥ ನಿರ್ಣಯ ಪ್ರಶಾಸನ ಸಭೆಯ ಸಭೆಯಲ್ಲಿ ಹಾಜರಿದ್ದ ಸದಸ್ಯರ ಮೂರನೇ ಎರಡರಷ್ಟು ಸದಸ್ಯರ ಬೆಂಬಲಕ್ಕೆ ದೊರೆತ ಹೊರತು ಅದು ಪ್ರಶಾಸನ ಸಭೆಯಿಂದ ಅಂಗೀಕೃತವಾಗಿರುವುದಾಗಿ ಭಾವಿಸತಕ್ಕದ್ದಲ್ಲ;

(8) ಕುಲಸಚಿವರು ಪ್ರಸ್ತಾವವನ್ನು, ಸೂಚನೆಯ ನೋಟೀಸು, ಕಾಲೇಜಿನ ಉತ್ತರ, ಪ್ರಶಾಸನ ಸಭೆ ಮತ್ತು ಪ್ರಶಿಕ್ಷಣ ಪರಿಷತ್ತಿನ ನಿರ್ಣಯವೂ ಒಳಗೊಂಡಂತೆ ಎಲ್ಲಾ ದಸ್ತಾವೇಜುಗಳೊಂದಿಗೆ ತೀರ್ಮಾನ ಕೈಗೊಳ್ಳುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಒಪ್ಪಿಸತಕ್ಕದ್ದು;

(9) ರಾಜ್ಯ ಸರ್ಕಾರವು, ತನಗೆ ಅವಶ್ಯವೆಂದು ಕಂಡುಬರಬಹುದಾದಂಥ ಹೆಚ್ಚಿನ ವಿಚಾರಣೆಯನ್ನು ನಡೆಸಿದ ತರುವಾಯ, ಒಂದು ನಿರ್ದಿಷ್ಟ ಶೈಕ್ಷಣಿಕ ವರ್ಷದಿಂದ ಅನ್ವಯವಾಗುವಂತೆ, ಸಂಯೋಜನೆಯನ್ನು ಪೂರ್ತಿಯಾಗಿ ಅಥವಾ ಭಾಗಶಃ ಹಿಂತೆಗೆದುಕೊಳ್ಳುವಂತೆ ಅಥವಾ ಮಾರ್ಪಾಟು ಮಾಡುವಂತೆ ಅಥವಾ ಪ್ರಸ್ತಾವವನ್ನು ತಿರಸ್ಕರಿಸುವಂತೆ ವಿಶ್ವವಿದ್ಯಾನಿಲಯಕ್ಕೆ ಆದೇಶಿಸಬಹುದು;

(10) ವಿಶ್ವವಿದ್ಯಾನಿಲಯವು, ಅಂಥ ನಿರ್ದೇಶನವನ್ನು ಸ್ವೀಕರಿಸಿದ ಮೇಲೆ ಅಂಥ ನಿರ್ದೇಶನದೊಂದಿಗೆ ಔಪಚಾರಿಕ ಆದೇಶವನ್ನು ಹೊರಡಿಸತಕ್ಕದ್ದು;

(11) ಸಂಯೋಜನೆಯನ್ನು ಪೂರ್ಣವಾಗಿ ಅಥವಾ ಭಾಗಶಃ ಹಿಂತೆಗೆದುಕೊಂಡ ಕಾಲೇಜಿನ ವಿಧ್ಯಾರ್ಥಿಗಳಿಗೆ, ನಿರ್ದಿಷ್ಟ ವ್ಯಾಸಂಗ ಕ್ರಮದ ಸಂಬಂಧದಲ್ಲಿ ಪ್ರವೇಶ ಸಂಖ್ಯೆಯನ್ನು ಹೆಚ್ಚಿಸುವ ಮೂಲಕ, ವಿಶ್ವವಿದ್ಯಾನಿಲಯವು, ಹತ್ತಿರದಲ್ಲಿರುವ ಕಾಲೇಜಿನಲ್ಲಿ ಅಂಥ ವಿದ್ಯಾರ್ಥಿಗಳಿಗೆ ಸ್ಥಳಾವಕಾಶವನ್ನು ಕಲ್ಪಿಸುವ ವ್ಯವಸ್ಥೆ ಮಾಡತಕ್ಕದ್ದು. ಅಂಥ ವಿದ್ಯಾರ್ಥಿಗಳಿಗೆ ಸಂಬಂಧಪಟ್ಟ ಎಲ್ಲಾ ದಾಖಲೆಗಳನ್ನು ಸಂಯೋಜನೆಯನ್ನು ಹಿಂತೆಗೆದುಕೊಂಡ ಕಾಲೇಜಿನಿಂದ ವಿಶ್ವವಿದ್ಯಾನಿಲಯವು ಅವರನ್ನು ವರ್ಗಾಯಿಸಿದ ಕಾಲೇಜಿಗೆ ವರ್ಗಾಯಿಸತಕ್ಕದ್ದು;

**46. ಕಾಲೇಜುಗಳ ಅಥವಾ ವ್ಯಾಸಂಗ ಕ್ರಮದ ಸ್ವಯಂ ಮುಚ್ಚುವಿಕೆ:** (1) ತನ್ನ ಅಸಾಮರ್ಥ್ಯದ ಅಥವಾ ಹಣಕಾಸು ದೃಷ್ಟಿಯಿಂದ ಊರ್ಜಿತವಾಗದ ಕಾರಣದಿಂದ ಅಥವಾ ಆಡಳಿತ ವ್ಯವಸ್ಥೆಯು ಕುಸಿದ ಕಾರಣದಿಂದ ಕಾಲೇಜನ್ನು ಅಥವಾ ವ್ಯಾಸಂಗಕ್ರಮವನ್ನು ಮುಚ್ಚಲು ಉದ್ದೇಶಿಸಿರುವಂತಹ ಯಾವುದೇ ಕಾಲೇಜಿನ ಆಡಳಿತ ಮಂಡಳಿಯು, ವಿಶ್ವವಿದ್ಯಾಲಯಕ್ಕೆ ಮತ್ತು ರಾಜ್ಯ ಸರ್ಕಾರಕ್ಕೆ, ಕಾಲೇಜನ್ನು ಮುಚ್ಚುವುದಕ್ಕೆ ಮೊದಲು ಮೂರು ತಿಂಗಳುಗಳಿಗಿಂತ ಕಡಿಮೆಯಿಲ್ಲದಂತೆ ಆ ಬಗ್ಗೆ ಕಾರಣಗಳನ್ನು ತಿಳಿಸಿ ಲಿಖಿತ ನೋಟೀಸನ್ನು ನೀಡತಕ್ಕದ್ದು.

(2) ಕಾಲೇಜಿನ ಅಥವಾ ವ್ಯಾಸಂಗ ಕ್ರಮದ ಮುಚ್ಚುವಿಕೆಯ ಅರ್ಜಿಯನ್ನು ಪ್ರಶಿಕ್ಷಣ ಪರಿಷತ್ತು ಮತ್ತು ಪ್ರಶಾಸನ ಸಭೆಗಳು ಪರಿಗಣಿಸತಕ್ಕದ್ದು ಮತ್ತು ಪ್ರಶಾಸನ ಸಭೆ ಅದರ ಮೇಲೆ ಸೂಕ್ತ ಗೊತ್ತುವಳಿಗಳನ್ನು ಮಾಡತಕ್ಕದ್ದು.

(3) ಕುಲಸಚಿವರು, ಅರ್ಜಿಯನ್ನು ಮತ್ತು ಪ್ರಶಿಕ್ಷಣ ಪರಿಷತ್ತಿನ ಮತ್ತು ಪ್ರಶಾಸನ ಸಭೆಯ ಗೊತ್ತುವಳಿಗಳನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು, ಅದು ಅದನ್ನು ಪರಿಗಣಿಸಿದ ತರುವಾಯ ಮುಚ್ಚುವ ಬಗ್ಗೆ ಅನುಮತಿ ನೀಡುವ ಅಥವಾ

ಮುಚ್ಚುವಿಕೆಗೆ ಅನುಮತಿ ನಿರಾಕರಿಸುವ ಬಗ್ಗೆ ವಿಶ್ವವಿದ್ಯಾಲಯಕ್ಕೆ ನಿರ್ದೇಶನ ನೀಡತಕ್ಕದ್ದು ಮತ್ತು ವಿಶ್ವವಿದ್ಯಾಲಯವು ಅಂಥ ನಿರ್ದೇಶನಗಳನ್ನು ಸ್ವೀಕರಿಸಿದ ತರುವಾಯ ಅದಕ್ಕನುಸಾರ ಆದೇಶಗಳನ್ನು ಹೊರಡಿಸತಕ್ಕದ್ದು.

(4) ಆಡಳಿತ ಮಂಡಳಿಯು, ಶೈಕ್ಷಣಿಕ ವರ್ಷದ ಚಾಲ್ತಿ ಅವಧಿಯಲ್ಲಿ ಮತ್ತು ವಿಶ್ವವಿದ್ಯಾಲಯವು ಸಂಬಂಧಪಟ್ಟ ವ್ಯಾಸಂಗ ಕ್ರಮದ ವಾರ್ಷಿಕ ಪರೀಕ್ಷೆಗಳನ್ನು ನಡೆಸುವವರೆಗೆ ಮತ್ತು ವಿಶ್ವವಿದ್ಯಾಲಯವು ಹಾಗೆ ಮಾಡುವುದಕ್ಕಾಗಿ ಒಂದು ಔಪಚಾರಿಕ ಆದೇಶವನ್ನು ಹೊರಡಿಸುವವರೆಗೆ ಕಾಲೇಜನ್ನು ಅಥವಾ ವ್ಯಾಸಂಗ ಕ್ರಮವನ್ನು ಮುಚ್ಚತಕ್ಕದ್ದಲ್ಲ.

(5) ಹಾಗೆ ಮುಚ್ಚಲಾದ ಕಾಲೇಜುಗಳ ವಿದ್ಯಾರ್ಥಿಗಳು ವರ್ಗಾವಣೆಯ ನಂತರ, ವಿಶ್ವವಿದ್ಯಾಲಯವು, ಹತ್ತಿರವಿರುವ ಕಾಲೇಜಿನಲ್ಲಿ ಸಂಬಂಧಪಟ್ಟ ವ್ಯಾಸಂಗ ಕ್ರಮದಲ್ಲಿ ಪ್ರವೇಶ ಸಂಖ್ಯೆಯನ್ನು ಅಂಥ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ನೀಡುವಷ್ಟರ ಮಟ್ಟಿಗೆ ಹೆಚ್ಚಿಸಿ ಅವರಿಗೆ ಪ್ರವೇಶವನ್ನು ನೀಡತಕ್ಕದ್ದು ಮತ್ತು ಅಂಥ ವಿದ್ಯಾರ್ಥಿಗಳಿಗೆ ಸಂಬಂಧಪಟ್ಟ ಎಲ್ಲ ದಾಖಲೆಗಳನ್ನು ಹಾಗೆ ಮುಚ್ಚಲ್ಪಟ್ಟ ಕಾಲೇಜಿನಿಂದ, ಯಾವ ಕಾಲೇಜಿಗೆ ಅಂಥ ವಿದ್ಯಾರ್ಥಿಗಳು ಪ್ರವೇಶವನ್ನು ಪಡೆದಿರುವರೋ ಅಲ್ಲಿಗೆ ವರ್ಗಾಯಿಸತಕ್ಕದ್ದು.

(6) (1)ನೇ ಉಪಪ್ರಕರಣದ ಅಡಿಯಲ್ಲಿ ನೋಟೀಸಿನ ಅವಧಿಯು ಮುಕ್ತಾಯವಾದ ತರುವಾಯ ಮೂವತ್ತು ದಿನಗಳೊಳಗೆ, ಹಾಗೆ ಮುಚ್ಚುವ ಬಗ್ಗೆ ಅನುಮತಿ ನೀಡುವ ಅಥವಾ ನಿರಾಕರಿಸುವ ಯಾವುದೇ ನಿರ್ದೇಶನವನ್ನು ರಾಜ್ಯ ಸರ್ಕಾರವು ನೀಡದಿದ್ದರೆ, (4)ನೇ ಉಪಪ್ರಕರಣದ ಉಪಬಂಧಗಳಿಗೊಳಪಟ್ಟು, ಸಂದರ್ಭಾನುಸಾರ ಕಾಲೇಜನ್ನು ಅಥವಾ ವ್ಯಾಸಂಗ ಕ್ರಮವನ್ನು ಮುಚ್ಚಲು ಆಡಳಿತ ಮಂಡಲಿಗೆ ಅನುಮತಿ ನೀಡಲಾಗಿದೆ ಎಂದು ಭಾವಿಸತಕ್ಕದ್ದು.

**47. ಕೆಲವು ಸಂಸ್ಥೆಗಳಿಗೆ ಮಾನ್ಯತೆ.**- (1) **ಸಂಶೋಧನೆ** ಅಥವಾ ನಿರ್ದಿಷ್ಟಪಡಿಸಿದ ಅಧ್ಯಯನಗಳನ್ನು ನಡೆಸುವ ಕಾಲೇಜುಗಳನ್ನು ಹೊರತುಪಡಿಸಿ, ವಿಶ್ವವಿದ್ಯಾಲಯ ಪ್ರದೇಶದ ಒಳಗೆ ಅಥವಾ ಹೊರಗೆ ಇರುವ ಯಾವುದೇ ಸಂಸ್ಥೆಯನ್ನು, ಶಾಸನಗಳ ಮೂಲಕ ನಿಯಮಿಸಬಹುದಾದಂಥ ಉದ್ದೇಶಕ್ಕಾಗಿ ಮತ್ತು ಅಂಥ ವಿಧಾನದಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು, ಮಾನ್ಯತೆ ಪಡೆದ ಸಂಸ್ಥೆಯೆಂದು ಪ್ರಶಾಸನ ಸಭೆಯು ಮಾನ್ಯತೆ ನೀಡಬಹುದು.

(2) ಯಾವುದೇ ಅಂಥ ಮಾನ್ಯತೆಯನ್ನು ಶಾಸನಗಳ ಮೂಲಕ ನಿಯಮಿಸಬಹುದಾದಂಥ ವಿಧಾನದಲ್ಲಿ ಮತ್ತು ಅಂಥ ಕಾರಣಗಳಿಗಾಗಿ ಪೂರ್ಣವಾಗಿಯಾಗಲಿ ಅಥವಾ ಭಾಗಶಃವಾಗಿಯಾಗಲಿ ಹಿಂತೆಗೆದುಕೊಳ್ಳಬಹುದು ಅಥವಾ ಮಾರ್ಪಾಟು ಮಾಡಬಹುದು.

**48. ಕಾಲೇಜುಗಳ ಪರಿವೀಕ್ಷಣೆ.**-(1) ಖಾಯಂ ಆಗಿ ಸಂಯೋಜನೆಗೊಂಡ ಕಾಲೇಜುಗಳೂ ಒಳಗೊಂಡಂತೆ ಸಂಯೋಜನೆಗೊಂಡ ಪ್ರತಿಯೊಂದು ಕಾಲೇಜು, ಪ್ರಶಾಸನ ಸಭೆಯು, ಪ್ರಶಿಕ್ಷಣ ಪರಿಷತ್ತಿನೊಡನೆ ಸಮಾಲೋಚನೆ ನಡೆಸಿದ ತರುವಾಯ, ಆ ಕಾಲೇಜಿನ ಅಥವಾ ಸಂಸ್ಥೆಯ ದಕ್ಷತೆಯನ್ನು ಮತ್ತು ಅದು ಸಾಧಿಸಿದ ಶೈಕ್ಷಣಿಕ ಗುಣಮಟ್ಟವನ್ನು ನಿರ್ಣಯಿಸುವುದಕ್ಕೆ ಸಾಧ್ಯವಾಗುವಂತೆ ಅಗತ್ಯಪಡಿಸಬಹುದಾದಂಥ ವರದಿಗಳನ್ನು, ವಿವರಣ ಪಟ್ಟಿಕೆಗಳನ್ನು ಮತ್ತು ಇತರ ಮಾಹಿತಿಯನ್ನು ಕುಲಸಚಿವರಿಗೆ ಒದಗಿಸತಕ್ಕದ್ದು.

(2) ಪ್ರಶಾಸನ ಸಭೆಯು, ಅಂಥ ಪ್ರತಿಯೊಂದು ಕಾಲೇಜನ್ನು ಈ ಉದ್ದೇಶಕ್ಕಾಗಿ ರಚಿಸಿದ ಒಂದು ಸಮಿತಿಯು ಕಾಲಕಾಲಕ್ಕೆ ಪರಿವೀಕ್ಷಣೆ ನಡೆಸುವಂತೆ ಮಾಡತಕ್ಕದ್ದು.

(3) ಪ್ರಶಾಸನ ಸಭೆಯು, ಹಾಗೆ ಪರಿವೀಕ್ಷಣೆ ನಡೆಸಿದ ಮೇಲೆ ಯಾವುದೇ ಕಾಲೇಜನ್ನು, ನಿರ್ದಿಷ್ಟಪಡಿಸಿದ ಅವಧಿಯೊಳಗೆ, ಯಾವುವೇ ವಿಷಯಗಳ ಸಂಬಂಧದಲ್ಲಿ ತನಗೆ ಅವಶ್ಯವೆಂದು ಕಂಡುಬರಬಹುದಾದಂಥ ಕ್ರಮವನ್ನು ಕೈಗೊಳ್ಳಲು ಕೋರಬಹುದು.

(4) ಪ್ರತಿಯೊಂದು ಕಾಲೇಜು, ವಿಶ್ವವಿದ್ಯಾಲಯವು ವಿದ್ಯಾವಿಷಯಕ್ಕೆ ಮತ್ತು ಆಡಳಿತಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳ ಬಗ್ಗೆ ಮತ್ತು ಅದಕ್ಕೆ ಪೂರಕವಾದ ವಿಷಯಗಳ ಬಗ್ಗೆ ಕಾಲಕಾಲಕ್ಕೆ ಹೊರಡಿಸುವ ನಿರ್ದೇಶನಗಳನ್ನು ಪಾಲಿಸತಕ್ಕದ್ದು.

## ಅಧ್ಯಾಯ – VII

**49. ಫ್ಯಾಕಲ್ಟಿಗಳು ಮತ್ತು ವಿಭಾಗಗಳು:–** ಈ ಮುಂದೆ ಹೇಳಿರುವ ಫ್ಯಾಕಲ್ಟಿಗಳು ಇರತಕ್ಕದ್ದು ಮತ್ತು ಪ್ರತಿಯೊಂದು ಫ್ಯಾಕಲ್ಟಿಯ ಅಡಿಯಲ್ಲಿ ಈ ಮುಂದೆ ತಿಳಿಸಿರುವ ವಿಭಾಗಗಳು ಇರತಕ್ಕದ್ದು.

**I. ವೇದಾಧ್ಯಯನಗಳ ಫ್ಯಾಕಲ್ಟಿ.**

1. ವೇದ ಮತ್ತು ವೇದಾಂಗಗಳ ವಿಭಾಗ.
2. ಜ್ಯೋತಿರ್ವಿಜ್ಞಾನ ವಿಭಾಗ.
3. ತೌಲನಿಕ ಪುರಾಣ ವಿಭಾಗ.

**II. ಭಾಷಾ ಫ್ಯಾಕಲ್ಟಿ.**

1. ಸಂಸ್ಕೃತ ಭಾಷೆ ಮತ್ತು ಸಾಹಿತ್ಯ ವಿಭಾಗ
2. ಪಾಲಿ, ಪ್ರಾಕೃತ ಮತ್ತು ಅದೇಬಗೆಯ ಭಾಷೆಗಳ ವಿಭಾಗ.
3. ತೌಲನಿಕ ಭಾಷಾ ವಿಜ್ಞಾನ ವಿಭಾಗ.
4. ಭಾಷಾಂತರ ವಿಭಾಗ.
5. ಹಸ್ತ ಪ್ರತಿಶಾಸ್ತ್ರ ವಿಭಾಗ.
6. ಮಹಾಕಾವ್ಯ ಮತ್ತು ಪೌರಾಣಿಕ ಅಧ್ಯಯನಗಳ ವಿಭಾಗ.

**III ಶಾಸ್ತ್ರಗಳ ಫ್ಯಾಕಲ್ಟಿ.**

1. ವ್ಯಾಕರಣ ವಿಭಾಗ.
2. ನ್ಯಾಯ ಮತ್ತು ವೈಶೇಷಿಕ ವಿಭಾಗ.
3. ಸಾಂಖ್ಯ ಮತ್ತು ಯೋಗ ವಿಭಾಗ.
4. ಪೂರ್ವ ಮೀಮಾಂಸಾ ವಿಭಾಗ.
5. ಅಲಂಕಾರಶಾಸ್ತ್ರ ವಿಭಾಗ.
6. ಧರ್ಮಶಾಸ್ತ್ರಗಳು ಮತ್ತು ಅರ್ಥಶಾಸ್ತ್ರ ವಿಭಾಗ.
7. ಆಗಮ ಶಾಸ್ತ್ರಗಳ ವಿಭಾಗ.

**IV. ವೇದಾಂತ ಫ್ಯಾಕಲ್ಟಿ**

1. ಅದ್ವೈತ ವಿಭಾಗ.
2. ವಿಶಿಷ್ಠಾದ್ವೈತ ವಿಭಾಗ.
3. ದ್ವೈತ ವಿಭಾಗ.
4. ಶಕ್ತಿ ವಿಶಿಷ್ಠಾದ್ವೈತ ವಿಭಾಗ.
5. ಭೌದ್ಧ ಧರ್ಮ ಮತ್ತು ಜೈನ ಧರ್ಮ ವಿಭಾಗ.

**V. ಶಿಕ್ಷಣ ವಿಭಾಗ.**

**VI. ಪ್ರಾಚೀನ ಭಾರತೀಯ ವಿಜ್ಞಾನಗಳ ಫ್ಯಾಕಲ್ಟಿ.**

1. ಖಗೋಳ ಶಾಸ್ತ್ರ ಮತ್ತು ತತ್ಸಂಬಂಧ ವಿಜ್ಞಾನಗಳ ವಿಭಾಗ.
2. ಆಯುರ್ವೇದ ಮತ್ತು ಜಾನಪದ ವೈದ್ಯ ವಿಭಾಗ.
3. ಸಲಹಾ ನೀಡಿಕೆ ಮತ್ತು ಯೋಗ ಚಿಕಿತ್ಸಾ ವಿಭಾಗ.
4. ಜೀವಿ ಪರಿಸರ ವಿಜ್ಞಾನ ಮತ್ತು ಪಾರಂಪರಿಕ ಜ್ಞಾನ ವಿಭಾಗ

**VII. ನಿಯಮಿಸಬಹುದಾದಂತಹ ಇತರ ಫ್ಯಾಕಲ್ಟಿಗಳು**

**50. ಆಯ್ಕೆ ಸಮಿತಿಗಳು.-** (1) ವಿಶ್ವವಿದ್ಯಾಲಯವು ನಿರ್ವಹಿಸುವ ಸಂಸ್ಥೆಗಳಲ್ಲಿಯ ಪ್ರಾಧ್ಯಾಪಕರು, ಸಹ ಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರು ಮತ್ತು ಗ್ರಂಥಪಾಲರ ಹುದ್ದೆಗಳಿಗೆ ನೇಮಕ ಮಾಡುವ ಬಗ್ಗೆ ಕಾರ್ಯಕಾರಿ ಸಮಿತಿಗೆ ಶಿಫಾರಸ್ಸು ಮಾಡಲು ಒಂದು ಆಯ್ಕೆ ಸಮಿತಿ ಇರತಕ್ಕದ್ದು.

(2) ಕೆಳಕಂಡ ಕೋಷ್ಟಕದ (1)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾದ ಹುದ್ದೆಗಳ ನೇಮಕಾತಿಗಾಗಿ ಆಯ್ಕೆ ಸಮಿತಿಯು ಕುಲಪತಿ, ಸರ್ಕಾರದ ಒಬ್ಬ ನಾಮನಿರ್ದೇಶಿತ ವ್ಯಕ್ತಿ ಮತ್ತು ಸದರಿ ಕೋಷ್ಟಕದ (2)ನೇ ಅಂಕಣದಲ್ಲಿಯ ಸಂವಾದಿ ನಮೂದಿನಲ್ಲಿ ನಿರ್ದಿಷ್ಟಪಡಿಸಲಾದ ವ್ಯಕ್ತಿಗಳನ್ನು ಒಳಗೊಂಡಿರತಕ್ಕದ್ದು ಮತ್ತು ಇಲಾಖಾ ಮುಖ್ಯಸ್ಥರಿಲ್ಲದಿರುವ ಕಡೆ ಪ್ರಾಧ್ಯಾಪಕರು, ಸಹಪ್ರಾಧ್ಯಾಪಕರು ಅಥವಾ ಸಹಾಯಕ ಪ್ರಾಧ್ಯಾಪಕರ ನೇಮಕಾತಿಯ ಸಂದರ್ಭದಲ್ಲಿ ಕಾರ್ಯಕಾರಿ ಸಮಿತಿಯು ತನ್ನ ಸದಸ್ಯರ ಪೈಕಿಯಿಂದ ನಾಮನಿರ್ದೇಶನ ಮಾಡಿರುವ ವ್ಯಕ್ತಿಯನ್ನು ಸಹ ಒಳಗೊಂಡಿರತಕ್ಕದ್ದು.

**ಕೋಷ್ಟಕ**

| 1 | 2 |
|---|---|
| ಪ್ರಾಧ್ಯಾಪಕರು ಅಥವಾ ಸಹಪ್ರಾಧ್ಯಾಪಕರು | (i) ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರು, ಅವರು ಪ್ರಾಧ್ಯಾಪಕರಾಗಿದ್ದರೆ. |
| | (ii) ಕುಲಪತಿಯವರಿಂದ ನಾಮ ನಿರ್ದೇಶಿತರಾಗಬೇಕಾದ ಒಬ್ಬ ಡೀನ್ ಅಥವಾ ಪ್ರಾಧ್ಯಾಪಕರು. |
| | (iii) ಪ್ರಾಧ್ಯಾಪಕರು ಅಥವಾ ಸಹಪ್ರಾಧ್ಯಾಪಕರಿಗೆ ಸಂಬಂಧಪಟ್ಟ ವಿಷಯದಲ್ಲಿ ವಿಶೇಷ ಜ್ಞಾನ ಅಥವಾ ಆಸಕ್ತಿಯುಳ್ಳ, ಪ್ರಶಾಸನಸಭೆಯಿಂದ ನಾಮನಿರ್ದೇಶಿತರಾದ ವಿಶ್ವವಿದ್ಯಾಲಯದ ಸೇವೆಯಲ್ಲಿರದ ಮೂವರು ವ್ಯಕ್ತಿಗಳು. |
| ಸಹಾಯಕ ಪ್ರಾಧ್ಯಾಪಕರು | (i) ಸಂಬಂಧಪಟ್ಟ ವಿಭಾಗದ ಮುಖ್ಯಸ್ಥರು. |
| | (ii) ಕುಲಪತಿಯವರಿಂದ ನಾಮನಿರ್ದೇಶಿತರಾಗಬೇಕಾದ ಒಬ್ಬ ಪ್ರಾಧ್ಯಾಪಕರು. |
| | (iii) ಸಹಾಯಕ ಪ್ರಾಧ್ಯಾಪಕರಿಗೆ ಸಂಬಂಧಪಟ್ಟ ವಿಷಯದಲ್ಲಿ ವಿಶೇಷ ಜ್ಞಾನ ಅಥವಾ ಆಸಕ್ತಿಯುಳ್ಳ, ಪ್ರಶಾಸನಸಭೆಯಿಂದ ನಾಮ ನಿರ್ದೇಶಿತರಾದ, ವಿಶ್ವವಿದ್ಯಾಲಯದ ಸೇವೆ ಯಲ್ಲಿರದ ಇಬ್ಬರು ವ್ಯಕ್ತಿಗಳು. |
| ಗ್ರಂಥಪಾಲ | (i) ಗ್ರಂಥಾಲಯ ವಿಜ್ಞಾನ ಅಥವಾ ಗ್ರಂಥಾಲಯ ಆಡಳಿತದ ಬಗ್ಗೆ ವಿಶೇಷ ಜ್ಞಾನವಿರುವ ಪ್ರಶಾಸನಸಭೆಯಿಂದ ನಾಮನಿರ್ದೇಶಿತ ರಾಗಬೇಕಾದ, ವಿಶ್ವವಿದ್ಯಾಲಯದ ಸೇವೆ ಯಲ್ಲಿರದ ಇಬ್ಬರು ವ್ಯಕ್ತಿಗಳು. |
| | (ii) ಪ್ರಶಾಸಸಭೆಯಿಂದ ನಾಮನಿರ್ದೇಶಿತನಾದ ವಿಶ್ವವಿದ್ಯಾಲಯದ ಸೇವೆಯಲ್ಲಿರದ ಒಬ್ಬ ವ್ಯಕ್ತಿ. |

**ವಿವರಣೆ.-I**. ಅಂತರ ವಿದ್ಯಾವಿಷಯಗಳ ಯೋಜನೆಗಾಗಿ ನೇಮಕಾತಿಗಳನ್ನು ಮಾಡುತ್ತಿರುವಲ್ಲಿ, ಯೋಜನೆಯ ಮುಖ್ಯಸ್ಥನನ್ನು ಸಂಬಂಧಪಟ್ಟ ಇಲಾಖೆಯ ಮುಖ್ಯಸ್ಥನೆಂದು ಭಾವಿಸತಕ್ಕದ್ದು.

**ವಿವರಣೆ.-II.** ನಾಮನಿರ್ದೇಶಿತರಾಗಬೇಕಾದ ಪ್ರಾಧ್ಯಾಪಕರು, ಆಯ್ಕೆ ಮಾಡಲಾಗುವ ವಿಶೇಷ ವಿಷಯಕ್ಕೆ ಸಂಬಂಧಿಸಿದ ಪ್ರಾಧ್ಯಾಪಕರಾಗಿರತಕ್ಕದ್ದು ಮತ್ತು ಕುಲಪತಿಯವರು, ಪ್ರಾಧ್ಯಾಪಕರನ್ನು ನಾಮನಿರ್ದೇಶಿಸುವುದಕ್ಕೆ ಮುಂಚೆ ಇಲಾಖಾ ಮುಖ್ಯಸ್ಥರು ಮತ್ತು ಫ್ಯಾಕಲ್ಟಿ ಡೀನರೊಂದಿಗೆ ಸಮಾಲೋಚಿಸತಕ್ಕದ್ದು.

**ವಿವರಣೆ.- III**. (1) (2)ನೇ ಅಂಕಣದಲ್ಲಿ ಉಲ್ಲೇಖಿಸಲಾದ ವಿಶೇಷ ವಿಷಯಕ್ಕೆ ಸಂಬಂಧಿಸಿದಂತೆ, ಸಂದರ್ಭಾನುಸಾರ, ಕಡೇ ಪಕ್ಷ ನಾಲ್ವರ ಪೈಕಿ ಮೂವರು ಅಥವಾ ಮೂವರು ಸದಸ್ಯರ ಪೈಕಿ ಇಬ್ಬರು ಆಯ್ಕೆ ಸಮಿತಿಯ ಸಭೆಯಲ್ಲಿ ಹಾಜರಿರತಕ್ಕದ್ದು.

(2) ಕುಲಪತಿಯವರು ಆಯ್ಕೆ ಸಮಿತಿಯ ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು.

(3) ಆಯ್ಕೆ ಸಮಿತಿಯ ಸಭೆಗಳನ್ನು ಕುಲಪತಿಯವರು ಸಮಾವೇಶಗೊಳಿಸತಕ್ಕದ್ದು.

(4) ಶಿಫಾರಸ್ಸುಗಳನ್ನು ಮಾಡುವಲ್ಲಿ ಆಯ್ಕೆ ಸಮಿತಿಯು ಅನುಸರಿಸಬೇಕಾದ ಕಾರ್ಯವಿಧಾನವು ನಿಯಮಿಸಬಹುದಾದಂತೆ ಇರತಕ್ಕದ್ದು.

(5) ಆಯ್ಕೆ ಸಮಿತಿಯು ಮಾಡಿದ ಶಿಫಾರಸ್ಸುಗಳನ್ನು ಅಂಗೀಕರಿಸಲು ಪ್ರಶಾಸನಸಭೆಗೆ ಸಾಧ್ಯವಾಗದಿದ್ದರೆ, ಅದು ಕಾರಣಗಳನ್ನು ದಾಖಲಿಸಿ, ಅಂತಿಮ ಆದೇಶಗಳಿಗಾಗಿ ಪ್ರಕರಣವನ್ನು ಕುಲಾಧಿಪತಿಯವರಿಗೆ ಒಪ್ಪಿಸತಕ್ಕದ್ದು.

(6) ತಾತ್ಕಾಲಿಕ ಹುದ್ದೆಗಳಿಗೆ ಮಾಡುವ ನೇಮಕಾತಿಗಳನ್ನು ಈ ಕೆಳಗೆ ಸೂಚಿಸಲಾದಂತೆ ಮಾಡತಕ್ಕದ್ದು:-

(i) ತಾತ್ಕಾಲಿಕ ಖಾಲಿಸ್ಥಾನಗಳು ಒಂದು ಶೈಕ್ಷಣಿಕ ವರ್ಷಕ್ಕಿಂತ ಹೆಚ್ಚಿನ ಅವಧಿಯವರೆಗಿನದಾಗಿದ್ದರೆ, ಅದನ್ನು ಆಯ್ಕೆ ಸಮಿತಿಯ ಸಲಹೆಯೊಂದಿಗೆ, ಪೂರ್ವೋಕ್ತ ಉಪಬಂಧಗಳಲ್ಲಿ ಸೂಚಿಸಿರುವ ಪ್ರಕ್ರಿಯೆಗನುಸಾರವಾಗಿ ಭರ್ತಿ ಮಾಡತಕ್ಕದ್ದು:

ಪರಂತು, ಕೆಲಸದ ಹಿತಾಸಕ್ತಿಯಲ್ಲಿ ಖಾಲಿ ಸ್ಥಾನವನ್ನು ಭರ್ತಿ ಮಾಡುವುದು ಅಗತ್ಯವೆಂದು ಕುಲಪತಿಯವರಿಗೆ ಮನದಟ್ಟಾದರೆ, (2)ನೇ ಉಪ-ಖಂಡದಲ್ಲಿ ಉಲ್ಲಿಖಿತವಾದ ಸ್ಥಳೀಯ ಆಯ್ಕೆ ಸಮಿತಿಯು ಆರು ತಿಂಗಳಿಗೆ ಮೀರದ ಅವಧಿಗೆ, ತಾತ್ಕಾಲಿಕ ಆಧಾರದ ಮೇಲೆ ನೇಮಕಾತಿ ಮಾಡಬಹುದು.

(ii) ತಾತ್ಕಾಲಿಕ ಖಾಲಿ ಸ್ಥಾನವು ಒಂದು ವರ್ಷಕ್ಕಿಂತ ಕಡಿಮೆ ಅವಧಿಯದಾಗಿದ್ದರೆ ಅಂಥ ಖಾಲಿಸ್ಥಾನಕ್ಕೆ ನೇಮಕಾತಿಯನ್ನು, ಸಂಬಂಧಪಟ್ಟ ಫ್ಯಾಕಲ್ಟಿಯ ಡೀನ್, ಇಲಾಖಾ ಮುಖ್ಯಸ್ಥ ಹಾಗೂ ಕುಲಪತಿಯವರಿಂದ ನಾಮನಿರ್ದೇಶಿತರಾದ ವ್ಯಕ್ತಿ ಇವರನ್ನು ಒಳಗೊಂಡಿರುವ ಸ್ಥಳೀಯ ಆಯ್ಕೆ ಸಮಿತಿಯ ಶಿಫಾರಸ್ಸಿನ ಮೇಲೆ ಮಾಡತಕ್ಕದ್ದು:

ಪರಂತು, ಒಬ್ಬನೇ ವ್ಯಕ್ತಿಯು ಡೀನ್ ಮತ್ತು ಇಲಾಖಾ ಮುಖ್ಯಸ್ಥರ ಪದವನ್ನು ಧಾರಣ ಮಾಡಿದ್ದರೆ ಆಯ್ಕೆ ಸಮಿತಿಯು ಕುಲಪತಿಯವರಿಂದ ನಾಮನಿರ್ದೇಶಿತರಾದ ಇಬ್ಬರು ವ್ಯಕ್ತಿಗಳನ್ನು ಒಳಗೊಂಡಿರಬಹುದು:

ಮತ್ತು ಪರಂತು, ಅಧ್ಯಾಪಕ ಹುದ್ದೆಗಳಲ್ಲಿ ಮರಣ ಅಥವಾ ಇತರ ಯಾವುದೇ ಕಾರಣಕ್ಕಾಗಿ ಇದ್ದಕ್ಕಿದ್ದಂತೆ ಉಂಟಾದ ಆಕಸ್ಮಿಕ ಖಾಲಿ ಸ್ಥಾನದ ಸಂದರ್ಭದಲ್ಲಿ, ಡೀನರು, ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರೊಂದಿಗೆ ಸಮಾಲೋಚಿಸಿ, ಒಂದು ತಿಂಗಳಿಗಾಗಿ ತಾತ್ಕಾಲಿಕ ನೇಮಕಾತಿಯನ್ನು ಮಾಡಿ, ಅಂಥ ನೇಮಕಾತಿಯ ಬಗ್ಗೆ ಕುಲಪತಿಯವರಿಗೆ ಮತ್ತು ಕುಲಸಚಿವರಿಗೆ ವರದಿ ಮಾಡತಕ್ಕದ್ದು.

(iii) ತಾತ್ಕಾಲಿಕವಾಗಿ ನೇಮಕಗೊಂಡ ಯಾವೊಬ್ಬ ಬೋಧಕನು ತಾನು ಈ ಶಾಸನಗಳ ಅಡಿಯಲ್ಲಿ ನೇಮಕಾತಿಗಾಗಿ ಇರುವ ನಿಯತ ಆಯ್ಕೆ ಸಮಿತಿಯಿಂದ ಶಿಫಾರಸ್ಸು ಪಡೆದಿರದಿದ್ದರೆ, ಸಂದರ್ಭಾನುಸಾರ, ತಾತ್ಕಾಲಿಕ ಅಥವಾ ಖಾಯಂ ನೇಮಕಾತಿಗಾಗಿ ತದನಂತರ ಸ್ಥಳೀಯ ಆಯ್ಕೆ ಸಮಿತಿ ಅಥವಾ ಕ್ರಮಬದ್ಧ ಆಯ್ಕೆ ಸಮಿತಿಯಿಂದ ಆಯ್ಕೆಗೊಂಡ ಹೊರತು, ಅಂಥ ತಾತ್ಕಾಲಿಕ ಉದ್ಯೋಗದಲ್ಲಿ ಮುಂದುವರಿಯತಕ್ಕದ್ದಲ್ಲ.

## ಅಧ್ಯಾಯ – VIII

## ವಿಶ್ವವಿದ್ಯಾಲಯದ ನಿಧಿಗಳು

**51. ಸಾಮಾನ್ಯ ನಿಧಿಗಳು.**– ವಿಶ್ವವಿದ್ಯಾಲಯವು ಒಂದು ಸಾಮಾನ್ಯ ನಿಧಿಯನ್ನು ಹೊಂದಿರತಕ್ಕದ್ದು, ಅದಕ್ಕೆ,-

(ಎ) ಶುಲ್ಕಗಳು, ಅನುದಾನಗಳು, ದಾನಗಳು ಮತ್ತು ಕೊಡುಗೆಗಳು, ಯಾವುವಾದರೂ ಇದ್ದರೆ, ಅವುಗಳಿಂದ ಬರುವ ವರಮಾನ;

(ಬಿ) ಕೇಂದ್ರ ಸರ್ಕಾರದಿಂದ ಮಾಡಲಾದ ಯಾವುದೇ ವಂತಿಗೆ ಅಥವಾ ಅನುದಾನಗಳು, ಯಾವುವಾದರೂ ಇದ್ದರೆ, ಅವು ಅಥವಾ ಯಾವುದೇ ರಾಜ್ಯ ಸರ್ಕಾರ, ವಿಶ್ವವಿದ್ಯಾಲಯ ಅನುದಾನದ ಆಯೋಗ ಅಥವಾ ಅಂಥದೇ ಪ್ರಾಧಿಕಾರ, ಯಾವುದೇ ಸ್ಥಳೀಯ ಪ್ರಾಧಿಕಾರ ಅಥವಾ ಸರ್ಕಾರದ ಒಡೆತನದಲ್ಲಿರುವ ಅಥವಾ ಅದರ ನಿಯಂತ್ರಣದಲ್ಲಿರುವ ಯಾವುದೇ ನಿಗಮದಿಂದ ಮಾಡಲಾದ ಯಾವುದೇ ವಂತಿಗೆ ಅಥವಾ ಅನುದಾನ; ಮತ್ತು

(ಸಿ) ದತ್ತಿಗಳು ಮತ್ತು ಇತರ ಸ್ವೀಕೃತಿಗಳು,

– ಜಮೆಯಾಗತಕ್ಕದ್ದು.

**52. ಇತರ ನಿಧಿಗಳು.**– ವಿಶ್ವವಿದ್ಯಾಲಯವು, ಶಾಸನಗಳ ಮೂಲಕ ನಿಯಮಿಸಬಹುದಾದಂಥ ಇತರ ನಿಧಿಗಳನ್ನು ಹೊಂದಿರಬಹುದು.

**53. ಸಾಲ ಪಡೆದುಕೊಳ್ಳುವ ಅಧಿಕಾರ.**– ವಿಶ್ವವಿದ್ಯಾಲಯವು, ಶಾಸನಗಳ ಮೂಲಕ ನಿಯಮಿಸಬಹುದಾದ ಯಾವುವೇ ಉದ್ದೇಶಗಳಿಗಾಗಿ, ಒಂದು ಬ್ಯಾಂಕು ಅಥವಾ ನಿಗಮದಿಂದ ಹಣವನ್ನು ಸಾಲ ಪಡೆದುಕೊಳ್ಳಬಹುದು. ಸಾಲ ಪಡೆದುಕೊಂಡ ಹಣದ ಒಟ್ಟು ಮೊಬಲಗು ಐದು ಲಕ್ಷ ರೂಪಾಯಿಗಳನ್ನು ಮೀರುವಲ್ಲಿ, ಅಂಥ ಸಾಲಕ್ಕೆ ಸರ್ಕಾರದ ಪೂರ್ವ ಅನುಮೋದನೆಯನ್ನು ಪಡೆದುಕೊಳ್ಳತಕ್ಕದ್ದು.

**54. ನಿಧಿಗಳ ನಿರ್ವಹಣೆ.**– ವಿಶ್ವವಿದ್ಯಾಲಯದ ಎಲ್ಲ ನಿಧಿಗಳನ್ನು ಶಾಸನಗಳ ಮೂಲಕ ನಿಯಮಿಸಬಹುದಾದಂಥ ವಿಧಾನದಲ್ಲಿ ನಿರ್ವಹಿಸತಕ್ಕದ್ದು.

**55. ಲೆಕ್ಕ ಪರಿಶೋಧನೆಗೆ ನಿರ್ದೇಶಿಸಲು ಸರ್ಕಾರದ ಅಧಿಕಾರ.**– ಸರ್ಕಾರವು ಅವಶ್ಯಕವೆಂದು ಭಾವಿಸಿದಾಗಲೆಲ್ಲಾ ತಾನು ನಿರ್ದೇಶಿಸಬಹುದಾದಂಥ ಲೆಕ್ಕ ಪರಿಶೋಧಕರಿಂದ ವಿಶ್ವವಿದ್ಯಾಲಯದ ಲೆಕ್ಕಪತ್ರಗಳ ಲೆಕ್ಕಪರಿಶೋಧನೆ ನಡೆಸುವಂತೆ ಆದೇಶಿಸುವ ಅಧಿಕಾರವನ್ನು ಹೊಂದಿರತಕ್ಕದ್ದು.

**56. ಹಣಕಾಸಿನ ಅಂದಾಜುಗಳು.-** (1) ಕುಲಪತಿಯವರು, ನಿಯಮಿಸಬಹುದಾದಂಥ ದಿನಾಂಕದಂದು ಅಥವಾ ಅದಕ್ಕಿಂತ ಮೊದಲು, ಮುಂಬರುವ ವರ್ಷಕ್ಕಾಗಿ ವಿಶ್ವವಿದ್ಯಾಲಯದ ಹಣಕಾಸು ಅಂದಾಜುಗಳನ್ನು ಸಿದ್ಧಪಡಿಸುವಂತೆ ಮತ್ತು ಅದನ್ನು ಅನುಮೋದನೆಗಾಗಿ ಪ್ರಶಾಸನ ಸಭೆಯ ಮುಂದೆ ಇಡುವಂತೆ ಮಾಡತಕ್ಕದ್ದು.

(2) ಪ್ರಶಾಸನ ಸಭೆಯು ತಾನು ಸೂಕ್ತವೆಂದು ಭಾವಿಸುವಂಥ ಮಾರ್ಪಾಟುಗಳನ್ನು ಮಾಡಿ ಹಣಕಾಸು ಅಂದಾಜುಗಳನ್ನು ಅನುಮೋದಿಸಬಹುದು ಮತ್ತು ಪ್ರಶಾಸನ ಸಭೆ ಅನುಮೋದಿಸಿದ ಹಣಕಾಸು ಅಂದಾಜುಗಳಿಗನುಸಾರವಾಗಿ ಹೊರತು ಯಾವ ವೆಚ್ಚವನ್ನೂ ಮಾಡತಕ್ಕದ್ದಲ್ಲ.

**57. ವಾರ್ಷಿಕ ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.-** (1) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕ-ಪತ್ರಗಳನ್ನು ಪ್ರಶಿಕ್ಷಣ ಪರಿಷತ್ತಿನ ನಿರ್ದೇಶನದ ಮೇರೆಗೆ ಸಿದ್ಧಪಡಿಸತಕ್ಕದ್ದು.

(2) ಹಾಗೆ ಸಿದ್ಧಪಡಿಸಿದ ವಾರ್ಷಿಕ ಲೆಕ್ಕಪತ್ರಗಳನ್ನು ಪ್ರಶಾಸನ ಸಭೆಯು ತನ್ನ ಮುಂದಿನ ನಿಕಟಸಭೆಯಲ್ಲಿ ಪರಿಗಣಿಸತಕ್ಕದ್ದು. ಪ್ರಶಾಸನ ಸಭೆಯು ಅದರ ಸಂಬಂಧದಲ್ಲಿ ಒಂದು ನಿರ್ಣಯವನ್ನು ಹೊರಡಿಸಬಹುದು ಮತ್ತು ಅದನ್ನು ಪ್ರಶಿಕ್ಷಣ ಪರಿಷತ್ತಿಗೆ ತಿಳಿಸಬಹುದು. ಪ್ರಶಿಕ್ಷಣ ಪರಿಷತ್ತು ಪ್ರಶಾಸನ ಸಭೆಯು ಮಾಡಿದ ಸಲಹೆಗಳನ್ನು ಪರಿಗಣಿಸತಕ್ಕದ್ದು ಮತ್ತು ತಾನು ಸೂಕ್ತವೆಂದು ಭಾವಿಸುವಂತ: ಕ್ರಮವನ್ನು ಅದರ ಬಗ್ಗೆ ತೆಗೆದುಕೊಳ್ಳತಕ್ಕದ್ದು ಮತ್ತು ತನ್ನ ಮುಂದಿನ ಸಭೆಯಲ್ಲಿ ತಾನು ತೆಗೆದುಕೊಂಡ ಕ್ರಮವನ್ನು ಅಥವಾ ಕ್ರಮ ಕೈಗೊಳ್ಳುವುದಕ್ಕೆ ಕಾರಣಗಳನ್ನು ಪ್ರಶಾಸನ ಸಭೆಗೆ ತಿಳಿಸತಕ್ಕದ್ದು.

(3) ವಿಶ್ವವಿದ್ಯಾಲಯದ ಲೆಕ್ಕಪತ್ರಗಳನ್ನು ರಾಜ್ಯ ಲೆಕ್ಕಪತ್ರಗಳ ಇಲಾಖೆಯ ನಿಯಂತ್ರಕರು ವರ್ಷಕ್ಕೊಮ್ಮೆ ಏಪ್ರಿಲ್ ತಿಂಗಳಲ್ಲಿ ಲೆಕ್ಕಪರಿಶೋಧನೆ ಮಾಡತಕ್ಕದ್ದು.

(4) ಹಾಗೆ ಲೆಕ್ಕಪರಿಶೋಧನೆ ಮಾಡಿದ ಲೆಕ್ಕಪತ್ರಗಳನ್ನು ಪ್ರಶಾಸನ ಸಭೆಯಮುಂದೆ ಇರಿಸತಕ್ಕದ್ದು ಮತ್ತು ತದನಂತರ ಅದನ್ನು ಪ್ರತಿ ವರ್ಷದ ಸೆಪ್ಟೆಂಬರ್ ಅಂತ್ಯಕ್ಕೆ ಮುಂಚೆ ತನ್ನ ಟೀಕೆಟಿಪ್ಪಣೆಗಳೊಡನೆ ರಾಜ್ಯ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು. ರಾಜ್ಯ ಸರ್ಕಾರವು ಅದನ್ನು ರಾಜ್ಯ ವಿಧಾನ ಮಂಡಳಿದ ಮುಂದೆ ಅದರ ನಂತರದ ನಿಕಟ ಅಧಿವೇಶನದಲ್ಲಿ ಇರಿಸತಕ್ಕದ್ದು.

**58. ವಾರ್ಷಿಕ ವರದಿ.-** (1) ಪ್ರಶಿಕ್ಷಣ ಪರಿಷತ್ತು ಪ್ರತಿಯೊಂದು ಹಣಕಾಸು ವರ್ಷಕ್ಕೆ, ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ವಿವರಗಳನ್ನು ಒಳಗೊಂಡ ವಾರ್ಷಿಕ ವರದಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ಶಾಸನಗಳ ಮೂಲಕ ನಿಯಮಿಸಬಹುದಾದಂಥ ದಿನಾಂಕಗಳಂದು ಅಥವಾ ಅದಕ್ಕೆ ಮೊದಲು ಪ್ರಶಾಸನ ಸಭೆಗೆ ಸಲ್ಲಿಸತಕ್ಕದ್ದು. ಪ್ರಶಾಸನ ಸಭೆಯು ಅವುಗಳ ಮೇಲೆ ನಿರ್ಣಯಗಳನ್ನು ಹೊರಡಿಸಬಹುದು ಮತ್ತು ಪ್ರಶಿಕ್ಷಣ ಪರಿಷತ್ತು ಅದಕ್ಕನುಸಾರವಾಗಿ ಕ್ರಮಕೈಗೊಳ್ಳತಕ್ಕದ್ದು. ಕೈಗೊಳ್ಳಲಾದ ಕ್ರಮವನ್ನು ಪ್ರಶಾಸನ ಸಭೆಗೆ ತಿಳಿಸತಕ್ಕದ್ದು.

(2) ವಾರ್ಷಿಕ ವರದಿಯ ಪ್ರತಿಗಳನ್ನು ಹಾಗೂ ಅವುಗಳ ಮೇಲಿನ ಪ್ರಶಾಸನ ಸಭೆಯ ನಿರ್ಣಯಗಳನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಅವುಗಳನ್ನು ಮಂಡಿಸತಕ್ಕದ್ದು.

## ಅಧ್ಯಾಯ – IX

## ಸೇವಾ ಷರತ್ತುಗಳು

**59. ನಿವೃತ್ತಿ ವೇತನ, ಉಪದಾನ ಮೊದಲಾದವುಗಳು.-** (1) ವಿಶ್ವವಿದ್ಯಾಲಯವು ವಿಶ್ವವಿದ್ಯಾಲಯದಿಂದ ನಿಯೋಜಿತರಾದ ಅಧಿಕಾರಿಗಳು, ಅಧ್ಯಾಪಕರು ಮತ್ತು ಇತರ ವ್ಯಕ್ತಿಗಳ ಪ್ರಯೋಜನಕ್ಕಾಗಿ ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಷರತ್ತುಗಳಿಗೊಳಪಟ್ಟು ತಾನು ಉಚಿತವೆಂದು ಭಾವಿಸುವಂಥ ನಿವೃತ್ತಿ ವೇತನ, ಉಪದಾನ, ವಿಮೆ ಮತ್ತು ಭವಿಷ್ಯ ನಿಧಿಗಳನ್ನು ಪ್ರಾರಂಭಿಸತಕ್ಕದ್ದು.

(2) ವಿಶ್ವವಿದ್ಯಾಲಯವು, (1)ನೇ ಉಪ-ಪ್ರಕರಣದ ಅಡಿಯಲ್ಲಿ ಭವಿಷ್ಯ ನಿಧಿಯನ್ನು ಪ್ರಾರಂಭಿಸಿರುವಲ್ಲಿ, ಸರ್ಕಾರವು, ಭವಿಷ್ಯ ನಿಧಿಗಳ ಅಧಿನಿಯಮ, 1925 (1925ರ ಕೇಂದ್ರಾಧಿನಿಯಮ 19)ರ ಉಪಬಂಧಗಳು, ವಿಶ್ವವಿದ್ಯಾಲಯವು ಒಂದು ಸ್ಥಳೀಯ ಪ್ರಾಧಿಕಾರವೆಂಬಂತೆ ಮತ್ತು ನಿಧಿಯು ಸರ್ಕಾರಿ ಭವಿಷ್ಯ ನಿಧಿಯೆಂಬಂತೆ ಅಂಥ ನಿಧಿಗೆ ಅನ್ವಯವಾಗತಕ್ಕದ್ದೆಂದು ಘೋಷಿಸಬಹುದು.

(3) ವಿಶ್ವವಿದ್ಯಾಲಯವು, ಹಣಕಾಸು ಸಮಿತಿಯೊಂದಿಗೆ ಸಮಾಲೋಚಿಸಿ ತಾನು ನಿರ್ಧರಿಸಬಹುದಾದಂಥ ರೀತಿಯಲ್ಲಿ, ಭವಿಷ್ಯ ನಿಧಿಯ ಮೊಬಲಗನ್ನು ತೊಡಗಿಸಬಹುದು.

**60. ನೇಮಕಾತಿ ವಿಧಾನ ಮತ್ತು ಸೇವಾ ಷರತ್ತುಗಳು.-** ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ವಿಶ್ವವಿದ್ಯಾಲಯದಲ್ಲಿ ನಿಯೋಜಿತರಾದ ಅಧಿಕಾರಿಗಳು, ಅಧ್ಯಾಪಕರು ಮತ್ತು ಇತರ ವ್ಯಕ್ತಿಗಳ ನೇಮಕಾತಿ, ಆಯ್ಕೆಯ ಕಾರ್ಯವಿಧಾನ, ವೇತನ ಮತ್ತು ಭತ್ಯಗಳು ಮತ್ತು ಇತರ ಸೇವಾ ಷರತ್ತುಗಳು ನಿಯಮಿಸಬಹುದಾದಂತೆ ಇರತಕ್ಕದ್ದು.

**ವಿವರಣೆ.–** ಈ ಪ್ರಕರಣದ ಉದ್ದೇಶಗಳಿಗಾಗಿ, "ಅಧಿಕಾರಿಗಳು ಎಂಬ ಪದವು ಕುಲಾಧಿಪತಿ ಮತ್ತು ಸಹ ಕುಲಾಧಿಪತಿಯವರನ್ನು ಒಳಗೊಳ್ಳತಕ್ಕದ್ದಲ್ಲ.

**61. ವಿಭಾಗದ ಮುಖ್ಯಸ್ಥರ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು.–** (1) ವಿಶ್ವವಿದ್ಯಾಲಯದ ಪ್ರತಿಯೊಂದು ವಿಭಾಗದ, ಪ್ರಾಧ್ಯಾಪಕರಾಗಿರುವ ಒಬ್ಬರನ್ನು ಮುಖ್ಯಸ್ಥರನ್ನಾಗಿ ಹೊಂದಿರತಕ್ಕದ್ದು ಮತ್ತು ಅವರ ಕರ್ತವ್ಯಗಳು ಮತ್ತು ಪ್ರಕಾರ್ಯಗಳು ಮತ್ತು ನೇಮಕಾತಿಯ ನಿಬಂಧನೆಗಳು ಮತ್ತು ಷರತ್ತುಗಳು ನಿಯಮಿಸಬಹುದಾದಂತೆ ಇರತಕ್ಕದ್ದು:

ಪರಂತು, ಯಾವುದೇ ಇಲಾಖೆಯಲ್ಲಿ ಒಬ್ಬರಿಗಿಂತ ಹೆಚ್ಚು ಮಂದಿ ಪ್ರಾಧ್ಯಾಪಕರಿದ್ದರೆ, ಇಲಾಖಾ ಮುಖ್ಯಸ್ಥರನ್ನು ನಿಯಮಿಸಬಹುದಾದ ರೀತಿಯಲ್ಲಿ ನೇಮಕ ಮಾಡತಕ್ಕದ್ದು:

ಮತ್ತು ಪರಂತು, ಇಲಾಖೆಯಲ್ಲಿ ಪ್ರಾಧ್ಯಾಪಕರು ಇಲ್ಲದಿದ್ದಲ್ಲಿ, ಸಹ ಪ್ರಾಧ್ಯಾಪಕರು ಅಥವಾ ಸಹಾಯಕ ಪ್ರಾಧ್ಯಾಪಕರನ್ನು ನಿಯಮಿಸಲಾದ ರೀತಿಯಲ್ಲಿ ಇಲಾಖಾ ಮುಖ್ಯಸ್ಥರನ್ನಾಗಿ ನೇಮಕ ಮಾಡಬಹುದು.

(2) ಪ್ರಾಧ್ಯಾಪಕರು ಅಥವಾ ಸಹ-ಪ್ರಾಧ್ಯಾಪಕರು ಅಥವಾ ಸಹಾಯಕ ಪ್ರಾಧ್ಯಾಪಕರಿಗೆ ಇಲಾಖಾ ಮುಖ್ಯಸ್ಥರ ಹುದ್ದೆಯನ್ನು ನಿರಾಕರಿಸುವ ಅವಕಾಶವಿರತಕ್ಕದ್ದು.

(3) ಇಲಾಖಾ ಮುಖ್ಯಸ್ಥನಾಗಿ ನೇಮಕಗೊಂಡ ವ್ಯಕ್ತಿಯು, ಮೂರು ವರ್ಷಗಳ ಅವಧಿಯವರೆಗೆ ಇಲಾಖಾ ಮುಖ್ಯಸ್ಥನಾಗಿ ಪದಧಾರಣ ಮಾಡತಕ್ಕದ್ದು ಮತ್ತು ಮರು ನೇಮಕಾತಿಗೆ ಅರ್ಹರಾಗಿರತಕ್ಕದ್ದು.

(4) ಇಲಾಖಾ ಮುಖ್ಯಸ್ಥನು ತನ್ನ ಪದಾವಧಿಯ ಯಾವುದೇ ಕಾಲದಲ್ಲಿ ತನ್ನ ಪದಕ್ಕೆ ರಾಜೀನಾಮೆ ನೀಡಬಹುದು.

(5) ಇಲಾಖಾ ಮುಖ್ಯಸ್ಥನು ನಿಯಮಿಸಬಹುದಾದ ಅಂಥ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

**62. ಫ್ಯಾಕಲ್ಟಿಗಳ ಡೀನರ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು.–** ಫ್ಯಾಕಲ್ಟಿಯ ಪ್ರತಿಯೊಬ್ಬ ಡೀನರು ಮೊದಲನೇ ಶಾಸನಗಳಲ್ಲಿ ನಿರ್ದಿಷ್ಟಪಡಿಸಲಾದಂಥ ರೀತಿಯಲ್ಲಿ ನೇಮಿತರಾಗತಕ್ಕದ್ದು ಮತ್ತು ಅವರು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**63. ಅಧ್ಯಾಪಕರ ಕರ್ತವ್ಯಗಳು.–** (1) ವಿಶ್ವವಿದ್ಯಾಲಯದ ಮಾನ್ಯತೆ ಪಡೆದ ವಿದ್ಯಾ ಸಂಸ್ಥೆಯ ಪ್ರತಿಯೊಬ್ಬ ಅಧ್ಯಾಪಕನು, ಕಾಲಕಾಲಕ್ಕೆ ವಿಶ್ವವಿದ್ಯಾಲಯದಿಂದ ಅವನಿಗೆ ವಹಿಸಲಾದ ಬೋಧನೆ, ಸಂಶೋಧನೆ, ಪರೀಕ್ಷೆ ಅಥವಾ ಶೈಕ್ಷಣಿಕ ಕಾರ್ಯಗಳಿಗೆ ಸಂಬಂಧಪಟ್ಟ ಕೆಲಸಗಳನ್ನು ನಿರ್ವಹಿಸತಕ್ಕದ್ದು.

(2) (1)ನೇ ಉಪಪ್ರಕರಣದ ಉದ್ದೇಶಗಳಿಗಾಗಿ, ವಿಶ್ವವಿದ್ಯಾಲಯದ ಮತ್ತು ವಿಶ್ವವಿದ್ಯಾಲಯಕ್ಕೆ ಸಂಯೋಜನೆಗೊಂಡ ಕಾಲೇಜಿನ ಸೇವೆಯಲ್ಲಿರುವ ಬೋಧಕ ಮತ್ತು ಬೋಧಕೇತರ ನೌಕರರನ್ನು ವಿಶ್ವವಿದ್ಯಾಲಯವು ಆಡಳಿತಾತ್ಮಕವಾಗಿ ನಿಯಂತ್ರಿಸತಕ್ಕದ್ದು ಮತ್ತು ಅವರು ಕಾಲಕಾಲಕ್ಕೆ ವಿಶ್ವವಿದ್ಯಾಲಯವು ನೀಡಿದ ಸೂಚನೆಗಳು ಅಥವಾ ಆದೇಶಗಳನ್ನು ಪಾಲಿಸತಕ್ಕದ್ದು.

**64. ಪರೀಕ್ಷಾ ಕಾರ್ಯವನ್ನು ನೆರವೇರಿಸುವ ಹೊಣೆ.–** (1) ಯಾವ ವ್ಯಕ್ತಿಗೆ ಪ್ರಶ್ನೆ ಪತ್ರಿಕೆಯನ್ನು ಸಿದ್ಧಪಡಿಸುವುದು, ಪರಿವೀಕ್ಷಣೆ, ಮೇಲ್ವಿಚಾರಣೆ, ಮೌಲ್ಯಮಾಪನ, ಪ್ರಾಯೋಗಿಕ ಪರೀಕ್ಷೆಗಳನ್ನು ನಡೆಸುವುದು, ಪ್ರಶ್ನೆ ಪತ್ರಿಕೆಗಳ ಮತ್ತು ಉತ್ತರ ಪತ್ರಿಕೆಗಳ ಮುದ್ರಣ ಮತ್ತು ಅಂಕಪಟ್ಟಿಯನ್ನು ಸಿದ್ಧಪಡಿಸುವುದೇ ಮುಂತಾದ ಪರೀಕ್ಷೆಗೆ ಸಂಬಂಧಿಸಿದ ಕಾರ್ಯವನ್ನು ಮತ್ತು ಅದಕ್ಕೆ ಪ್ರಾಸಂಗಿಕವಾದ ಮತ್ತು ಅದಕ್ಕೆ ಸಂಬಂಧಿಸಿದಂಥ ಎಲ್ಲ ಚಟುವಟಿಕೆಗಳನ್ನು ವಹಿಸಲಾಗಿದೆಯೋ ಆ ವ್ಯಕ್ತಿಯು, ಅಂಥ ಕರ್ತವ್ಯಗಳನ್ನು ಶೈಕ್ಷಣಿಕ ಗುಣಮಟ್ಟಗಳನ್ನು ಸಾಧಿಸುವುದಕ್ಕಾಗಿ ವಿವೇಕದಿಂದ ಮತ್ತು ಅತ್ಯಂತ ಪ್ರಾಮಾಣಿಕತೆಯಿಂದ ನಿರ್ವಹಿಸತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಪರೀಕ್ಷಾ ಕಾರ್ಯವನ್ನು ಹಂಚಿಕೆ ಮಾಡಲಾಗಿರುವ ಯಾವೊಬ್ಬ ವ್ಯಕ್ತಿಯು, ಕರ್ತವ್ಯಗಳ ಉಲ್ಲಂಘನೆಯ ತಪ್ಪಿತಸ್ಥನೆಂದು ಕಂಡು ಬಂದರೆ ಅಥವಾ ದುರ್ನಡತೆಯಲ್ಲಿ ಪಾಲ್ಗೊಂಡಿದ್ದರೆ, ಅಪರಾಧ ನಿರ್ಣಯವಾದ ತರುವಾಯ, ಮೂರು ವರ್ಷಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಎರಡು ಸಾವಿರ ರೂಪಾಯಿಗಳ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

(3) ಕುಲಸಚಿವರು (ಮೌಲ್ಯಮಾಪನ) ನೀಡಿದ ದೂರಿನ ಮೇಲಲ್ಲದೆ ಈ ಪ್ರಕರಣದ ಅಡಿಯಲ್ಲಿ, ದಂಡನೀಯವಾದ ಒಂದು ಅಪರಾಧದ ಅಥವಾ ಅಂಥ ಅಪರಾಧದ ದುಷ್ಪ್ರೇರಣೆಯ ಸಂಜ್ಞಾನವನ್ನು ಯಾವುದೇ ನ್ಯಾಯಾಲಯವು ತೆಗೆದುಕೊಳ್ಳತಕ್ಕದ್ದಲ್ಲ.

**65. ಅಪರಾಧದ ದುಷ್ಪ್ರೇರಣೆಗಾಗಿ ಶಿಕ್ಷೆ.–** 64ನೇ ಪ್ರಕರಣದ ಅಡಿಯಲ್ಲಿ ದಂಡನೀಯವಾದ ಒಂದು ಅಪರಾಧವನ್ನು ಪ್ರಚೋದಿಸುವ ಅಥವಾ ದುಷ್ಪ್ರೇರಿಸುವ ಯಾವೊಬ್ಬ ವ್ಯಕ್ತಿಯು, ಅಪರಾಧ ನಿರ್ಣಯವಾದ ತರುವಾಯ, ಆ ಪ್ರಕರಣದಲ್ಲಿ ಅದಕ್ಕಾಗಿ ಉಪಬಂಧಿಸಲಾದ ಶಿಕ್ಷೆಯಿಂದಲೇ ದಂಡಿತನಾಗತಕ್ಕದ್ದು.

## ಅಧ್ಯಾಯ – X

### ಸಂಕೀರ್ಣ ವಿಷಯಗಳು

**66. ಅಧಿನಿಯಮವು ಇತರ ಅಧಿನಿಯಮಿತಿಗಳಿಗಿಂತ ಹೆಚ್ಚಿನ ಪ್ರಭಾವವುಳ್ಳದ್ದಾಗಿದೆ.–** (1) ಈ ಅಧಿನಿಯಮ ಮತ್ತು ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಯಾವುವೇ ಶಾಸನಗಳು ಅಥವಾ ನಿಯಮಗಳು ಅಥವಾ ವಿನಿಯಮಗಳು, ವಿಶ್ವವಿದ್ಯಾಲಯ ಪ್ರದೇಶದಲ್ಲಿರುವ ಯಾವುದೇ ಕಾಲೇಜಿಗೆ ಸಂಬಂಧಿಸಿದಂತೆ ಭಾರತ ಸಂವಿಧಾನದ ಏಳನೇ ಅನುಸೂಚಿಯ IIನೇ ಪಟ್ಟಿಯಲ್ಲಿ ನಿರೂಪಿಸಲಾದ ವಿಷಯಗಳ ಸಂಬಂಧದಲ್ಲಿ ಇತರ ಯಾವುದೇ ಅಧಿನಿಯಮಿತಿಯಲ್ಲಿ ಅದಕ್ಕೆ ಅಸಂಗತವಾಗಿ ಏನೇ ಇದ್ದರೂ, ಅವು ಪರಿಣಾಮಕಾರಿಯಾಗಿರತಕ್ಕದ್ದು.

**67. ಮಾಹಿತಿ ಪಡೆಯಲು ಅಧಿಕಾರ:–** ಈ ಅಧಿನಿಯಮದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಸರ್ಕಾರವು ಲಿಖಿತ ಆದೇಶದ ಮೂಲಕ ವಿಶ್ವವಿದ್ಯಾಲಯದ ವ್ಯವಹಾರಗಳಿಗೆ ಸಂಬಂಧಪಟ್ಟ ಯಾವುದೇ ವಿಷಯದ ಬಗ್ಗೆ ವಿಶ್ವವಿದ್ಯಾಲಯದಿಂದ ಯಾವುದೇ ಮಾಹಿತಿಯನ್ನು ಕೋರಬಹುದು ಮತ್ತು ವಿಶ್ವವಿದ್ಯಾಲಯವು, ಅಂಥ ಮಾಹಿತಿಯು ತನ್ನಲ್ಲಿ ಲಭ್ಯವಿದ್ದರೆ ಅಂಥ ಮಾಹಿತಿಯನ್ನು ಸೂಕ್ತ ಅವಧಿಯೊಳಗೆ ಸರ್ಕಾರಕ್ಕೆ ಒದಗಿಸತಕ್ಕದ್ದು:

ಪರಂತು ವಿಶ್ವವಿದ್ಯಾಲಯವು ರಹಸ್ಯ ಎಂದು ಪರಿಗಣಿಸುವ ಮಾಹಿತಿಯನ್ನು ಸಹ–ಕುಲಾಧಿಪತಿಯವರಿಗೆ ಸಲ್ಲಿಸಬಹುದು.

**68. ಪ್ರಥಮ ಕುಲಪತಿಯವರ ನೇಮಕ:–** 12 ನೇ ಪ್ರಕರಣದ (1)ನೇ ಉಪ ಪ್ರಕರಣದಲ್ಲಿ ಏನೇ ಇದ್ದರೂ, ಈ ಅಧಿನಿಯಮವು ಜಾರಿಗೆ ಬಂದ ದಿನಾಂಕದಿಂದ ಆರು ತಿಂಗಳುಗಳೊಳಗೆ ಪ್ರಥಮ ಕುಲಪತಿಯವರನ್ನು ನಾಲ್ಕು ವರ್ಷಗಳಿಗೆ ಮೀರದ ಅವಧಿಗಾಗಿ ಮತ್ತು ತಾನು ಸೂಕ್ತವೆಂದು ಭಾವಿಸುವಂಥ ಇತರ ಷರತ್ತುಗಳ ಮೇಲೆ ಸರ್ಕಾರವು ನೇಮಕ ಮಾಡತಕ್ಕದ್ದು:

ಪರಂತು ಪ್ರಥಮ ಕುಲಪತಿಯವರಾಗಿ ನೇಮಕಗೊಂಡ ವ್ಯಕ್ತಿಯು ತನ್ನ ಪದಾವಧಿಯಲ್ಲಿರುವಾಗ ಅರವತ್ತೈದು ವರ್ಷಗಳ ವಯಸ್ಸು ಪೂರ್ಣಗೊಂಡರೆ ಪದದಿಂದ ನಿವೃತ್ತರಾಗತಕ್ಕದ್ದು.

**69. ಪ್ರಥಮ ಕುಲಪತಿಯವರ ತಾತ್ಕಾಲಿಕ ಅಧಿಕಾರಗಳು.–** (1) ಪ್ರಶಾಸನ ಸಭೆ ಮತ್ತು ವಿಶ್ವವಿದ್ಯಾಲಯದ ಇತರ ಪ್ರಾಧಿಕಾರಗಳನ್ನು, ಈ ಅಧಿನಿಯಮವು ಪ್ರಾರಂಭಗೊಂಡ ದಿನಾಂಕದಿಂದ ಆರು ತಿಂಗಳೊಳಗೆ ಅಥವಾ ಅಧಿಸೂಚನೆಯ ಮೂಲಕ ಸರ್ಕಾರವು ನಿರ್ದೇಶಿಸಬಹುದಾದ ಒಂದು ವರ್ಷಕ್ಕೆ ಮೀರದಂಥ ಹೆಚ್ಚಿನ ಅವಧಿಯೊಳಗಾಗಿ ರಚಿಸಲು ವ್ಯವಸ್ಥೆ ಮಾಡುವುದು ಪ್ರಥಮ ಕುಲಪತಿಯವರ ಕರ್ತವ್ಯವಾಗಿರತಕ್ಕದ್ದು.

(2) ಪ್ರಥಮ ಕುಲಪತಿಯವರು, ಸರ್ಕಾರದೊಂದಿಗೆ ಸಮಾಲೋಚಿಸಿ, ವಿಶ್ವವಿದ್ಯಾಲಯದ ಕಾರ್ಯನಿರ್ವಹಣೆಗೆ ಅವಶ್ಯವಾಗಬಹುದಾದಂಥ ವಿನಿಯಮಗಳನ್ನು ರಚಿಸತಕ್ಕದ್ದು.

(3) (1)ನೇ ಉಪಪ್ರಕರಣದಡಿಯಲ್ಲಿ ರಚಿತವಾದ ಪ್ರಾಧಿಕಾರಗಳು, ಸರ್ಕಾರವು ಈ ಸಂಬಂಧದಲ್ಲಿ ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂತಹ ದಿನಾಂಕದಿಂದ ತಮ್ಮ ಪ್ರಕಾರ್ಯಗಳನ್ನು ಪ್ರಾರಂಭಿಸತಕ್ಕದ್ದು.

(4) ತಕ್ಷಣ ಅವಶ್ಯಕವಾಗಬಹುದಾದಂಥ ಕರಡು ಶಾಸನಗಳನ್ನು ರಚಿಸುವುದು ಮತ್ತು ಅನುಮೋದನೆಗಾಗಿ ಅವುಗಳನ್ನು ಪ್ರಶಾಸನ ಸಭೆಗೆ ಸಲ್ಲಿಸುವುದು ಪ್ರಥಮ ಕುಲಪತಿಯವರ ಕರ್ತವ್ಯವಾಗಿರತಕ್ಕದ್ದು ಅಂಥ ಶಾಸನಗಳು ಹಾಗೆ ರಚನೆಯಾದ ತರುವಾಯ ಕರ್ನಾಟಕ ಗೆಜೆಟಿನಲ್ಲಿ ಪ್ರಕಟವಾಗತಕ್ಕದ್ದು.

(5) ಈ ಅಧಿನಿಯಮದಲ್ಲಿ ಮತ್ತು ಶಾಸನಗಳಲ್ಲಿ ಏನೇ ಇದ್ದರೂ ಮತ್ತು ಒಂದು ಪ್ರಾಧಿಕಾರವನ್ನು ಕ್ರಮಬದ್ಧವಾಗಿ ರಚಿಸುವಂಥ ಕಾಲದವರೆಗೆ ಪ್ರಥಮ ಕುಲಪತಿಯವರು ಈ ಅಧಿನಿಯಮ ಮತ್ತು ಶಾಸನಗಳ ಅಡಿಯಲ್ಲಿ ಅಂಥ ಪ್ರಾಧಿಕಾರದ ಯಾವುವೇ ಅಧಿಕಾರಗಳನ್ನು ಚಲಾಯಿಸಲು ಮತ್ತು ಕರ್ತವ್ಯಗಳನ್ನು ನೆರವೇರಿಸಲು ತಾತ್ಕಾಲಿಕವಾಗಿ ಯಾವೊಬ್ಬ ಅಧಿಕಾರಿಯನ್ನು ನೇಮಕ ಮಾಡಬಹುದು ಅಥವಾ ಯಾವುದೇ ಸಮಿತಿಯನ್ನು ರಚಿಸಬಹುದು.

**70. ನೇಮಕದ ವಿಶೇಷ ವಿಧಾನ:–** (1) ಪ್ರಶಾಸನ ಸಭೆಯು, ತಾನು ಸೂಕ್ತವೆಂದು ಭಾವಿಸಬಹುದಾದಂತಹ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ವಿಶ್ವವಿದ್ಯಾಲಯದ ಪ್ರಾಧ್ಯಾಪಕರ ಹುದ್ದೆಯನ್ನು ಒಪ್ಪಿಕೊಳ್ಳಲು ಉನ್ನತ ಶೈಕ್ಷಣಿಕ ಪ್ರಶಸ್ತಿಗಳನ್ನು ಮತ್ತು ವೃತ್ತಿ ಅನುಭವಗಳನ್ನು ಹೊಂದಿರುವ ವ್ಯಕ್ತಿಯನ್ನು ಆಹ್ವಾನಿಸಬಹುದು ಮತ್ತು ಅದಕ್ಕೆ ಒಪ್ಪಿಕೊಳ್ಳುವ ವ್ಯಕ್ತಿಯನ್ನು ಕುಲಾಧಿಪತಿಯವರ ಅನುಮೋದನೆಗೊಳಪಟ್ಟು ಆ ಹುದ್ದೆಗೆ ನೇಮಕ ಮಾಡಬಹುದು.

(2) ಪ್ರಶಾಸನ ಸಭೆಯು ಇತರ ವಿಶ್ವವಿದ್ಯಾಲಯದಲ್ಲಿ ಅಥವಾ ಸಂಸ್ಥೆಯಲ್ಲಿ ಕಾರ್ಯನಿರತ ಅಧ್ಯಾಪಕನನ್ನು ಅಥವಾ ಶೈಕ್ಷಣಿಕ ಸಿಬ್ಬಂದಿ ಸದಸ್ಯನನ್ನು ನಿಯಮಿಸಬಹುದಾದಂತಹ ರೀತಿಯಲ್ಲಿ ಜಂಟಿ ಪ್ರಾಜೆಕ್ಟನ್ನು ಕೈಗೊಳ್ಳುವುದಕ್ಕಾಗಿ ನೇಮಕಮಾಡಬಹುದು.

**71. ಕುಲಪತಿ ಮತ್ತು ಇತರ ಅಧಿಕಾರಿಗಳು ಮುಂತಾದವರು ಸಾರ್ವಜನಿಕ ನೌಕರರಾಗಿರುವುದು:** ವಿಶ್ವವಿದ್ಯಾಲಯದ ಕುಲಪತಿಯವರು, ಕುಲಸಚಿವರು, ಹಣಕಾಸು ಅಧಿಕಾರಿ ಮತ್ತು ಇತರ ನೌಕರರು ಈ ಅಧಿನಿಯಮದ ಯಾವುದೇ ಉಪಬಂಧಗಳಿಗನುಸಾರವಾಗಿ ಕಾರ್ಯನಿರ್ವಹಿಸುತ್ತಿರುವಾಗ ಅಥವಾ ಕಾರ್ಯನಿರ್ವಹಿಸುತ್ತಿರುವರೆಂದು ತಾತ್ಪರ್ಯವಾಗುವಾಗ, ಭಾರತ ದಂಡ ಸಂಹಿತೆಯ (1860 ರ ಕೇಂದ್ರ ಅಧಿನಿಯಮ XL) 21 ನೇ ಪ್ರಕರಣದ ಅರ್ಥ ವ್ಯಾಪ್ತಿಯೊಳಗೆ ಸಾರ್ವಜನಿಕ ನೌಕರರೆಂದು ಭಾವಿಸತಕ್ಕದ್ದು.

**72. ತೊಂದರೆಗಳ ನಿವಾರಣೆಗೆ ಅಧಿಕಾರ.– (1)** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ನಿಕಾಯದ ಮೊದಲ ರಚನೆಯ ಅಥವಾ ಪುನಾರಚನೆಯ ಸಂಬಂಧದಲ್ಲಿ ಅಥವಾ ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವ ಸಂಬಂಧದಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ತೊಂದರೆಯ ನಿವಾರಣೆಗಾಗಿ ಅವಶ್ಯಕ ಹಾಗೂ ಸಮಂಜಸವೆಂದು ತನಗೆ ಕಂಡುಬರುವಂಥ ಹಾಗೂ ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಲ್ಲದ ಉಪಬಂಧಗಳನ್ನು ರಚಿಸಬಹುದು:

ಪರಂತು, 3ನೇ ಪ್ರಕರಣದ ಅಡಿಯಲ್ಲಿ ವಿಶ್ವವಿದ್ಯಾಲಯವು ಸ್ಥಾಪನೆಯಾದ ದಿನಾಂಕದಿಂದ ಐದು ವರ್ಷಗಳು ಮುಕ್ತಾಯವಾದ ತರುವಾಯ ಅಂಥ ಯಾವುದೇ ಅಧಿಸೂಚನೆಯನ್ನು ಹೊರಡಿಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಅಥವಾ ಈ ಅಧಿನಿಯಮದ ಯಾವುದೇ ಉಪಬಂಧದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಅಧಿಸೂಚನೆಯನ್ನು, ಅದನ್ನು ಹೊರಡಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಿರಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಮಂಡಿಸತಕ್ಕದ್ದು ಮತ್ತು ಸದರಿ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ರಾಜ್ಯ ವಿಧಾನಮಂಡಲದ ಯಾವೊಂದು ಸದನವು ಅಧಿಸೂಚನೆಯಲ್ಲಿ ಯಾವುದೇ ಮಾರ್ಪಾಡು ಮಾಡಿದರೆ, ಅಥವಾ ಆ ಅಧಿಸೂಚನೆಯು ಪರಿಣಾಮಕ್ಕೆ ಬರತಕ್ಕದ್ದಲ್ಲವೆಂದು ನಿರ್ದೇಶಿಸಿದರೆ ಹಾಗೂ ಆ ಮಾರ್ಪಾಡು ಅಥವಾ ನಿರ್ದೇಶನವನ್ನು ಇನ್ನೊಂದು ಸದನವು ಒಪ್ಪಿದರೆ ತದನಂತರ ಅಂಥ ಅಧಿಸೂಚನೆಯು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೀತಿಯಲ್ಲಿ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಯಾವುದೇ ಅಂಥ ಮಾರ್ಪಾಡು ಅಥವಾ ರದ್ದತಿಯು ಈ ಅಧಿಸೂಚನೆಯ ಅಡಿಯಲ್ಲಿ ಈ ಮುಂಚೆ ಮಾಡಲಾದ ಯಾವುದೇ ಕಾರ್ಯದ ಮಾನ್ಯತೆಗೆ ಬಾಧೆ ಉಂಟುಮಾಡತಕ್ಕದ್ದಲ್ಲ.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಕರ್ನಾಟಕ ಸಂಸ್ಕೃತ– ವೇದ ವಿಶ್ವವಿದ್ಯಾಲಯವನ್ನು ಈ ಮುಂದಿನ ಉದ್ದೇಶಗಳಿಗಾಗಿ ಸ್ಥಾಪಿಸುವುದು ಅವಶ್ಯಕವಾಗಿದೆ;

i) ಸಂಸ್ಕೃತ ಭಾಷೆಯು ಅತ್ಯಂತ ಶ್ರೀಮಂತ ಭಾಷೆಯಾಗಿರುವುದರಿಂದ ಮತ್ತು ಪರಮಜ್ಞಾನದ ಮೂಲಾಧಾರವಾಗಿರುವುದರಿಂದ ಸಂಸ್ಕೃತ ಭಾಷೆಯಲ್ಲಿ ಮತ್ತು ಸಂಸ್ಕೃತ ಭಾಷೆಗೆ ಸಂಬಂಧಿಸಿದ ಕ್ಷೇತ್ರಗಳು ಮತ್ತು ವಿದ್ಯಾವಿಷಯಗಳಲ್ಲಿ ಸಂಶೋಧನೆಗೆ ಉತ್ತೇಜನ ನೀಡುವುದು;

ii) ಕರ್ನಾಟಕವು ಕನ್ನಡದಲ್ಲಷ್ಟೇ ಅಲ್ಲದೆ ಸಂಸ್ಕೃತದಲ್ಲಿಯೂ ಸಮೃದ್ಧವಾದ ಸಾಹಿತ್ಯ ಪರಂಪರೆಯನ್ನು ಹೊಂದಿರುವುದರಿಂದ ಕರ್ನಾಟಕದಲ್ಲಿ ಈಗಿರುವ ಸಂಸ್ಕೃತ ಸಂಸ್ಥೆಗಳಲ್ಲಿ ನಡೆಯುವ ಸಂಸ್ಕೃತ ಅಧ್ಯಯನವನ್ನು ವ್ಯವಸ್ಥಿತಗೊಳಿಸುವುದು;

iii) ಉಭಯ ಭಾಷೆಗಳನ್ನು ಸಮೃದ್ಧಗೊಳಿಸುವುದಕ್ಕಾಗಿ ಸಂಸ್ಕೃತ ಮತ್ತು ಕನ್ನಡದ ನಡುವೆ ಇರುವ ಸುಸಂಬಂಧವನ್ನು ಬಳಸಿಕೊಳ್ಳುವುದು;

iv) ಸಂಸ್ಕೃತ ಭಾಷಾ ವಿದ್ಯಾಂಸರು ಹಾಗೂ ತತ್ಸಂಬಂಧಿತ ವಿದ್ಯಾವಿಷಯಗಳ ವಿದ್ವಾಂಸರುಗಳ ನಡುವೆ ವಿಚಾರ ಹಾಗೂ ಪಾಂಡಿತ್ಯ ವಿನಿಮಯಕ್ಕೆ ಒಂದು ಸಾಮಾನ್ಯ ವೇದಿಕೆಯನ್ನು ಒದಗಿಸಿಕೊಡುವುದಕ್ಕೆ ಉಪಬಂಧ ಕಲ್ಪಿಸುವುದು.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಕ್ರಮದ ಸಂಬಂಧದಲ್ಲಿ 2008–09 ನೇ ವರ್ಷಕ್ಕಾಗಿ ಐವತ್ತು ಲಕ್ಷ ರೂಪಾಯಿಗಳ ವೆಚ್ಚ ಉಂಟಾಗುವುದೆಂದು ಅಂದಾಜು ಮಾಡಲಾಗಿದೆ.

**ಅರವಿಂದ ಲಿಂಬಾವಳಿ**
ಉನ್ನತ ಶಿಕ್ಷಣ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ

# ಕರ್ನಾಟಕ ವಿಧಾನಸಭೆ
# ಹದಿಮೂರನೇ ವಿಧಾನಸಭೆ
# ಮೂರನೇ ಅಧಿವೇಶನ

## ತಿದ್ದೋಲೆ

ಕರ್ನಾಟಕ ಸಂಸ್ಕೃತ – ವೇದ ವಿಶ್ವವಿದ್ಯಾಲಯ ವಿಧೇಯಕ, 2009ಕ್ಕೆ (2009ರ ವಿಧಾನಸಭೆ ವಿಧೇಯಕ ಸಂಖ್ಯೆ 17)

ಕರ್ನಾಟಕ ಸಂಸ್ಕೃತ – ವೇದ ವಿಶ್ವವಿದ್ಯಾಲಯ ವಿಧೇಯಕ, 2009ಕ್ಕೆ (2009ರ ವಿಧಾನಸಭೆ ವಿಧೇಯಕ ಸಂಖ್ಯೆ 17) ಸಂಬಂಧಿಸಿದಂತೆ ಕನ್ನಡ ಆವೃತ್ತಿಯಲ್ಲಿ 12ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"12. ಕುಲಪತಿ.**– (1) ಕುಲಪತಿಯು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು.

(2) ಸರ್ಕಾರವು ಮೂವರು ವ್ಯಕ್ತಿಗಳನ್ನೊಳಗೊಂಡ ಒಂದು ಶೋಧನಾ ಸಮಿತಿಯನ್ನು ರಚಿಸತಕ್ಕದ್ದು; ಅವರುಗಳ ಪೈಕಿ ಒಬ್ಬರು ಕುಲಾಧಿಪತಿಯವರಿಂದ ನಾಮ ನಿರ್ದೇಶಿತರಾಗಿರತಕ್ಕದ್ದು. ಒಬ್ಬರು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ನಾಮನಿರ್ದೇಶಿತರಾಗಿರತಕ್ಕದ್ದು ಹಾಗೂ ಒಬ್ಬರು ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತರಾಗಿರತಕ್ಕದ್ದು. ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತರಾದವರು ಸಮಿತಿಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸತಕ್ಕದ್ದು. ಉನ್ನತ ಶಿಕ್ಷಣ ಇಲಾಖೆಯ ಪ್ರಭಾರವನ್ನು ಹೊಂದಿರುವ ಸರ್ಕಾರದ ಕಾರ್ಯದರ್ಶಿ ಅಥವಾ ಸರ್ಕಾರದ ಉಪ ಕಾರ್ಯದರ್ಶಿಯ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಅವರ ನಾಮನಿರ್ದೇಶಿತರು ಶೋಧನಾ ಸಮಿತಿಯ ಸಂಚಾಲಕರಾಗಿರತಕ್ಕದ್ದು.

(3) ರಾಜ್ಯಸರ್ಕಾರದ, ವಿಶ್ವವಿದ್ಯಾಲಯದ ಅಥವಾ ವಿಶ್ವವಿದ್ಯಾಲಯಕ್ಕೆ ಸಂಯೋಜಿತವಾದ ಯಾವುದೇ ಕಾಲೇಜಿನ ಅಥವಾ ಸಂಸ್ಥೆಯ ವ್ಯವಹಾರಗಳೊಂದಿಗೆ ಸಂಬಂಧವಿರುವ ಯಾವ ವ್ಯಕ್ತಿಯನ್ನೂ ಶೋಧನಾ ಸಮಿತಿಯ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡತಕ್ಕದ್ದಲ್ಲ.

(4) ಶೋಧನಾ ಸಮಿತಿಯು, ಖ್ಯಾತ ಶಿಕ್ಷಣ ತಜ್ಞರಾದ ಮೂರು ವ್ಯಕ್ತಿಗಳ ಹೆಸರನ್ನುಳ್ಳ ಒಂದು ಪಟ್ಟಿಯನ್ನು ಅಕಾರಾದಿ ಕ್ರಮದಲ್ಲಿ ರಾಜ್ಯಸರ್ಕಾರಕ್ಕೆ ಸಲ್ಲಿಸತಕ್ಕದ್ದು ಮತ್ತು ರಾಜ್ಯ ಸರ್ಕಾರವು ಆ ಪಟ್ಟಿಯನ್ನು ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು, ಅವರು ಅರ್ಹತೆ, ಸಮದರ್ಶಿತ್ವ ಮತ್ತು ಸಾಮಾಜಿಕ ನ್ಯಾಯ ಇವುಗಳನ್ನು ಗಮನದಲ್ಲಿಟ್ಟುಕೊಂಡು ಮತ್ತು ರಾಜ್ಯ ಸರ್ಕಾರದ ಸಹಮತಿಯೊಡನೆ ಆ ಪಟ್ಟಿಯಿಂದ ಒಬ್ಬ ವ್ಯಕ್ತಿಯನ್ನು ಕುಲಪತಿಯಾಗಿ ನೇಮಕ ಮಾಡತಕ್ಕದ್ದು:

ಪರಂತು, ಕುಲಾಧಿಪತಿಯವರು ಅವಶ್ಯವೆಂದು ಪರಿಗಣಿಸಿದರೆ, ರಾಜ್ಯ ಸರ್ಕಾರದ ಸಹಮತಿಯೊಡನೆ ಎರಡನೆಯ ಪಟ್ಟಿಯನ್ನು ತರಿಸಿಕೊಳ್ಳಬಹುದು ಮತ್ತು ಶೋಧನಾ ಸಮಿತಿಯು ಎರಡನೆಯ ಪಟ್ಟಿಯನ್ನು ಸಲ್ಲಿಸತಕ್ಕದ್ದು ಹಾಗೂ ಅದು ಅಂತಿಮವಾಗಿರತಕ್ಕದ್ದು.

(5) ಅರವತ್ತೈದು ವರ್ಷ ವಯಸ್ಸು ಆಗಿರುವ ಯಾವ ವ್ಯಕ್ತಿಯೂ ಕುಲಪತಿಯಾಗಿ ನೇಮಕವಾಗತಕ್ಕದ್ದಲ್ಲ ಅಥವಾ ಅವರು ಆ ಹುದ್ದೆಯಲ್ಲಿ ಇರತಕ್ಕದ್ದಲ್ಲ.

(6) ಕುಲಪತಿಯವರು, ಕುಲಾಧಿಪತಿಯವರ ಇಷ್ಟಪರ್ಯಂತ ಮತ್ತು (5)ನೇ ಉಪಪ್ರಕರಣದ ಉಪಬಂಧಗಳಿಗೊಳಪಟ್ಟು ನಾಲ್ಕು ವರ್ಷಗಳ ಅವಧಿಯವರೆಗೆ ಅಧಿಕಾರ ಸ್ಥಾನವನ್ನು ಹೊಂದಿರತಕ್ಕದ್ದು. ಅವರು ಎರಡನೇ ಅವಧಿಗೆ ಪುನರ್‌ನೇಮಕಕ್ಕೆ ಅರ್ಹರಾಗಿರತಕ್ಕದ್ದಲ್ಲ.

(7) ಕುಲಪತಿಯನ್ನು, ಈ ಅಧಿನಿಯಮದ ಉಪಬಂಧಗಳನ್ನು ಉದ್ದೇಶಪೂರ್ವಕವಾಗಿ ಕೈಬಿಟ್ಟಿದ್ದಾರೆ ಅಥವಾ ನೆರವೇರಿಸಲು ನಿರಾಕರಿಸಿದ್ದಾರೆ ಅಥವಾ ತನ್ನಲ್ಲಿ ನಿಹಿತವಾದ ಅಧಿಕಾರಗಳನ್ನು ದುರುಪಯೋಗ ಪಡಿಸಿಕೊಂಡಿದ್ದಾರೆ ಎಂಬ ಕಾರಣದ ಮೇಲೆ ಮತ್ತು ರಾಜ್ಯ ಸರ್ಕಾರವು, (8)ನೇ ಉಪ ಪ್ರಕರಣದ ಮೇರೆಗೆ ತಾನು ಆದೇಶಿಸಿದ್ದ ವಿಚಾರಣೆಯ ವರದಿಯನ್ನು ಪರಿಗಣಿಸಿದ ನಂತರ ನೀಡಿದ ಸಲಹೆಯ ಮೇಲೆ ಕುಲಾಧಿಪತಿಯವರು ಹೊರಡಿಸಿದ ಆದೇಶದ ಮೂಲಕವಾಗಿ ಹೊರತು, ಅವರ ಅಧಿಕಾರ ಸ್ಥಾನದಿಂದ ತೆಗೆದುಹಾಕತಕ್ಕದ್ದಲ್ಲ.

(8) ಈ ಪ್ರಕರಣದ ಅಡಿಯಲ್ಲಿ ಒಂದು ವಿಚಾರಣೆಯನ್ನು ನಡೆಸುವ ಉದ್ದೇಶಕ್ಕಾಗಿ, ರಾಜ್ಯಸರ್ಕಾರವು, ಉಚ್ಚ ನ್ಯಾಯಾಲಯದ ಅಥವಾ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿರುವ ಅಥವಾ ಆಗಿದ್ದ ವ್ಯಕ್ತಿಯನ್ನು ನೇಮಕ ಮಾಡತಕ್ಕದ್ದು. ವಿಚಾರಣಾ ಪ್ರಾಧಿಕಾರವು, ಕುಲಪತಿಯವರಿಗೆ ತಮ್ಮ ಮನವಿಯನ್ನು ಸಲ್ಲಿಸಲು ಅವಕಾಶ ನೀಡಿದ ನಂತರ ವಿಚಾರಣೆ ನಡೆಸತಕ್ಕದ್ದು ಮತ್ತು ವಿಧಿಸಬೇಕಾದ ಯಾವುದೇ ದಂಡನೆ ಇದ್ದರೆ, ಅದೂ ಒಳಗೊಂಡಂತೆ ಒಂದು ವರದಿಯನ್ನು ರಾಜ್ಯಸರ್ಕಾರಕ್ಕೆ ಸಲ್ಲಿಸತಕ್ಕದ್ದು. ರಾಜ್ಯಸರ್ಕಾರವು, ವರದಿಯನ್ನು ಪರಿಶೀಲಿಸಿದ ನಂತರ, ಕುಲಾಧಿಪತಿಯವರಿಗೆ ಸಲಹೆ ನೀಡತಕ್ಕದ್ದು. ಕುಲಾಧಿಪತಿಯವರು ಸಾಧ್ಯವಾದಷ್ಟುಮಟ್ಟಿಗೆ ಆರು ತಿಂಗಳೊಳಗಾಗಿ ಅಂಥ ಸಲಹೆಗೆ ಅನುಸಾರವಾಗಿ ಕ್ರಮ ಕೈಗೊಳ್ಳತಕ್ಕದ್ದು.

(9) ಕುಲಪತಿಯವರ ಉಪಲಬ್ಧಿಗಳು ಮತ್ತು ಇತರ ಸೇವಾ ಷರತ್ತುಗಳು ಕುಲಾಧಿಪತಿಯವರು ನಿರ್ಧರಿಸಬಹುದಾದಂತೆ ಇರತಕ್ಕದ್ದು ಮತ್ತು ಅವುಗಳನ್ನು ಅವರು ಕುಲಪತಿಯಾಗಿ ನೇಮಕವಾದ ತರುವಾಯ ಅವರಿಗೆ ಅನಾನುಕೂಲವಾಗುವಂತೆ ಬದಲಾಯಿಸತಕ್ಕದ್ದಲ್ಲ. ಕುಲಪತಿಯಾಗಿ ತಮ್ಮ ಅಧಿಕಾರಾವಧಿಯಲ್ಲಿರುವಾಗ ಕುಲಪತಿಯವರು ವಯೋನಿವೃತ್ತಿಯ ಮೇಲೆ ನಿವೃತ್ತರಾಗುವ ಸಂದರ್ಭದಲ್ಲಿ, ಈಗಾಗಲೇ ನಿರ್ಧರಿಸಲಾದ ಅವರ ಸೇವಾ ಷರತ್ತುಗಳು ಮುಂದುವರಿಯತಕ್ಕದ್ದು. ಅವರ ಎಲ್ಲ ನಿವೃತ್ತಿ ಸೌಲಭ್ಯಗಳನ್ನು ತಡೆಹಿಡಿಯತಕ್ಕದ್ದು, ಅವುಗಳನ್ನು ಅವರು ಕುಲಪತಿಯಾಗಿ ಪದವನ್ನು ತ್ಯಜಿಸಿದ ನಂತರ ಬಿಡುಗಡೆ ಮಾಡತಕ್ಕದ್ದು.

(10) ನಿವೃತ್ತಿಹೊಂದಿದ ಒಬ್ಬ ವ್ಯಕ್ತಿಯು ಕುಲಪತಿಯಾಗಿ ನೇಮಕಗೊಂಡರೆ, ಅವರು ಕುಲಪತಿಯಾಗಿ ನೇಮಕಗೊಂಡ ಮೇಲೆ ಅವರ ಉಪಲಬ್ಧಿಗಳೂ ಸೇರಿದಂತೆ ಸೇವಾ ನಿಬಂಧನೆ ಮತ್ತು ಷರತ್ತುಗಳನ್ನು ಕುಲಾಧಿಪತಿಯವರು ನಿರ್ಣಯಿಸತಕ್ಕದ್ದು. ಅವರು ಪಡೆಯುವ ನಿವೃತ್ತಿ ವೇತನದ ಮೊತ್ತವನ್ನು ಮತ್ತು ಭತ್ಯಗಳನ್ನು ಉಪಲಬ್ಧಿಗಳಿಂದ ಕಳೆಯತಕ್ಕದ್ದು.

(11) ರಾಜ್ಯದಲ್ಲಿನ ಒಂದು ವಿಶ್ವವಿದ್ಯಾಲಯದ ಸೇವೆಯಲ್ಲಿರುವ ಒಬ್ಬ ಪ್ರಾಧ್ಯಾಪಕರು ಕುಲಪತಿಯಾಗಿ ನೇಮಕಗೊಂಡರೆ, ಅವರು ಕುಲಪತಿಯಾಗಿರುವ ಅಧಿಕಾರಾವಧಿಯಲ್ಲಿ ಪ್ರಾಧ್ಯಾಪಕರಾಗಿ ಅವರ ಸೇವಾ ನಿಬಂಧನೆ ಮತ್ತು ಷರತ್ತುಗಳನ್ನು ಅವರಿಗೆ ಅನಾನುಕೂಲವಾಗುವಂತೆ ಪರಿಷ್ಕರಿಸತಕ್ಕದಲ್ಲ ಮತ್ತು ಅವರು ತನ್ನ ಹುದ್ದೆಯ ಧಾರಣಾಧಿಕಾರವನ್ನು ಉಳಿಸಿಕೊಳ್ಳತಕ್ಕದ್ದು."

ಸದರಿ ವಿಧೇಯಕದಲ್ಲಿ, 17ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"17. ಹಣಕಾಸು ಅಧಿಕಾರಿ.–** ಹಣಕಾಸು ಅಧಿಕಾರಿಯು, ರಾಜ್ಯ ಲೆಕ್ಕ ಪತ್ರ ಇಲಾಖೆಯ ಸಹಾಯಕ ನಿಯಂತ್ರಕರ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ, ಈ ಬಗ್ಗೆ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ಅವಧಿಗೆ ಸರ್ಕಾರದಿಂದ ನೇಮಕಗೊಂಡ ವಿಶ್ವವಿದ್ಯಾಲಯದ ಒಬ್ಬ ಪೂರ್ಣಕಾಲಿಕ ವೇತನ ಪಡೆಯುವ ಅಧಿಕಾರಿಯಾಗಿರತಕ್ಕದ್ದು ಮತ್ತು ಹಣಕಾಸು ಅಧಿಕಾರಿಯ ಸೇವಾ ಷರತ್ತುಗಳು ಮತ್ತು ನಿಬಂಧನೆಗಳು ಸರ್ಕಾರವು ನಿರ್ದಿಷ್ಟಪಡಿಸಿದಂಥವುಗಳಾಗಿರತಕ್ಕದ್ದು."

**ಎಸ್.ಬಿ.ಪಾಟೀಲ್**
ಕಾರ್ಯದರ್ಶಿ

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**
**THIRD SESSION**

**THE KARNATAKA SAMSKRITA - VEDA VISHWAVIDYALAYA BILL, 2009**
**(L.A. Bill No. 17 of 2009)**

A Bill to provide for the establishment and incorporation of the Karnataka Samskrita and Veda Vishwavidyalaya.

WHEREAS it is expedient that a University be formed exclusively for the development of Sanskrit language which has a hoary and glorious, scientific, literary and cultural tradition and heritage whose contribution in the area of prose, poetry, Drama, Dance, Sculpture, Paintings, Fine arts, Medicines, Philosophy and other allied areas is far more extensive and lasting than has been realised by the Indian Scholars till today;

AND, WHEREAS, it is desirable to establish a University for furthering the advancement of learning and prosecution of research in Sanskrit;

Be it enacted by the Karnataka State Legislature in the Fifty-ninth year of the Republic of India as follows:

**CHAPTER-I**

**PRELIMINARY**

**1. Short title and Commencement.-** (1) This Act may be called the Karnataka Samskrita - Veda Vishwavidyalaya Act, 2009.

(2) It shall come into force on such date as the State Government may, by notification, appoint.

**2. Definitions.-** In this Act, unless the context otherwise requires,-

(a) "appointed date" means the date appointed for the commencement of this Act;

(b) "Constituent college" means the constituent college of the university;

(c) "Government" means the State Government;

(d) "hostel" means a unit of residence for the students of the university maintained or recognised by the university in accordance with the provisions of this Act;

(e) "Prescribed" means prescribed by the statutes;

(f) "Regulations" means Regulations made under this Act;

(g) "Statutes" means the statutes of the university made under this Act;

(h) "teachers" means and includes Professors, emeritus Professors, Readers, Lecturers and other like persons as may be declared by the statutes to be teachers;

(i) "University" means the Karnataka Samskrita - Veda Vishwavidyalaya established under section 3;

(j) "University Grants Commission" means the Commission established under section 4 of the University Grants Commission Act, 1956 (Central Act 3 of 1956);

(k) "University library" means a library maintained by the Vishwavidyalaya whether instituted by it or not;

## CHAPTER-II

## THE UNIVERSITY

**3. Establishment of the University.-** (1) For furthering the advancement of learning and prosecution of research in Sanskrit there shall be established a University by the name called "The Karnataka Samskrita - Veda Vishwavidyalaya".

(2) The University shall be a body corporate and shall have perpetual succession and a common seal and shall sue and be sued by the said name.

(3) No institution affiliated to, or associated with, or maintained by any other University in the State shall be recognised by the University for any purpose, except with the prior approval of the Government and the concerned University.

(4) The headquarters of the University shall be located within the limits of the Bangalore District or in any place within a radius of fifty kilometers around those limits.

(5) The University shall be competent to acquire and hold property, both movable and immoveable, to lease, sell or otherwise transfer any moveable or immovable property which may have become vested in or been acquired by it for the purpose of the University and to enter into contract and to do all other things necessary for the purposes of this Act.

(6) The University shall not lease, sell or otherwise transfer any immoveable property, which may have become vested in or been acquired by it without obtaining the prior approval of the Government.

(7) In all suits and other legal proceedings by or against the University, the pleading shall be signed and verified by, and all processes in such suits and proceedings shall be issued to and be served on the Registrar.

**4. The objectives of the University.-** The University shall have the following objectives, namely:-

(1) to function as a high-level teaching and research organisation in Sanskrit language, Literature and Vedic studies and Shastras such as Vyakarana, Samkhya, Yoga, Nyaya, Vaisheshika, Mimamsa. Vedanta, Bauddha, Jaina, Dharma Shastra and others and also supportive education;

(2) to preserve, foster and promote the traditional system of learning in Vedic, Agamic, and Cognate, Literature, with special emphasis on unique features available in Karnataka;

(3) to highlight the wisdom contained in the Vedic and above mentioned disciplines, and their relevance to the modern world;

(4) to facilitate and regulate advanced study and research in the fields like 1. Geeta based management Science. 2. Yoga based human Psychology, 3. Eco balance related Health related traditional knowledge. 4. Archeology, 5. Ancient Sciences, 6. Agama Shastra, 7. Ayurvedic Sciences, 8. Humanities, 9. Performing Arts, 10. Fine Arts and Communication, 11. Vedadhyana and Vedabhashya Studies and any other Science that has developed in Sanskrit;

(5) to highlight the profoundness of the rational approach and the scientific temper presented in the Vedas and the Shastras in the context of pursuit of knowledge empowerment and realization of higher levels of consciousness;

(6) to consolidate, revive and promote the Bharateeya Jnana Parampara as also to integrate the scientific thoughts contained in the Vedas and Sanskrit Literature particularly in the disciplines of

Agriculture, Astronomy, Biology, Chemistry, Humanities, Information Technology, law and Jurisprudence, Management, Mathematics, Metallurgy, Meteorology, Physics, Social Sciences and Yoga with modern scientific and technological studies;

(7) to bring out awareness about the authentic interpretations of the Vedas;

(8) to create a network of Vedic, Sanskrit Institutions and Educational and Research oriented-Institutes having similar objectives with reciprocal arrangements and facilities for interaction with a view to fostering a synergy of efforts made by all such Universities and Institutions;

(9) to create a body of literature in Modern Indian and foreign languages on the contents of Sanskrit and the Vedas;

(10) to translate/publish all the Vedas, Shastrik works and related texts, Bhashyas and Commentaries in Kannada and other languages;

(11) to build-up audio, audio-visual records of Vedic Chanting and related traditional practices;

(12) to take appropriate measures for promoting inter-disciplinary studies and research in the University and such other related activities congenial at University level;

(13) to collect, preserve, critically edit and publish rare manuscripts and ancient works by establishing an Oriental Research Institute in Sanskrit;

(14) to computerize and digitize the entire corpus of manuscripts and Sanskrit texts;

(15) to bring out research journals of high standard through the University/departments;

(16) to organize seminars, conferences, workshops, Vidvath Goshties with a view to promoting awareness about the messages contained in ancient knowledge systems;

(17) to admit educational institutions not maintained by the University to the privileges of the University as affiliated colleges / mahapatashalas/ patashalas in Karnatata;

(18) to provide through its Professors and other teachers and the Departments a special research institutes, such teaching and guidance as the affiliated colleges/ Mahapatashalas/ Patashalas may require;

(19) to undertake any other activities connected with or incidental to above objectives of the University;

(20) to recognize and maintain for any purpose, either in whole or in part, any institution on such terms and conditions as may from time to time be prescribed by Statutes and to withdraw such recognition;

(21) to do such acts and other things, whether incidental to the power or aforesaid or not, as may be required in order to promote the objectives of the University;

(22) to maintain such bodies as are by Statutes declared to be the authorities of the University;

(23) (a) to establish Directorates for supportive education leading to Sahitya;

(b) for distant and online education;

(c) for publications (Prasaranga);

(d) Directorate for any other purposes;

(24) to establish 'Chairs' in various disciplines for conducting advanced research.

**5. Powers of the University.-** The University shall have the following powers, namely:-

(1) to institute degrees, diploma and other academic distinctions;

(2) to confer degrees, diploma and other academic distinctions on persons who shall have carried out research in the University or in any other Institution or Centre recognised by the University under conditions prescribed, irrespective of their religion, race, creed, caste, gender or class or any of them;

**Explanation:** For the purpose of this clause and other provisions of this Act, institution or centre recognised by the University shall mean an institution or a centre situated in India or in other countries, recognised by the University for the purpose of furthering the objectives of the University; after obtaining due permission from the concerned authorities.

(3) to confer honorary degrees or other academic distinctions in the prescribed manner and under conditions prescribed;

(4) to supervise and control hostels, to regulate and enforce discipline among the students of the University and to make arrangements for promoting their health and general welfare;

(5) to prescribe conditions under which the award of any degree, diploma and other academic distinctions to persons may be withheld;

(6) to co-operate with any other University, authority or association or any other public or private body having in view the promotion of purposes and objects similar to those of the University for such purpose as may be agreed upon, on such terms and conditions, as may, from time to time, be prescribed;

(7) to establish and maintain University libraries, research stations, museums for research and publication bureau;

(8) to institute research posts and to appoint persons to such posts;

(9) to institute and award fellowships, including traveling fellowships, scholarships, medals and prizes in the manner prescribed;

(10) to accept, hold, and manage any endowments, donations or funds which may have become vested in the University by grant, testamentary disposition or otherwise and invest such endowments, donations or funds in any manner that may deemed fit:

Provided that no donations from a foreign country, foreign foundation or from any person in such a country shall be accepted by the University save with the approval of the State Government;

(11) to establish, maintain or recognise hostels for students of the University and residential accommodation for the staff of University and to withdraw any such recognitions;

(12) to fix fees and to demand and receive such fees as may be prescribed;

(13) to hold and manage endowments and other properties and funds of the University;

(14) to borrow money with the approval of the Government on the security of the property of the University for the purpose of the University;

(15) to enter into agreement with other bodies or persons for the purpose of promoting the objectives of the University including the assuming of the management of any institution under them and the taking over of the rights and liabilities.

**6. Admission to the University.-** (1) The University shall subject to the provisions of this Act and the Statutes, be open to all persons.

(2) Nothing contained in sub-section (1) shall require the University,-

(a) to admit to any course of study any person who does not possess the prescribed academic qualification or standard;

(b) to retain on the rolls of the University any student whose academic record is below the minimum standard required for the award of a degree, diploma or other academic distinction; or

(c) to admit any person or retain any student whose conduct is prejudicial to the interests of the University or the rights and privileges of other students and teachers.

**7. Jurisdiction and admission to privileges.-** Notwithstanding anything contained in the Karnataka State Universities Act, 2000 (Karnataka Act 29 of 2001),-

(i) the jurisdiction of the University shall extend to the whole of the State of Karnataka;

(ii) no college in the State of Karnataka imparting education in samskrita and veda shall, save with the consent of the University and the sanction of the Government, be associated in any way with or seek admission to any privileges of any other University in India or abroad;

(iii) any such privilege enjoyed from other University before the appointed date by any samskrita or veda college situated in the State shall be deemed to be withdrawn with effect from such date;

(iv) on and from the date of commencement of this Act, all colleges and autonomous institutions including post-graduate departments imparting education in samskrita and veda previously admitted to the privileges of or affiliated to the Universities of Karnataka, Mysore, Bangalore, Tumkur, Gulbarga, Mangalore, Women and Kuvempu shall be deemed to be admitted to the privileges of or affiliated to the University:

**8. Inspection.-** (1) The Chancellor shall have the right to cause an inspection or inquiry to be made, by such person or persons as he may direct, of the University, its buildings, University libraries, museums and equipments, and any institutions maintained or recognised by the University and also of the research, teaching and other work conducted or done by the University, and to cause an inquiry to be made in respect of any matter connected with the University. The Chancellor shall in every case give notice to the University of his Intention to cause such inspection or inquiry to be made and the University shall be entitled to be represented there at.

(2) The Chancellor shall communicate to the Syndicate his views with reference to the results of such inspection or inquiry and may after ascertaining the opinion of the Syndicate thereon advise the University upon the action to be taken and fix a time limit for taking such action.

(3) The Syndicate shall report to the Chancellor, the action, if any which is proposed to be taken, or has been taken upon the results of such inspection or inquiry., such report shall be submitted within such time as the Chancellor may direct.

(4) Where the Syndicate does not take action to the satisfaction of the Chancellor within the time limit as may be fixed under sub-section (2) the Chancellor may, after considering any explanation furnished or representation made by the Syndicate, issue such directions as he may think fit and the Syndicate shall comply with such directions. In the event of the Syndicate not complying with such directions within such time as may be fixed in that behalf by the Chancellor, the Chancellor shall have power to appoint any person or body to comply with such directions and make such orders as may be necessary for the expenses thereof.

(5) The State Government may by order published in the official Gazette annul any order, notification, resolution or any proceedings of the University, which in its opinion is not in conformity with the provisions of this Act, or the Statutes, Regulations, or Ordinances or is otherwise inconsistent with the policy of the State Government:

Provided that before making any such order, the State Government shall afford an opportunity to the University.

(6) Every order passed under sub-section (5) shall as soon as it is passed by laid before both the Houses of State Legislature.

## CHAPTER-III

## OFFICERS OF THE UNIVERSITY

**9. Officers of the University.-** The University shall consist of the following Officers, namely:-

(1) The Chancellor,

(2) The Pro-Chancellor,

(3) The Vice-Chancellor,

(4) The Dean of Faculties,

(5) The Registrar,

(6) The Finance Officer, and

(7) Such other persons as may be declared by the statutes to be officers of the University.

**10. The Chancellor.-** (1) The Governor of Karnataka shall be the Chancellor of the University. He shall by virtue of his office be the head of the University and shall when present, preside at any convocation of the University and confer degrees; diploma or other academic distinctions upon persons entitled to receive them.

(2) Where power is conferred upon the Chancellor to nominate persons to the authorities, the Chancellor shall to the extent necessary, nominate persons to represent interests not otherwise adequately represented.

(3) The Chancellor may on his own motion or on application call for and examine the record of any officer or authority of the University- in respect of any proceedings to satisfy himself as to the regularity of such proceedings or the correctness, legality or propriety of any decision taken or order passed therein; and, if, in any case it appears to the Chancellor that any such decision or orders shall be modified; annulled, revised or remitted for reconsideration he may pass orders accordingly:

Provided that every application to the Chancellor for the exercise of the powers under this section shall be preferred within three months from the date on which the proceedings, decision or order to which the application relates was communicated to the applicant:

(ಸಿ) ವಿಶ್ವವಿದ್ಯಾಲಯದ ಹಿತಾಸಕ್ತಿಗೆ ಅಥವಾ ಇತರ ವಿದ್ಯಾರ್ಥಿಗಳು ಮತ್ತು ಬೋಧಕರ ಹಕ್ಕುಗಳು ಮತ್ತು ವಿಶೇಷಾಧಿಕಾರಗಳಿಗೆ ಪ್ರತಿಕೂಲವಾದ ನಡತೆಯುಳ್ಳ ಯಾವೊಬ್ಬ ವ್ಯಕ್ತಿಗೆ ಪ್ರವೇಶ ನೀಡಲು ಅಥವಾ ಯಾವೊಬ್ಬ ವಿದ್ಯಾರ್ಥಿಯನ್ನು ಉಳಿಸಿಕೊಳ್ಳಲು;

-ವಿಶ್ವವಿದ್ಯಾಲಯವನ್ನು ಅಗತ್ಯಪಡಿಸತಕ್ಕದ್ದಲ್ಲ.

**7. ವಿಶ್ವವಿದ್ಯಾಲಯದ ಅಧಿಕಾರ ವ್ಯಾಪ್ತಿ.-** ವಿಶ್ವವಿದ್ಯಾಲಯದ ಅಧಿಕಾರ ವ್ಯಾಪ್ತಿಯು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪಿಸತಕ್ಕದ್ದು.

**8. ಪರಿಶೀಲನೆ.-** (1) ಕುಲಾಧಿಪತಿಯವರು, ತಾವು ನಿರ್ದೇಶಿಸಬಹುದಾದಂಥ ವ್ಯಕ್ತಿ ಅಥವಾ ವ್ಯಕ್ತಿಗಳಿಂದ, ವಿಶ್ವವಿದ್ಯಾಲಯ, ಅದರ ಕಟ್ಟಡಗಳು, ವಿಶ್ವವಿದ್ಯಾಲಯದ ಗ್ರಂಥಾಲಯಗಳು, ಸಂಗ್ರಹಾಲಯಗಳು ಮತ್ತು ಉಪಕರಣಗಳು ಮತ್ತು ವಿಶ್ವವಿದ್ಯಾಲಯದಿಂದ ನಿರ್ವಹಿಸಲಾದ ಅಥವಾ ಮಾನ್ಯತೆ ಪಡೆದ ಯಾವುವೇ ಸಂಸ್ಥೆಗಳು ಮತ್ತು ವಿಶ್ವವಿದ್ಯಾಲಯದಿಂದ ನಡೆಸಲಾದ ಅಥವಾ ಮಾಡಲಾದ ಸಂಶೋಧನೆ, ಬೋಧನೆ ಮತ್ತು ಇತರ ಕೆಲಸದ ಪರಿಶೀಲನೆ ನಡೆಸುವಂತೆ ಮಾಡಲು ಅಥವಾ ವಿಚಾರಣೆ ಮಾಡುವಂತೆ ಮಾಡಲು ಹಕ್ಕು ಹೊಂದಿರತಕ್ಕದ್ದು ಹಾಗೂ ವಿಶ್ವವಿದ್ಯಾಲಯಕ್ಕೆ ಸಂಬಂಧಿಸಿದ ಯಾವುದೇ ವಿಷಯದ ಬಗ್ಗೆ ವಿಚಾರಣೆ ನಡೆಸುವಂತೆ ಮಾಡತಕ್ಕದ್ದು. ಕುಲಾಧಿಪತಿಯವರು, ಪ್ರತಿಯೊಂದು ಸಂದರ್ಭದಲ್ಲೂ ಅಂಥ ಪರಿಶೀಲನೆ ಅಥವಾ ವಿಚಾರಣೆ ನಡೆಸುವ ತಮ್ಮ ಆಶಯದ ಬಗ್ಗೆ ವಿಶ್ವವಿದ್ಯಾಲಯಕ್ಕೆ ನೋಟೀಸು ನೀಡತಕ್ಕದ್ದು ಮತ್ತು ವಿಶ್ವವಿದ್ಯಾಲಯವು ಅಲ್ಲಿ ಪ್ರಾತಿನಿಧ್ಯ ಪಡೆಯಲು ಹಕ್ಕುಳ್ಳದ್ದಾಗಿರತಕ್ಕದ್ದು.

(2) ಕುಲಾಧಿಪತಿಯವರು, ಅಂಥ ಪರಿಶೀಲನೆ ಅಥವಾ ವಿಚಾರಣೆಯ ಪರಿಣಾಮಗಳ ಸಂಬಂಧದಲ್ಲಿ ತಮ್ಮ ಅಭಿಪ್ರಾಯಗಳನ್ನು ಪ್ರಶಾಸನ ಸಭೆಗೆ ತಿಳಿಸತಕ್ಕದ್ದು ಮತ್ತು ಅದರ ಮೇಲಣ ಪ್ರಶಾಸನ ಸಭೆಯ ಅಭಿಪ್ರಾಯವನ್ನು ಖಚಿತಪಡಿಸಿಕೊಂಡ ತರುವಾಯ ಕೈಗೊಳ್ಳಬೇಕಾದ ಕ್ರಮದ ಬಗ್ಗೆ ವಿಶ್ವವಿದ್ಯಾಲಯಕ್ಕೆ ಸಲಹೆ ನೀಡತಕ್ಕದ್ದು ಮತ್ತು ಅಂಥ ಕ್ರಮವನ್ನು ಕೈಗೊಳ್ಳುವುದಕ್ಕೆ ಕಾಲಮಿತಿಯನ್ನು ನಿಗದಿಪಡಿಸಬಹುದು.

(3) ಪ್ರಶಾಸನ ಸಭೆಯು ಅಂಥ ಪರಿಶೀಲನೆ ಅಥವಾ ವಿಚಾರಣೆಯ ಫಲಿತಾಂಶಗಳ ಬಗ್ಗೆ ತಾನು ತೆಗೆದುಕೊಳ್ಳಬೇಕೆಂದು ಉದ್ದೇಶಿಸಲಾದ ಅಥವಾ ತೆಗೆದುಕೊಳ್ಳಲಾದ ಕ್ರಮ, ಯಾವುದಾದರೂ ಇದ್ದಲ್ಲಿ, ಆ ಬಗ್ಗೆ ಕುಲಾಧಿಪತಿಯವರಿಗೆ ವರದಿ ಸಲ್ಲಿಸತಕ್ಕದ್ದು. ಅಂಥ ವರದಿಯನ್ನು ಕುಲಾಧಿಪತಿಯವರು ನಿರ್ದೇಶಿಸಬಹುದಾದಂಥ ಕಾಲದೊಳಗೆ ಸಲ್ಲಿಸತಕ್ಕದ್ದು.

(4) ಪ್ರಶಾಸನ ಸಭೆಯು, (2)ನೇ ಉಪ-ಪ್ರಕರಣದ ಅಡಿಯಲ್ಲಿ ನಿಗದಿಪಡಿಸಬಹುದಾದ ಕಾಲಮಿತಿಯೊಳಗೆ ಕುಲಾಧಿಪತಿಯವರಿಗೆ ಸಮಾಧಾನವಾಗುವಂತೆ ಕ್ರಮಕೈಗೊಳ್ಳದಿರುವಲ್ಲಿ, ಕುಲಾಧಿಪತಿಯವರು, ಪ್ರಶಾಸನ ಸಭೆಯು ಸಲ್ಲಿಸಿದ ವಿವರಣೆ ಅಥವಾ ಮಾಡಿಕೊಂಡ ಮನವಿಯನ್ನು ಪರಿಗಣಿಸಿದ ತರುವಾಯ, ತಾವು ಉಚಿತವೆಂದು ಭಾವಿಸಬಹುದಾದಂಥ ನಿರ್ದೇಶನಗಳನ್ನು ಹೊರಡಿಸಬಹುದು ಪ್ರಶಾಸನ ಸಭೆಯು ಅಂಥ ನಿರ್ದೇಶನಗಳನ್ನು ಪಾಲಿಸತಕ್ಕದ್ದು. ಪ್ರಶಾಸನ ಸಭೆಯು, ಕುಲಾಧಿಪತಿಯವರು ಆ ಬಗ್ಗೆ ನಿಗದಿಪಡಿಸಿದ ಅಂಥ ಕಾಲದೊಳಗಾಗಿ ಅಂಥ ನಿರ್ದೇಶನಗಳನ್ನು ಪಾಲಿಸದಿದ್ದ ಪಕ್ಷದಲ್ಲಿ, ಕುಲಾಧಿಪತಿಯವರು, ಅಂಥ ನಿರ್ದೇಶನಗಳನ್ನು ಪಾಲಿಸುವುದಕ್ಕಾಗಿ ಯಾವೊಬ್ಬ ವ್ಯಕ್ತಿ ಅಥವಾ ನಿಕಾಯವನ್ನು ನೇಮಿಸಲು ಅಧಿಕಾರವನ್ನು ಹೊಂದಿರತಕ್ಕದ್ದು ಮತ್ತು ಆ ಬಗೆಗಿನ ವೆಚ್ಚಗಳಿಗಾಗಿ ಅವಶ್ಯಕವಾಗಬಹುದಾದ ಅಂಥ ಆದೇಶಗಳನ್ನು ಹೊರಡಿಸಬಹುದು.

(5) ರಾಜ್ಯ ಸರ್ಕಾರವು, ರಾಜ್ಯಪತ್ರದಲ್ಲಿ ಆದೇಶವನ್ನು ಪ್ರಕಟಿಸುವ ಮೂಲಕ ವಿಶ್ವವಿದ್ಯಾಲಯದ ಯಾವುದೇ ಆದೇಶ, ಅಧಿಸೂಚನೆ, ನಿರ್ಣಯ ಅಥವಾ ಯಾವುದೇ ವ್ಯವಹರಣೆಗಳು ಈ ಅಧಿನಿಯಮದ ಅಥವಾ ಶಾಸನಗಳು, ವಿನಿಯಮಗಳು ಅಥವಾ ಅಧ್ಯಾದೇಶಗಳ ಉಪಬಂಧಗಳಿಗೆ ಅನುಸಾರವಾಗಿ ಇಲ್ಲವೆಂದು ಅಥವಾ ಅನ್ಯಥಾ ರಾಜ್ಯ ಸರ್ಕಾರದ ನೀತಿಗಳಿಗೆ ಅಸಂಗತವಾಗಿವೆ ಎಂದು ಅಭಿಪ್ರಾಯ ಪಟ್ಟಲ್ಲಿ ಅವುಗಳನ್ನು ರದ್ದುಗೊಳಿಸಬಹುದು.

ಪರಂತು, ಅಂಥ ಯಾವುದೇ ಆದೇಶವನ್ನು ಮಾಡುವುದಕ್ಕೆ ಮೊದಲು ರಾಜ್ಯ ಸರ್ಕಾರವು ವಿಶ್ವವಿದ್ಯಾಲಯಕ್ಕೆ ತನ್ನ ಅಹವಾಲು ಹೇಳಿಕೊಳ್ಳಲು ಒಂದು ಅವಕಾಶವನ್ನು ನೀಡತಕ್ಕದ್ದು.

(6) (1)ನೇ ಉಪಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಆದೇಶವನ್ನು ಅದನ್ನು ಹೊರಡಿಸಿದ ತರುವಾಯ ಸಾಧ್ಯವಾದಷ್ಟು ಬೇಗನೇ ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದು.

## ಅಧ್ಯಾಯ – III

## ವಿಶ್ವವಿದ್ಯಾಲಯದ ಅಧಿಕಾರಿಗಳು

**9. ವಿಶ್ವವಿದ್ಯಾಲಯದ ಅಧಿಕಾರಿಗಳು.-** ವಿಶ್ವವಿದ್ಯಾಲಯವು ಈ ಮುಂದಿನ ಅಧಿಕಾರಿಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:-

(1) ಕುಲಾಧಿಪತಿಯವರು,

(2) ಸಹಕುಲಾಧಿಪತಿಯವರು,

(3) ಕುಲಪತಿಯವರು,

(4) ಫ್ಯಾಕಲ್ಟಿಗಳ ಡೀನ್‌ರವರು,

(5) ಕುಲಸಚಿವರು,

(6) ಹಣಕಾಸು ಅಧಿಕಾರಿ ಮತ್ತು

(7) ವಿಶ್ವವಿದ್ಯಾಲಯದ ಅಧಿಕಾರಿಗಳೆಂದು ಶಾಸನಗಳಿಂದ ಘೋಷಿತರಾಗಬಹುದಾದಂಥ ಇತರ ವ್ಯಕ್ತಿಗಳು.

**10. ಕುಲಾಧಿಪತಿಯವರು.-** (1) ಕರ್ನಾಟಕದ ರಾಜ್ಯಪಾಲರು ಈ ವಿಶ್ವವಿದ್ಯಾಲಯದ ಕುಲಾಧಿಪತಿಯಾಗಿರತಕ್ಕದ್ದು, ಅವರು ತಮ್ಮ ಪದದ ಆಧಾರದಿಂದ ವಿಶ್ವವಿದ್ಯಾಲಯದ ಮುಖ್ಯಸ್ಥರಾಗಿರತಕ್ಕದ್ದು ಮತ್ತು ಅವರು ಹಾಜರಿದ್ದಾಗ, ವಿಶ್ವವಿದ್ಯಾಲಯದ ಯಾವುದೇ ಘಟಿಕೋತ್ಸವದ ಅಧ್ಯಕ್ಷರಾಗಿರತಕ್ಕದ್ದು ಮತ್ತು ಪದವಿಗಳು, ಡಿಪ್ಲೋಮ ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಅವುಗಳನ್ನು ಸ್ವೀಕರಿಸಲು ಹಕ್ಕುಳ್ಳ ವ್ಯಕ್ತಿಗಳಿಗೆ ಪ್ರದಾನ ಮಾಡತಕ್ಕದ್ದು.

(2) ಪ್ರಾಧಿಕಾರಗಳಿಗೆ ವ್ಯಕ್ತಿಗಳನ್ನು ನಾಮನಿರ್ದೇಶನ ಮಾಡಲು ಕುಲಾಧಿಪತಿಯವರಿಗೆ ಅಧಿಕಾರವನ್ನು ಪ್ರದತ್ತಗೊಳಿಸಿರುವಲ್ಲಿ ಕುಲಾಧಿಪತಿಯವರು ಸಾಕಷ್ಟು ಪ್ರಾತಿನಿಧ್ಯ ಪಡೆಯದ ಹಿತಾಸಕ್ತಿಗಳನ್ನು ಪ್ರತಿನಿಧಿಸಲು ಅವಶ್ಯಕವಿರುವಷ್ಟರಮಟ್ಟಿಗೆ ವ್ಯಕ್ತಿಗಳನ್ನು ನಾಮನಿರ್ದೇಶಿಸತಕ್ಕದ್ದು.

(3) ಕುಲಾಧಿಪತಿಯವರು ಸ್ವತಃ ತಾವೇ ಆಗಲಿ ಅಥವಾ ಅರ್ಜಿಯ ಮೇಲೆ ಆಗಲಿ ಯಾವುವೇ ವ್ಯವಹರಣೆಗಳ ಸಂಬಂಧದಲ್ಲಿ ಅಂಥ ವ್ಯವಹರಣೆಗಳ ಸಕ್ರಮತೆ ಅಥವಾ ಯಥಾರ್ಥತೆ, ಕೈಗೊಳ್ಳಲಾದ ಯಾವುದೇ ತೀರ್ಮಾನ ಅಥವಾ ಅದರಲ್ಲಿ ಜಾರಿ ಮಾಡಲಾದ ಆದೇಶದ ಕಾನೂನು ಸಮ್ಮತತೆ ಅಥವಾ ಔಚಿತ್ಯದ ಬಗ್ಗೆ ತಾವೇ ಮನದಟ್ಟು ಮಾಡಿಕೊಳ್ಳಲು ವಿಶ್ವವಿದ್ಯಾನಿಲಯದ ಯಾವೊಬ್ಬ ಅಧಿಕಾರಿ ಅಥವಾ ಯಾವುದೇ ಪ್ರಾಧಿಕಾರದ ದಾಖಲೆಗಳನ್ನು ತರಿಸಿಕೊಂಡು ಪರೀಕ್ಷಿಸಬಹುದು ಮತ್ತು ಯಾವುದೇ ಸಂದರ್ಭದಲ್ಲಿ, ಕುಲಾಧಿಪತಿಯವರಿಗೆ, ಅಂಥ ಯಾವುದೇ ತೀರ್ಮಾನ ಅಥವಾ ಆದೇಶವನ್ನು ಮಾರ್ಪಾಟುಗೊಳಿಸಬೇಕು, ರದ್ದುಗೊಳಿಸಬೇಕು, ವಿಪರ್ಯಾಯಗೊಳಿಸಬೇಕು ಅಥವಾ ಪುನರ್ ಪರಿಶೀಲನೆಗಾಗಿ ಹಿಂದಕ್ಕೆ ಕಳುಹಿಸಬೇಕೆಂದು ತೋರಿದರೆ, ಅವರು ತದನುಸಾರವಾಗಿ ಆದೇಶಗಳನ್ನು ಜಾರಿ ಮಾಡಬಹುದು:

ಪರಂತು, ಈ ಪ್ರಕರಣದ ಅಡಿಯಲ್ಲಿ ಅಧಿಕಾರಗಳನ್ನು ಚಲಾಯಿಸುವುದಕ್ಕಾಗಿ, ಪ್ರತಿಯೊಂದು ಅರ್ಜಿಯನ್ನು, ಅರ್ಜಿಯ ಸಂಬಂಧದಲ್ಲಿನ ವ್ಯವಹರಣೆ, ತೀರ್ಮಾನ ಅಥವಾ ಆದೇಶವನ್ನು ಅರ್ಜಿದಾರನಿಗೆ ತಿಳಿಸಿದ ದಿನಾಂಕದಿಂದ ಮೂರು ತಿಂಗಳೊಳಗೆ ಕುಲಾಧಿಪತಿಯವರಿಗೆ ಸಲ್ಲಿಸತಕ್ಕದ್ದು:

ಮತ್ತು ಪರಂತು, ಯಾವೊಬ್ಬ ವ್ಯಕ್ತಿಗೆ ಪ್ರತಿಕೂಲವಾದ ಯಾವುದೇ ಆದೇಶವನ್ನು ಅಂಥ ವ್ಯಕ್ತಿಗೆ ತನ್ನ ಮನವಿಯನ್ನು ಸಲ್ಲಿಸಲು ಅವಕಾಶವನ್ನು ನೀಡಿದ್ದ ಹೊರತು, ಜಾರಿ ಮಾಡತಕ್ಕದ್ದಲ್ಲ.

(4) ಕುಲಾಧಿಪತಿಯವರು, ಈ ಅಧಿನಿಯಮದಿಂದ ಅಥವಾ ಅದರ ಅಡಿಯಲ್ಲಿ ತಮಗೆ ಪ್ರದತ್ತಗೊಳಿಸಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

**11. ಸಹಕುಲಾಧಿಪತಿಯವರು.-** (1) ಕರ್ನಾಟಕ ರಾಜ್ಯದಲ್ಲಿ, ಉನ್ನತ ಶಿಕ್ಷಣ ಖಾತೆಯ ಪ್ರಭಾರ ಹೊಂದಿರುವ ಸಚಿವರು, ವಿಶ್ವವಿದ್ಯಾಲಯದ ಸಹಕುಲಾಧಿಪತಿಗಳಾಗಿರತಕ್ಕದ್ದು.

(2) ಸಹಕುಲಾಧಿಪತಿಯವರು, ಈ ಅಧಿನಿಯಮದಿಂದ ಅಥವಾ ಅದರ ಅಡಿಯಲ್ಲಿ ತಮಗೆ ಪ್ರದತ್ತವಾಗಬಹುದಾದಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

**12. ಕುಲಪತಿಯವರು.-** (1) (2)ನೇ ಉಪ ಪ್ರಕರಣದ ಅಡಿಯಲ್ಲಿ ಸರ್ಕಾರದ ಶಿಫಾರಸ್ಸಿನ ಮೇಲೆ ಕುಲಾಧಿಪತಿ ಅವರು ಕುಲಪತಿಯವರ ನೇಮಕಾತಿಯನ್ನು, ಮಾಡತಕ್ಕದ್ದು.

(2) (1)ನೇ ಉಪ ಪ್ರಕರಣದ ಉದ್ದೇಶಕ್ಕಾಗಿ, ಸರ್ಕಾರವು ಮೂವರು ವ್ಯಕ್ತಿಗಳನ್ನೊಳಗೊಂಡ ಒಂದು ಶೋಧನಾ ಸಮಿತಿಯನ್ನು ಸ್ಥಾಪಿಸತಕ್ಕದ್ದು; ಅವರುಗಳ ಪೈಕಿ ಒಬ್ಬರು ಕುಲಾಧಿಪತಿಯವರಿಂದ ನಾಮ ನಿರ್ದೇಶಿತರಾಗಿರತಕ್ಕದ್ದು. ಒಬ್ಬರು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ನಾಮನಿರ್ದೇಶಿತರಾಗಿರತಕ್ಕದ್ದು. ಹಾಗೂ ಒಬ್ಬರು ಸರ್ಕಾರದಿಂದ ನಾಮನಿರ್ದೇಶಿತರಾಗಿರತಕ್ಕದ್ದು. ಶೋಧನಾ ಸಮಿತಿಯು ಅಕಾರಾದಿ ಕ್ರಮದಲ್ಲಿ ಮೂವರು ವ್ಯಕ್ತಿಗಳ ಹೆಸರುಗಳನ್ನೊಳಗೊಂಡ ಪಟ್ಟಿಯೊಂದನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಅಂಥ ಪಟ್ಟಿಯು, ಸದರಿ ಸಮಿತಿಯ ಯಾವೊಬ್ಬ ಸದಸ್ಯನ ಹೆಸರನ್ನು ಒಳಗೊಂಡಿರತಕ್ಕದ್ದಲ್ಲ. ಸದರಿ ಪಟ್ಟಿಯಲ್ಲಿರುವ ಮೂವರು ವ್ಯಕ್ತಿಗಳ ಪೈಕಿ ಒಬ್ಬರ ಹೆಸರನ್ನು ಕುಲಪತಿಯಾಗಿ ನೇಮಕ ಮಾಡಲು

ಸರ್ಕಾರವು ಕುಲಾಧಿಪತಿಯವರಿಗೆ ಶಿಫಾರಸ್ಸು ಮಾಡತಕ್ಕದ್ದು, ಅವಶ್ಯಕವಾದರೆ ಒಂದು ಹೊಸ ಪಟ್ಟಿಯನ್ನು ಶೋಧನಾ ಸಮಿತಿಯಿಂದ ಸರ್ಕಾರವು ಪಡೆಯಬಹುದು. ಆದರಂತೆ ಸರ್ಕಾರವು ಅಂಥ ಬೇಡಿಕೆಯನ್ನು ಸಲ್ಲಿಸಿದಾಗ ಶೋಧನಾ ಸಮಿತಿಯು ಹೊಸದಾಗಿ ಮೂವರು ವ್ಯಕ್ತಿಗಳ ಹೆಸರುಗಳನ್ನೊಳಗೊಂಡ ಒಂದು ಪಟ್ಟಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು:

ಪರಂತು,-

(ಎ) ಹಾಗೆ ನಾಮನಿರ್ದೇಶಿತನಾದ ವ್ಯಕ್ತಿಯು ವಿಶ್ವವಿದ್ಯಾಲಯದ ಯಾವುವೇ ಪ್ರಾಧಿಕಾರಗಳ ಸದಸ್ಯನಾಗಿರತಕ್ಕದ್ದಲ್ಲ;

(ಬಿ) ಕುಲಾಧಿಪತಿಯವರಿಂದ ಹಾಗೆ ನಾಮನಿರ್ದೇಶಿತನಾದ ವ್ಯಕ್ತಿಯು, ಸಮಿತಿಯ ಸಭೆಗಳನ್ನು ಸಮಾವೇಶಗೊಳಿಸತಕ್ಕದ್ದು;

(3) ಕುಲಪತಿಯವರು ನಾಲ್ಕು ವರ್ಷಗಳ ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು ಮತ್ತು ಮರು ನೇಮಕಗೊಳ್ಳಲು ಅರ್ಹರಾಗಿರತಕ್ಕದ್ದು:

ಪರಂತು,-

(ಎ) ಅರವತ್ತೈದು ವರ್ಷ ವಯಸ್ಸಾದ ಯಾವೊಬ್ಬ ವ್ಯಕ್ತಿಯು ಕುಲಪತಿಯಾಗಿ ನೇಮಕವಾಗತಕ್ಕದ್ದಲ್ಲ ಅಥವಾ ಪದಧಾರಣ ಮಾಡತಕ್ಕದ್ದಲ್ಲ.

(ಬಿ) ಕುಲಪತಿಯವರು, ಕುಲಾಧಿಪತಿಯವರಿಗೆ, ಸ್ವತ: ಸಹಿ ಮಾಡಿದ ಪತ್ರ ಬರೆದು ಮತ್ತು ಎರಡು ತಿಂಗಳ ನೋಟಿಸನ್ನು ನೀಡಿದ ತರುವಾಯ ತಮ್ಮ ಪದಕ್ಕೆ ರಾಜೀನಾಮೆ ನೀಡಬಹುದು.

ಮತ್ತೂ ಪರಂತು, ಕುಲಪತಿಯಾಗಿ ನೇಮಕಗೊಂಡ ವ್ಯಕ್ತಿಯು, ತನ್ನ ಸೇವಾವಧಿಯಲ್ಲಿ ಅರವತ್ತೈದು ವರ್ಷಗಳು ಪೂರ್ಣಗೊಳಿಸಿದರೆ ಪದದಿಂದ ನಿವೃತ್ತರಾಗತಕ್ಕದ್ದು.

(4) ಕುಲಪತಿಯವರ ಹುದ್ದೆಯು ತಾತ್ಕಾಲಿಕವಾಗಿ ಖಾಲಿಯಾದಲ್ಲಿ ಅಥವಾ ಅವರ ರಜೆಯ ಕಾರಣದಿಂದಾಗಿ ಅಥವಾ ಇನ್ನಾವುದೇ ಕಾರಣಗಳಿಗಾಗಿ ಗೈರುಹಾಜರಾದಲ್ಲಿ ಅವರು ತಮ್ಮ ಪದದ ಅಧಿಕಾರಗಳನ್ನು ಚಲಾಯಿಸಲು ಅಥವಾ ಕರ್ತವ್ಯಗಳನ್ನು ನೆರವೇರಿಸಲು ಸಾಧ್ಯವಿಲ್ಲದಿದ್ದರೆ ವಿಶ್ವವಿದ್ಯಾಲಯದ ಅತ್ಯಂತ ಹಿರಿಯ ಪ್ರಾಧ್ಯಾಪಕರು, ಕುಲಾಧಿಪತಿಯವರ ಅನುಮೋದನೆ ಪಡೆದು ಕುಲಪತಿಯವರ ಕರ್ತವ್ಯಗಳನ್ನು ನಿರ್ವಹಿಸಬಹುದು.

(5) ಕುಲಪತಿಯವರನ್ನು, ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯಗತಗೊಳಿಸುವುದನ್ನು ಉದ್ದೇಶಪೂರ್ವಕವಾಗಿ ಬಿಟ್ಟುಬಿಟ್ಟಿದ್ದಾರೆ ಅಥವಾ ಕಾರ್ಯಗತಗೊಳಿಸಲು ನಿರಾಕರಿಸಿದ್ದಾರೆ ಅಥವಾ ಅವರಲ್ಲಿ ನಿಹಿತವಾದ ಅಧಿಕಾರಗಳನ್ನು ದುರುಪಯೋಗಪಡಿಸಿಕೊಂಡಿದ್ದಾರೆ ಎಂಬ ಕಾರಣದ ಮೇಲೆ ಮತ್ತು ರಾಜ್ಯ ಸರ್ಕಾರವು (6)ನೇ ಉಪ ಪ್ರಕರಣದ ಅಡಿಯಲ್ಲಿ ತಾನು ಆದೇಶಿಸಿದ್ದ ಒಂದು ವಿಚಾರಣೆಯ ವರದಿಯನ್ನು ಪರಿಗಣಿಸಿದ ನಂತರ ನೀಡಿದ ಸಲಹೆಯ ಮೇಲೆ ಕುಲಾಧಿಪತಿಯವರು ಹೊರಡಿಸಿದ ಆದೇಶದ ಮೂಲಕವಾಗಿ ಅಲ್ಲದೆ, ಅವರ ಹುದ್ದೆಯಿಂದ ತೆಗೆದುಹಾಕತಕ್ಕದ್ದಲ್ಲ.

(6) ಈ ಪ್ರಕರಣದ ಅಡಿಯಲ್ಲಿ ಒಂದು ವಿಚಾರಣೆಯನ್ನು ನಡೆಸುವ ಉದ್ದೇಶಕ್ಕಾಗಿ, ರಾಜ್ಯಸರ್ಕಾರವು, ಉಚ್ಚ ನ್ಯಾಯಾಲಯದ ಅಥವಾ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿರುವ ಅಥವಾ ಆಗಿದ್ದ ವ್ಯಕ್ತಿಯನ್ನು ನೇಮಕ ಮಾಡತಕ್ಕದ್ದು. ವಿಚಾರಣಾ ಪ್ರಾಧಿಕಾರವು, ಕುಲಪತಿಯವರಿಗೆ ತಮ್ಮ ಮನವಿಯನ್ನು ಸಲ್ಲಿಸಲು ಅವಕಾಶ ನೀಡಿದ ನಂತರ ವಿಚಾರಣೆ ನಡೆಸತಕ್ಕದ್ದು ಮತ್ತು ವಿಧಿಸಬೇಕಾದ ಯಾವುದೇ ದಂಡನೆ ಇದ್ದರೆ, ಅದೂ ಒಳಗೊಂಡಂತೆ ತೆಗೆದುಕೊಳ್ಳಬೇಕಾದ ಕ್ರಮದ ಬಗ್ಗೆ ಒಂದು ವರದಿಯನ್ನು ರಾಜ್ಯಸರ್ಕಾರಕ್ಕೆ ಸಲ್ಲಿಸತಕ್ಕದ್ದು. ರಾಜ್ಯ ಸರ್ಕಾರವು, ವರದಿಯನ್ನು ಪರಿಶೀಲಿಸಿದ ನಂತರ, ಕುಲಾಧಿಪತಿಯವರಿಗೆ ಸಲಹೆ ನೀಡತಕ್ಕದ್ದು. ಕುಲಾಧಿಪತಿಯವರು ಸಾಧ್ಯವಾದಷ್ಟುಮಟ್ಟಿಗೆ ಆರು ತಿಂಗಳೊಳಗಾಗಿ ಅಂಥ ಸಲಹೆಗೆ ಅನುಸಾರವಾಗಿ ಕ್ರಮ ಕೈಗೊಳ್ಳತಕ್ಕದ್ದು.

(7) ಕುಲಪತಿಯವರ ಉಪಲಬ್ಧಿಗಳು ಮತ್ತು ಇತರ ಸೇವಾ ಷರತ್ತುಗಳು ಕುಲಾಧಿಪತಿಯವರು ನಿರ್ಧರಿಸಬಹುದಾದಂತೆ ಇರತಕ್ಕದ್ದು ಮತ್ತು ಅವುಗಳನ್ನು ಅವರು ಕುಲಪತಿಯಾಗಿ ನೇಮಕವಾದ ತರುವಾಯ ಅವರಿಗೆ ಅನಾನುಕೂಲವಾಗುವಂತೆ ಬದಲಾಯಿಸತಕ್ಕದ್ದಲ್ಲ. ಕುಲಪತಿಯಾಗಿ ತಮ್ಮ ಅಧಿಕಾರಾವಧಿಯಲ್ಲಿರುವಾಗ ಕುಲಪತಿಯವರು ವಯೋನಿವೃತ್ತಿಯ ಮೇಲೆ ನಿವೃತ್ತರಾಗುವ ಸಂದರ್ಭದಲ್ಲಿ, ಈಗಾಗಲೇ ನಿರ್ಧರಿಸಲಾದ ಅವರ ಸೇವಾ ಷರತ್ತುಗಳು ಮುಂದುವರಿಯತಕ್ಕದ್ದು. ಅವರ ಎಲ್ಲ ನಿವೃತ್ತಿ ಸೌಲಭ್ಯಗಳನ್ನು ತಡೆಹಿಡಿಯತಕ್ಕದ್ದು, ಅವುಗಳನ್ನು ಅವರು ಕುಲಪತಿಯಾಗಿ ತಮ್ಮ ಅಧಿಕಾರ ಸ್ಥಾನವನ್ನು ತ್ಯಜಿಸಿದ ನಂತರ ಬಿಡುಗಡೆ ಮಾಡತಕ್ಕದ್ದು.

(8) ನಿವೃತ್ತರಾದ ಒಬ್ಬ ವ್ಯಕ್ತಿಯು, ಕುಲಪತಿಯಾಗಿ ನೇಮಕಗೊಂಡರೆ, ಅವರು ಕುಲಪತಿಯಾಗಿ ನೇಮಕಗೊಂಡ ಮೇಲೆ, ಅವರ ಉಪಲಬ್ಧಿಗಳೂ ಸೇರಿದಂತೆ ಅವರ ಸೇವಾ ನಿಬಂಧನೆ ಮತ್ತು ಷರತ್ತುಗಳನ್ನು ಕುಲಾಧಿಪತಿಯವರು ನಿರ್ಣಯಿಸತಕ್ಕದ್ದು. ಅವರು ಪಡೆಯುವ ನಿವೃತ್ತಿ ವೇತನದ ಮೊತ್ತವನ್ನು ಮತ್ತು ಭತ್ಯೆಗಳನ್ನು ಅವರ ಉಪಲಬ್ಧಿಗಳಿಂದ ಕಳೆಯತಕ್ಕದ್ದು.

(9) ರಾಜ್ಯದಲ್ಲಿನ ಒಂದು ವಿಶ್ವವಿದ್ಯಾಲಯದ ಸೇವೆಯಲ್ಲಿರುವ ಒಬ್ಬ ಪ್ರಾಧ್ಯಾಪಕರನ್ನು, ಕುಲಪತಿಯಾಗಿ ನೇಮಕ ಮಾಡಿದರೆ, ಅವರು ಕುಲಪತಿಯಾಗಿರುವಾಗಿನ ಪದಾವಧಿಯಲ್ಲಿ ಪ್ರಾಧ್ಯಾಪಕರಾಗಿ ಅವರ ಸೇವಾ ನಿಬಂಧನೆ ಮತ್ತು ಷರತ್ತುಗಳನ್ನು ಅವರಿಗೆ ಅನಾನುಕೂಲವಾಗುವಂತೆ ಪರಿಷ್ಕರಿಸತಕ್ಕದ್ದಲ್ಲ ಮತ್ತು ಅವರು ತಮ್ಮ ಹುದ್ದೆಯ ಧಾರಣಾಧಿಕಾರವನ್ನು ಉಳಿಸಿಕೊಳ್ಳತಕ್ಕದ್ದು.

**13. ಕುಲಪತಿಯವರ ಅಧಿಕಾರಗಳು ಮತ್ತು ಕರ್ತವ್ಯಗಳು.-** (1) ಕುಲಪತಿಯವರು ಶೈಕ್ಷಣಿಕ ಮುಖ್ಯಸ್ಥರು ಮತ್ತು ವಿಶ್ವವಿದ್ಯಾಲಯದ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾಗಿರತಕ್ಕದ್ದು ಮತ್ತು ಕುಲಾಧಿಪತಿಯವರು ಮತ್ತು ಸಹಕುಲಾಧಿಪತಿಯವರ ಗೈರುಹಾಜರಿಯಲ್ಲಿ, ವಿಶ್ವವಿದ್ಯಾಲಯದ ಯಾವುದೇ ಘಟಿಕೋತ್ಸವದ ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಪದವಿಗಳು, ಡಿಪ್ಲೊಮಾ ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು, ಅವುಗಳನ್ನು ಸ್ವೀಕರಿಸಲು ಹಕ್ಕುಳ್ಳವರಾಗಿರುವ ವ್ಯಕ್ತಿಗಳಿಗೆ ಪ್ರದಾನ ಮಾಡತಕ್ಕದ್ದು. ಅವರು ಪ್ರಶಾಸನ ಸಭೆಯ, ಪ್ರಶಿಕ್ಷಣ ಪರಿಷತ್ತಿನ ಹಾಗೂ ಹಣಕಾಸು ಸಮಿತಿಯ ಪದನಿಮಿತ್ತ ಸದಸ್ಯರಾಗಿದ್ದು ಅವುಗಳ ಅಧ್ಯಕ್ಷರಾಗಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಯಾವುದೇ ಸಭೆಯಲ್ಲಿ ಹಾಜರಿದ್ದು ಅಲ್ಲಿ ಭಾಷಣ ಮಾಡಲು ಹಕ್ಕುಳ್ಳವರಾಗಿರತಕ್ಕದ್ದು. ಆದರೆ ಅವರು, ಸಂಬಂಧಪಟ್ಟ ಪ್ರಾಧಿಕಾರದ ಒಬ್ಬ ಸದಸ್ಯರಾಗಿದ್ದ ಹೊರತು ಅಲ್ಲಿ ಮತ ನೀಡಲು ಹಕ್ಕುಳ್ಳವರಾಗಿರತಕ್ಕದ್ದಲ್ಲ.

(2) ಈ ಅಧಿನಿಯಮದ ಮತ್ತು ಶಾಸನಗಳ ಉಪಬಂಧಗಳನ್ನು ಪಾಲಿಸಲಾಗಿದೆ ಮತ್ತು ಅವುಗಳನ್ನು ನೆರವೇರಿಸಲಾಗಿದೆ ಎಂಬುದನ್ನು ಖಚಿತಪಡಿಸಿಕೊಳ್ಳುವುದು ಕುಲಪತಿಯವರ ಕರ್ತವ್ಯವಾಗಿರತಕ್ಕದ್ದು ಮತ್ತು ಈ ಉದ್ದೇಶಕ್ಕಾಗಿ ಅವರು ಅವಶ್ಯಕವಾದ ಎಲ್ಲ ಅಧಿಕಾರಗಳನ್ನು ಚಲಾಯಿಸಬಹುದು.

(3) ಕುಲಪತಿಯವರು ಪ್ರಶಾಸನ ಸಭೆ, ಪ್ರಶಿಕ್ಷಣ ಪರಿಷತ್ತು ಮತ್ತು ಹಣಕಾಸು ಸಮಿತಿಯ ಸಭೆಗಳನ್ನು ಸಮಾವೇಶಗೊಳಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

(4) (ಎ) ಕುಲಪತಿಯವರು ಯಾವುದೇ ವಿಷಯದ ಬಗ್ಗೆ ಕ್ರಮಕೈಗೊಳ್ಳಲು ಅಧಿಕಾರ ಹೊಂದಿರತಕ್ಕದ್ದು ಮತ್ತು ತಾವು ಅವಶ್ಯವೆಂದು ಭಾವಿಸುವಂಥ ಕ್ರಮವನ್ನು ಆದೇಶದ ಮೂಲಕ ಕೈಗೊಳ್ಳತಕ್ಕದ್ದು. ಆದರೆ, ತದನಂತರ ಸಾಧ್ಯವಾದಷ್ಟು ಬೇಗನೆ, ಕೈಗೊಳ್ಳಲಾದ ಕ್ರಮವನ್ನು, ವಿಷಯವನ್ನು ಸಾಮಾನ್ಯವಾಗಿ ವ್ಯವಹರಿಸುತ್ತಿದ್ದ ಅಧಿಕಾರಿ ಅಥವಾ ಪ್ರಾಧಿಕಾರ ಅಥವಾ ನಿಕಾಯಕ್ಕೆ ವರದಿ ಮಾಡತಕ್ಕದ್ದು:

ಪರಂತು, ಬಾಧಿತನಾಗುವ ಸಂಭವವಿರುವ ವ್ಯಕ್ತಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ನೀಡಿದ ಹೊರತು ಅಂಥ ಯಾವುದೇ ಆದೇಶವನ್ನು ಹೊರಡಿಸತಕ್ಕದ್ದಲ್ಲ.

(ಬಿ) ಈ ಉಪ-ಪ್ರಕರಣದ ಅಡಿಯಲ್ಲಿ ಕುಲಪತಿಯವರು ಕೈಗೊಂಡ ಕ್ರಮವು ವಿಶ್ವವಿದ್ಯಾಲಯದ ಸೇವೆಯಲ್ಲಿರುವ ಯಾವೊಬ್ಬ ವ್ಯಕ್ತಿಯನ್ನು ಬಾಧಿಸಿದಾಗ, ಅಂಥ ವ್ಯಕ್ತಿಯು, ಅಂಥ ಕ್ರಮದ ಬಗ್ಗೆ ನೋಟೀಸನ್ನು ತಾನು ಪಡೆದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಪ್ರಶಾಸನ ಸಭೆಗೆ ಒಂದು ಅಪೀಲನ್ನು ಸಲ್ಲಿಸಲು ಹಕ್ಕುಳ್ಳವನಾಗಿರತಕ್ಕದ್ದು. ಕುಲಪತಿಯವರು ಅಂಥ ಅಪೀಲಿನ ಮೇಲೆ ಪ್ರಶಾಸನ ಸಭೆಯು ಹೊರಡಿಸಿದ ಆದೇಶವನ್ನು ಜಾರಿತರತಕ್ಕದ್ದು.

(5) ಕುಲಪತಿಯವರು, ವಿಶ್ವವಿದ್ಯಾಲಯದ ಬೋಧಕರು ಮತ್ತು ಇತರ ಉದ್ಯೋಗಿಗಳ ನೇಮಕಾತಿ, ಅಮಾನತ್ತುಗೊಳಿಸುವಿಕೆ ಮತ್ತು ವಜಾ ಇವುಗಳಿಗೆ ಸಂಬಂಧಿಸಿದಂತೆ ಪ್ರಶಾಸನ ಸಭೆಯ ಆದೇಶಗಳನ್ನು ಜಾರಿಗೊಳಿಸತಕ್ಕದ್ದು.

(6) ಕುಲಪತಿಯವರು, ವಿಶ್ವವಿದ್ಯಾಲಯದ ವ್ಯವಹಾರಗಳ ಮೇಲೆ ನಿಯಂತ್ರಣವನ್ನು ಹೊಂದಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದಲ್ಲಿ ಶಿಸ್ತನ್ನು ಯಥೋಚಿತವಾಗಿ ಪಾಲಿಸುವಂತೆ ನೋಡಿಕೊಳ್ಳಲು ಜವಾಬ್ದಾರರಾಗಿರತಕ್ಕದ್ದು.

(7) ಕುಲಪತಿಯವರು, ನಿಯಮಿಸಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**14. ಫ್ಯಾಕಲ್ಟಿಗಳ ಡೀನರು.-** (1) ಕುಲಪತಿಯವರು, ಪ್ರತಿಯೊಬ್ಬ ಡೀನ್‌ರನ್ನು, ಫ್ಯಾಕಲ್ಟಿಯಲ್ಲಿರುವ ಪ್ರಾಧ್ಯಾಪಕರ ಪೈಕಿಯಿಂದ, ಮೂರು ವರ್ಷಗಳ ಅವಧಿಗಾಗಿ ನೇಮಕ ಮಾಡತಕ್ಕದ್ದು ಮತ್ತು ಅವರು ಪುನರ್ ನೇಮಕಕ್ಕೆ ಅರ್ಹರಾಗಿರತಕ್ಕದ್ದು:

ಪರಂತು, ಫ್ಯಾಕಲ್ಟಿಯಲ್ಲಿ ಯಾವುದೇ ಕಾಲದಲ್ಲಿ ಪ್ರಾಧ್ಯಾಪಕರು ಇರದಿದ್ದರೆ, ಕುಲಪತಿಯವರು ಫ್ಯಾಕಲ್ಟಿಯ ಡೀನರ ಅಧಿಕಾರಗಳನ್ನು ಚಲಾಯಿಸತಕ್ಕದ್ದು.

(2) ಡೀನರ ಪದವು, ಖಾಲಿಯಾಗಿದ್ದಾಗ, ಅಥವಾ ಅನಾರೋಗ್ಯದ, ಗೈರುಹಾಜರಿಯ ಅಥವಾ ಇತರ ಯಾವುದೇ ಕಾರಣದಿಂದ ತಮ್ಮ ಪದದ ಕರ್ತವ್ಯಗಳನ್ನು ನಿರ್ವಹಿಸಲು ಅಸಮರ್ಥರಾದಾಗ, ಅವರ ಪದದ ಕರ್ತವ್ಯಗಳನ್ನು ಈ ಉದ್ದೇಶಕ್ಕಾಗಿ ಕುಲಪತಿಯವರು ನೇಮಕ ಮಾಡಬಹುದಾದಂಥ ವ್ಯಕ್ತಿಯು ನೆರವೇರಿಸತಕ್ಕದ್ದು.

(3) ಡೀನರು ಫ್ಯಾಕಲ್ಟಿಯ ಮುಖ್ಯಸ್ಥರಾಗಿರತಕ್ಕದ್ದು ಮತ್ತು ಫ್ಯಾಕಲ್ಟಿಯಲ್ಲಿ ಸಂಶೋಧನೆಯನ್ನು ನಡೆಸುವುದಕ್ಕೆ ಮತ್ತು ಗುಣಮಟ್ಟಗಳನ್ನು ಕಾಪಾಡಿಕೊಂಡುಬರುವುದಕ್ಕೆ ಹೊಣೆಗಾರರಾಗಿರತಕ್ಕದ್ದು. ಡೀನ್‌ರು ನಿಯಮಿಸಬಹುದಾದಂಥ ಪ್ರಕಾರ್ಯಗಳನ್ನು ಹೊಂದಿರತಕ್ಕದ್ದು.

(4) ಡೀನರು ಸಂದರ್ಭಾನುಸಾರ ಅಧ್ಯಯನ ಮಂಡಳಿಗಳ ಅಥವಾ ಫ್ಯಾಕಲ್ಟಿಯ ಸಮಿತಿಯ ಯಾವುದೇ ಸಭೆಯಲ್ಲಿ ಹಾಜರಿರಲು ಮತ್ತು ಮಾತನಾಡಲು ಅಧಿಕಾರ ಹೊಂದಿರತಕ್ಕದ್ದು, ಆದರೆ ಅವರು ಅದರ ಸದಸ್ಯರಾಗಿದ್ದ ಹೊರತು ಮತ ನೀಡಲು ಅಧಿಕಾರ ಹೊಂದಿರತಕ್ಕದ್ದಲ್ಲ.

**15. ಕುಲಸಚಿವ.–** (1) ಕುಲಸಚಿವರು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು. ಸರ್ಕಾರವು, ಕರ್ನಾಟಕ ಆಡಳಿತ ಸೇವೆಗಳಿಗೆ ಸೇರಿದ, ಹಿರಿಯ ವೇತನ ಶ್ರೇಣಿಯ ಅಥವಾ ಅದಕ್ಕಿಂತ ಹೆಚ್ಚಿನ ಶ್ರೇಣಿಯ ಒಬ್ಬ ಅಧಿಕಾರಿಯನ್ನು ವಿಶ್ವವಿದ್ಯಾಲಯದ ಕುಲಸಚಿವರಾಗಿ ನೇಮಕ ಮಾಡಬಹುದು.

(2) ಕುಲಸಚಿವರು, ಪ್ರಶಾಸನ ಸಭೆ ಮತ್ತು ಪ್ರಶಿಕ್ಷಣ ಪರಿಷತ್ತಿನ ಪದನಿಮಿತ್ತ ಸದಸ್ಯ ಕಾರ್ಯದರ್ಶಿ ಮತ್ತು ಹಣಕಾಸು ಸಮಿತಿಯ ಸದಸ್ಯ ಆಗಿರತಕ್ಕದ್ದು.

(3) ಕುಲಸಚಿವರಿಗೆ ಒಬ್ಬರು ಅಥವಾ ಹೆಚ್ಚು ಉಪ–ಕುಲಸಚಿವರು ಹಾಗೂ ಸಹಾಯಕ ಕುಲಸಚಿವರುಗಳು ಸಹಾಯಕರಾಗಿರಬಹುದು.

**16. ಕುಲಸಚಿವರ ಅಧಿಕಾರಗಳು ಮತ್ತು ಕರ್ತವ್ಯಗಳು.–** (1) (ಎ) ಕುಲಸಚಿವರು, ಪ್ರಶಾಸನ ಸಭೆಯ ಆದೇಶಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಬೋಧಕರು ಮತ್ತು ಶೈಕ್ಷಣಿಕ ಸಿಬ್ಬಂದಿಯ ಹೊರತಾಗಿ ಅಂಥ ನೌಕರರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಮತ್ತು ವಿಚಾರಣೆ ಇತ್ಯರ್ಥದಲ್ಲಿರುವಾಗ ಅಮಾನತುಗೊಳಿಸಲು, ಅವರಿಗೆ ಎಚ್ಚರಿಕೆ ನೀಡಲು ಅಥವಾ ಅವರಿಗೆ ವಾಗ್ದಂಡನೆ ಅಥವ ವೇತನ ಬಡ್ತಿಗಳನ್ನು ತಡೆಹಿಡಿಯಲು ಅಧಿಕಾರ ಹೊಂದಿರತಕ್ಕದ್ದು:

ಪರಂತು, ಈ ಸಂಬಂಧದಲ್ಲಿ ಕೈಗೊಳ್ಳಲು ಉದ್ದೇಶಿಸಿದ ಕ್ರಮದ ವಿರುದ್ಧ ಕಾರಣ ತೋರಿಸುವ ಸೂಕ್ತ ಅವಕಾಶವನ್ನು ಸಂಬಂಧಪಟ್ಟ ವ್ಯಕ್ತಿಗೆ ನೀಡಿದ ಹೊರತು, ಅಂಥ ಯಾವುದೇ ದಂಡವನ್ನು ವಿಧಿಸತಕ್ಕದ್ದಲ್ಲ.

(ಬಿ) (ಎ) ಖಂಡದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ದಂಡವನ್ನು ವಿಧಿಸುವ ಕುಲಸಚಿವರ ಆದೇಶದ ವಿರುದ್ಧ ಕುಲಾಧಿಪತಿಯವರಿಗೆ ಅಪೀಲನ್ನು ಸಲ್ಲಿಸಬಹುದು.

(ಸಿ) ಕುಲಸಚಿವರ ಅಧಿಕಾರಗಳಿಗೆ ಮೀರಿ ದಂಡ ವಿಧಿಸುವ ಅಗತ್ಯವಿದೆ ಎಂದು ವಿಚಾರಣೆಯಿಂದ ತಿಳಿದು ಬಂದ ಸಂದರ್ಭದಲ್ಲಿ, ಕುಲಸಚಿವರು, ವಿಚಾರಣೆಯಲ್ಲಿಯ ತೀರ್ಮಾನದ ಮೇಲೆ ತನ್ನ ಶಿಫಾರಸ್ಸುಗಳೊಡನೆ ಕುಲಪತಿಯವರಿಗೆ ಒಂದು ವರದಿಯನ್ನು ಸಲ್ಲಿಸತಕ್ಕದ್ದು;

ಪರಂತು, ದಂಡ ವಿಧಿಸುವಂತೆ ಕುಲಪತಿಯವರು ಮಾಡಿದ ಆದೇಶದ ವಿರುದ್ಧ ಪ್ರಶಾಸನ ಸಭೆಗೆ ಅಪೀಲನ್ನು ಸಲ್ಲಿಸತಕ್ಕದ್ದು.

(ಡಿ) (ಬಿ) ಖಂಡದ ಅಥವಾ (ಸಿ) ಖಂಡದ ಅಡಿಯಲ್ಲಿ ಯಾವುದೇ ಅಪೀಲನ್ನು, ಅಪೀಲುದಾರನು ಯಾವ ಆದೇಶದ ವಿರುದ್ಧ ಅಪೀಲು ಸಲ್ಲಿಸಿರುವರೋ ಆ ಆದೇಶದ ದಿನಾಂಕದಿಂದ ಅರವತ್ತು ದಿನಗಳು ಮುಕ್ತಾಯವಾದ ತರುವಾಯ ಸಲ್ಲಿಸತಕ್ಕದಲ್ಲ.

(2) ಕುಲಸಚಿವರು, ಪ್ರಶಾಸನ ಸಭೆಯ, ಪ್ರಶಿಕ್ಷಣ ಪರಿಷತ್ತಿನ ಫ್ಯಾಕಲ್ಟಿಗಳ ಮತ್ತು ಅಧ್ಯಯನ ಮಂಡಲಿಗಳ ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು.

(3) ಈ ಮುಂದಿನವುಗಳು ಕುಲಸಚಿವರ ಕರ್ತವ್ಯಗಳಾಗಿರತಕ್ಕದ್ದು:–

(ಎ) ಕುಲಪತಿಯವರು ಅಥವಾ ಪ್ರಶಾಸನ ಸಭೆಯು ತಮ್ಮ ಪ್ರಭಾರಕ್ಕೆ ಒಪ್ಪಿಸಿದ ವಿಶ್ವವಿದ್ಯಾಲಯದ ದಾಖಲೆಗಳ, ಸಾಮಾನ್ಯ ಮೊಹರಿನ ಮತ್ತು ಇತರ ಸ್ವತ್ತಿನ ಅಭಿರಕ್ಷಕರಾಗಿರತಕ್ಕದ್ದು;

(ಬಿ) ಪ್ರಶಾಸನ ಸಭೆಯ, ಪ್ರಶಿಕ್ಷಣ ಪರಿಷತ್ತಿನ, ಅಧ್ಯಯನ ಮಂಡಳಿಗಳ, ಪರೀಕ್ಷಾ ಮಂಡಳಿಗಳ ಮತ್ತು ವಿಶ್ವವಿದ್ಯಾಲಯದ ಪ್ರಾಧಿಕಾರಗಳು ನೇಮಕಮಾಡಿದ ಯಾವುದೇ ಸಮಿತಿಯ ಸಭೆಗಳನ್ನು ನಡೆಸುವುದಕ್ಕೆ ನೋಟೀಸುಗಳನ್ನು ನೀಡತಕ್ಕದ್ದು;

(ಸಿ) ಪ್ರಶಾಸನ ಸಭೆಯ, ಪ್ರಶಿಕ್ಷಣ ಪರಿಷತ್ತಿನ, ಅಧ್ಯಯನ ಮಂಡಳಿಗಳ, ಪರೀಕ್ಷಕರ ಮಂಡಳಿಗಳ ಮತ್ತು ವಿಶ್ವವಿದ್ಯಾಲಯದ ಪ್ರಾಧಿಕಾರಗಳು ನೇಮಕ ಮಾಡಿದ ಸಮಿತಿಗಳ ಸಭೆಗಳ ಎಲ್ಲಾ ವ್ಯವಹರಣೆಗಳ ಸಭಾ ನಡೆವಳಿಗಳನ್ನು ಇಟ್ಟುಕೊಂಡು ಬರತಕ್ಕದ್ದು;

(ಡಿ) ಪ್ರಶಾಸನ ಸಭೆಯ ಮತ್ತು ಪ್ರಶಿಕ್ಷಣ ಪರಿಷತ್ತಿನ ಅಧಿಕೃತ ಪತ್ರ ವ್ಯವಹಾರಗಳನ್ನು ನಡೆಸತಕ್ಕದ್ದು;

(ಇ) ವಿಶ್ವವಿದ್ಯಾಲಯದ ಪ್ರಾಧಿಕಾರಗಳ ಸಭೆಗಳ ಕಾರ್ಯಸೂಚಿಯ ಪ್ರತಿಗಳನ್ನು, ಅವುಗಳನ್ನು ಹೊರಡಿಸಿದ ಕೂಡಲೇ ಮತ್ತು ಅಂಥ ಸಭೆಗಳ ಸಭಾ ನಡವಳಿಗಳ ಪ್ರತಿಗಳನ್ನು, ಅಂಥ ಸಭೆ ನಡೆದ ಒಂದು ತಿಂಗಳ ಒಳಗೆ ಕುಲಾಧಿಪತಿಯವರಿಗೆ ಕಳುಹಿಸಿಕೊಡತಕ್ಕದ್ದು; ಮತ್ತು

(ಎಫ್) ಶಾಸನಗಳಲ್ಲಿ, ನಿರ್ದಿಷ್ಟಪಡಿಸಿದ ಅಥವಾ ಪ್ರಶಾಸನ ಸಭೆಯು ಅಥವಾ ಕುಲಪತಿಯವರು ಕಾಲಕಾಲಕ್ಕೆ ಅಗತ್ಯಪಡಿಸಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

(4) ಕುಲಸಚಿವರ ಸ್ಥಾನವು ಖಾಲಿಯಾದಾಗ ಅಥವಾ ಕುಲಸಚಿವರು, ಖಾಯಿಲೆ, ಗೈರು ಹಾಜರಿ ಅಥವಾ ಇನ್ನಾವುದೇ ಕಾರಣದಿಂದ ತನ್ನ ಸ್ಥಾನದ ಕರ್ತವ್ಯಗಳನ್ನು ನೆರವೇರಿಸುವುದು ಸಾಧ್ಯವಾಗದಿದ್ದಾಗ ಕುಲಸಚಿವರ ಕರ್ತವ್ಯಗಳನ್ನು ಉದ್ದೇಶವಾಗಿ ಕುಲಪತಿಯವರು ನೇಮಿಸಬಹುದಾದ ವ್ಯಕ್ತಿಯು ನೆರವೇರಿಸತಕ್ಕದ್ದು.

**17. ಹಣಕಾಸು ಅಧಿಕಾರಿ.–** ಹಣಕಾಸು ಅಧಿಕಾರಿಯು, ಈ ಬಗ್ಗೆ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ಅವಧಿಗೆ ಸರ್ಕಾರದಿಂದ ನೇಮಕಗೊಂಡ ವಿಶ್ವವಿದ್ಯಾಲಯದ ಒಬ್ಬ ಪೂರ್ಣಕಾಲಿಕ ವೇತನ ಪಡೆಯುವ ಅಧಿಕಾರಿಯಾಗಿರತಕ್ಕದ್ದು ಮತ್ತು ಹಣಕಾಸು ಅಧಿಕಾರಿಯ ಸೇವಾ ಷರತ್ತುಗಳು ಮತ್ತು ನಿಬಂಧನೆಗಳು ಮೊದಲನೇ ಶಾಸನ ನಿರ್ದಿಷ್ಟಪಡಿಸಿದಂಥವುಗಳಾಗಿರತಕ್ಕದ್ದು.

**18. ಹಣಕಾಸು ಅಧಿಕಾರಿಯ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು.–** (1) ಹಣಕಾಸು, ಅಧಿಕಾರಿಯ ಉಪಲಬ್ಧಿಗಳು ಮತ್ತು ಇತರ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ನಿಯಮಿಸಬಹುದಾದಂಥವುಗಳಾಗಿರತಕ್ಕದ್ದು. ಹಣಕಾಸು ಅಧಿಕಾರಿಯು ತನಗೆ ಅರವತ್ತು ವರ್ಷಗಳ ವಯಸ್ಸಾದಾಗ ಅಥವಾ 17ನೇ ಪ್ರಕರಣದಲ್ಲಿ ಸರ್ಕಾರವು ನಿರ್ದಿಷ್ಟಪಡಿಸಿದ ಅವಧಿಯು ಮುಕ್ತಾಯವಾದ ಮೇಲೆ, ಇವುಗಳಲ್ಲಿ ಯಾವುದು ಮೊದಲೋ ಆಗ ನಿವೃತ್ತರಾಗತಕ್ಕದ್ದು.

ಪರಂತು, ಹಣಕಾಸು ಅಧಿಕಾರಿಯು ಅರವತ್ತು ವರ್ಷ ವಯಸ್ಸಾಗಿದ್ದರೂ ಅವರ ಉತ್ತರಾಧಿಕಾರಿಯು ನೇಮಕವಾಗಿ ಅಧಿಕಾರವಹಿಸಿಕೊಳ್ಳುವ ವರೆಗೂ ಅಥವಾ ಒಂದು ವರ್ಷದ ಅವಧಿಯು ಮುಕ್ತಾಯವಾಗುವ ವರೆಗೂ, ಇವುಗಳಲ್ಲಿ ಯಾವುದು ಮೊದಲೋ ಆ ವರೆಗೆ ಪದದಲ್ಲಿ ಮುಂದುವರಿಯತಕ್ಕದ್ದು.

(2) ಹಣಕಾಸು ಅಧಿಕಾರಿಯ ಸ್ಥಾನವು ಖಾಲಿಯಾಗಿದ್ದಾಗ ಅಥವಾ ಅನಾರೋಗ್ಯ, ಗೈರು ಹಾಜರಿ ಅಥವಾ ಯಾವುದೇ ಇತರ ಕಾರಣದಿಂದ ತಮ್ಮ ಅಧಿಕಾರ ಸ್ಥಾನದ ಕರ್ತವ್ಯಗಳನ್ನು ನಿರ್ವಹಿಸಲು ಅಸಮರ್ಥರಾದಾಗ, ಹಣಕಾಸು ಅಧಿಕಾರಿಯ ಕರ್ತವ್ಯಗಳನ್ನು ಈ ಉದ್ದೇಶಕ್ಕಾಗಿ ಕುಲಪತಿಯವರು ನೇಮಕಮಾಡಬಹುದಾದಂಥ ವ್ಯಕ್ತಿಯು ನೆರವೇರಿಸತಕ್ಕದ್ದು.

(3) ಹಣಕಾಸು ಅಧಿಕಾರಿಯು, ಹಣಕಾಸು ಸಮಿತಿಯ ಪದನಿಮಿತ್ತ ಕಾರ್ಯದರ್ಶಿಯಾಗಿರತಕ್ಕದ್ದು, ಆದರೆ ಅವರು ಆ ಸಮಿತಿಯ ಸದಸ್ಯರೆಂದು ಭಾವಿಸತಕ್ಕದ್ದಲ್ಲ ;

(4) (ಎ) ಹಣಕಾಸು ಅಧಿಕಾರಿಯು, ವಿಶ್ವವಿದ್ಯಾಲಯದ ನಿಧಿಗಳ ಮೇಲೆ ಸಾಮಾನ್ಯ ಮೇಲ್ವಿಚಾರಣೆ ನಡೆಸತಕ್ಕದ್ದು ಮತ್ತು ವಿಶ್ವವಿದ್ಯಾಲಯಕ್ಕೆ ಅದರ ಹಣಕಾಸು ನೀತಿಯ ಸಂಬಂಧದಲ್ಲಿ ಸಲಹೆ ನೀಡತಕ್ಕದ್ದು ; ಮತ್ತು

(ಬಿ) ನಿಯಮಿಸಬಹುದಾದಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು :

ಪರಂತು, ಹಣಕಾಸು ಅಧಿಕಾರಿಯು, ಪ್ರಶಾಸನ ಸಭೆಯ ಪೂರ್ವಾನುಮತಿಯಿಲ್ಲದೇ ನಿಯಮಿಸಬಹುದಾದಂಥ ಮೊತ್ತಕ್ಕೆ ಮೀರಿ ಯಾವುದೇ ವೆಚ್ಚವನ್ನು ವಹಿಸತಕ್ಕದ್ದಲ್ಲ ಅಥವಾ ಯಾವುದೇ ಹೂಡಿಕೆ ಮಾಡತಕ್ಕದ್ದಲ್ಲ

(5) ಪ್ರಶಾಸನ ಸಭೆಯ ನಿಯಂತ್ರಣಕ್ಕೊಳಪಟ್ಟು ಹಣಕಾಸು ಅಧಿಕಾರಿಯು,–

(ಎ) ನ್ಯಾಸದ ಮತ್ತು ದತ್ತಿ ನೀಡಲಾದ ಸ್ವತ್ತು ಒಳಗೊಂಡಂತೆ ವಿಶ್ವವಿದ್ಯಾಲಯದ ಸ್ವತ್ತನ್ನು ಮತ್ತು ಹೂಡಿಕೆಗಳನ್ನು ಧಾರಣಮಾಡತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು.

(ಬಿ) ಒಂದು ವರ್ಷಕ್ಕಾಗಿ ಆವರ್ತಕ ಮತ್ತು ಅನಾವರ್ತಕ ವೆಚ್ಚಗಳು ಪ್ರಶಾಸನ ಸಭೆಯು ನಿಗದಿಪಡಿಸಿದ ಪರಿಮಿತಿಗಳನ್ನು ಮೀರದಂತೆ ಮತ್ತು ಯಾವ ಉದ್ದೇಶಕ್ಕಾಗಿ ಆ ಹಣವನ್ನು ಮಂಜೂರುಮಾಡಲಾಗಿತ್ತೋ ಅಥವಾ ಹಂಚಿಕೆಮಾಡಲಾಗಿತ್ತೋ ಅದಕ್ಕಾಗಿ ಬಳಸುವಂತೆ ನೋಡಿಕೊಳ್ಳತಕ್ಕದ್ದು.

(ಸಿ) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕಗಳು ಆರ್ಥಿಕ ಅಂದಾಜುಗಳು ಮತ್ತು ಬಜೆಟ್‌ಅನ್ನು ಸಿದ್ಧಪಡಿಸುವುದಕ್ಕೆ ಮತ್ತು ಅದನ್ನು ಪ್ರಶಾಸನ ಸಭೆಯ ಮುಂದೆ ಮಂಡಿಸುವುದಕ್ಕೆ ಜಬಾಬ್ದಾರರಾಗಿರತಕ್ಕದ್ದು.

(ಡಿ) ನಗದು ಮತ್ತು ಬ್ಯಾಂಕ್ ಶಿಲ್ಕು ಮತ್ತು ಹೂಡಿಕೆಗಳ ಮೇಲೆ ನಿರಂತರ ಗಮನವಿಡತಕ್ಕದ್ದು.

(ಇ) ರಾಜಸ್ವ ಸಂಗ್ರಹಣೆಯ ಪ್ರಗತಿಯನ್ನು ಮತ್ತು ಅನುಸರಿಸಬೇಕಾದ ಸಂಗ್ರಹಣಾವಿಧಾನಗಳ ಮೇಲೆ ಗಮನವಿಡತಕ್ಕದ್ದು.

(ಎಫ್) ಕಟ್ಟಡಗಳ, ಭೂಮಿಯ, ಪೀಠೋಪಕರಣಗಳ ಮತ್ತು ಸಲಕರಣೆಗಳ ರಿಜಿಸ್ಟರುಗಳನ್ನು ಇಂದೀಕರಿಸಿ ನಿರ್ವಹಿಸತಕ್ಕದ್ದು ಮತ್ತು ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ಎಲ್ಲ ಕಛೇರಿಗಳಲ್ಲಿ ಮತ್ತು ಇತರ ಸ್ಥಳಗಳಲ್ಲಿ ಸಲಕರಣೆಗಳ ಮತ್ತು ಇತರ ಬಳಕೆವಸ್ತುಗಳ ದಾಸ್ತಾನು ಪರೀಕ್ಷೆ ಮಾಡುವಂತೆ ನೋಡಿಕೊಳ್ಳತಕ್ಕದ್ದು.

(ಜಿ) ಯಾವುದೇ ಅನಧಿಕೃತ ವೆಚ್ಚದ ಬಗ್ಗೆ ಅಥವಾ ಇತರ ಹಣಕಾಸು ಅಕ್ರಮಗಳ ಬಗ್ಗೆ ಕುಲಪತಿಯವರ ಗಮನಕ್ಕೆ ತರತಕ್ಕದ್ದು ಮತ್ತು ತಪ್ಪಿತಸ್ಥ ವ್ಯಕ್ತಿಗಳ ವಿರುದ್ಧ ಸೂಕ್ತ ಕ್ರಮಕೈಗೊಳ್ಳುವುದಕ್ಕೆ ಸಲಹೆ ನೀಡತಕ್ಕದ್ದು ; ಮತ್ತು

(ಎಚ್) ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ಯಾವುದೇ ಕಛೇರಿ ಅಥವಾ ಇತರ ಸ್ಥಳದಿಂದ ತನ್ನ ಕರ್ತವ್ಯಗಳನ್ನು ನೆರವೇರಿಸುವುದಕ್ಕಾಗಿ ತಾನು ಅಗತ್ಯವೆಂದು ಭಾವಿಸಬಹುದಾದ ಮಾಹಿತಿ ಅಥವಾ ವಿವರಣಾ ಪಟ್ಟಿಗಳನ್ನು ಕೇಳಿ ತರಿಸಿಕೊಳ್ಳತಕ್ಕದ್ದು.

(6) ವಿಶ್ವವಿದ್ಯಾನಿಲಯಕ್ಕೆ ಸಂದಾಯವಾಗತಕ್ಕ ಯಾವುದೇ ಹಣಕ್ಕಾಗಿ ಹಣಕಾಸು ಅಧಿಕಾರಿಯ ಅಥವಾ ಪ್ರಶಾಸನ ಸಭೆಯು ಈ ಸಂಬಂಧದಲ್ಲಿ ವಿಧ್ಯುಕ್ತವಾಗಿ ಪ್ರಾಧೀಕರಿಸಿದ ವ್ಯಕ್ತಿಯು ಅಥವಾ ವ್ಯಕ್ತಿಗಳು ನೀಡಿದ ರಸೀದಿಗಳು ಅಂಥ ಹಣದ ಸಂದಾಯವಾಗಿರುವುದಕ್ಕೆ ಪರ್ಯಾಪ್ತ ತೀರಿಕೆಯಾಗಿರತಕ್ಕದ್ದು.

## ಅಧ್ಯಾಯ – IV

## ವಿಶ್ವವಿದ್ಯಾಲಯದ ಪ್ರಾಧಿಕಾರಗಳು

**19. ವಿಶ್ವವಿದ್ಯಾಲಯದ ಪ್ರಾಧಿಕಾರಗಳು.–** ಪ್ರಶಾಸನ ಸಭೆ, ಪ್ರಶಿಕ್ಷಣ ಪರಿಷತ್ತು, ಫ್ಯಾಕಲ್ಟಿಗಳು ಮತ್ತು ಹಣಕಾಸು ಸಮಿತಿ, ಅಧ್ಯಯನ ಮಂಡಳಿಗಳು, ಮತ್ತು ವಿಶ್ವವಿದ್ಯಾಲಯದ ಪ್ರಾಧಿಕಾರಗಳೆಂದು ಶಾಸನಗಳ ಮೂಲಕ ಘೋಷಿಸಬಹುದಾದಂಥ ಇತರ ಪ್ರಾಧಿಕಾರಗಳು, ವಿಶ್ವವಿದ್ಯಾಲಯದ ಪ್ರಾಧಿಕಾರಗಳಾಗಿರತಕ್ಕದ್ದು.

**20. ಪ್ರಶಾಸನ ಸಭೆ.–** ಕುಲಾಧಿಪತಿಯವರು, ಪ್ರಥಮ ಕುಲಪತಿಯವರ ನೇಮಕವಾದ ಮೇಲೆ ಆದಷ್ಟುಬೇಗನೇ ಈ ಮುಂದಿನ ವ್ಯಕ್ತಿಗಳನ್ನು ಒಳಗೊಂಡ ಪ್ರಶಾಸನಸಭೆಯನ್ನು ರಚಿಸತಕ್ಕದ್ದು, ಎಂದರೆ:–

(ಎ) ಕುಲಪತಿ

(ಬಿ) ಉನ್ನತ ಶಿಕ್ಷಣದ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ ಅಥವಾ ಅವರ ನಾಮನಿರ್ದೇಶಿತರು.

(ಸಿ) ಆರ್ಥಿಕ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ ಅಥವಾ ಅವರ ನಾಮನಿರ್ದೇಶಿತರು.

(ಡಿ) ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ ಅಥವಾ ಅವರ ನಾಮನಿರ್ದೇಶಿತರು.

(ಇ) ಅಧ್ಯಕ್ಷರು, ವಿಶ್ವವಿದ್ಯಾಲಯ ಅನುದಾನ ಆಯೋಗ ಅಥವಾ ಅವರ ನಾಮನಿರ್ದೇಶಿತರು.

(ಎಫ್) ಮಹಾನಿರ್ದೇಶಕರು, ಪುರಾತತ್ವ ಇಲಾಖೆ, ಭಾರತ ಸರ್ಕಾರ

(ಜಿ) ಪ್ರಸಿದ್ಧ ಶಿಕ್ಷಣ ತಜ್ಞರು, ಸಂಗೀತ, ಪ್ರದರ್ಶನಕಲೆಗಳ ಕ್ಷೇತ್ರದ ಮತ್ತು ಇತರ ತತ್ಸಂಬಂಧಿತ ವೃತ್ತಿಗಳ ವ್ಯಕ್ತಿಗಳ ಪೈಕಿಯಿಂದ ಕುಲಾಧಿಪತಿಯವರು ನಾಮನಿರ್ದೇಶಿಸಿದ ಇಬ್ಬರು ಸದಸ್ಯರು, ಇವರ ಪೈಕಿ ಒಬ್ಬರು ಮಹಿಳೆ ಆಗಿರತಕ್ಕದ್ದು.

(ಎಚ್) ಪ್ರಸಿದ್ಧ ಸಂಸ್ಕೃತ ಶಿಕ್ಷಣ ತಜ್ಞರು ಅಥವಾ ಸಂಸ್ಕೃತ ಸಾಹಿತ್ಯಕೃತಿ ರಚಿಸಿದ ಪ್ರಸಿದ್ಧ ವ್ಯಕ್ತಿಗಳು ಮತ್ತು ಪ್ರಶಸ್ತಿ ವಿಜೇತರು ಹಾಗೂ ಇತರ ವೃತ್ತಿಗಳ ವ್ಯಕ್ತಿಗಳಿಂದ ರಾಜ್ಯ ಸರ್ಕಾರವು ನಾಮನಿರ್ದೇಶಿಸಿದ ಆರು ವ್ಯಕ್ತಿಗಳು ಅವರಲ್ಲಿ,–

(vi) ಅನುಸೂಚಿತ ಜಾತಿಗಳು ಅಥವಾ ಅನುಸೂಚಿತ ಬುಡಕಟ್ಟುಗಳಿಗೆ ಸೇರಿದ ಒಬ್ಬ ವ್ಯಕ್ತಿ;

(vii) ಇತರ ಹಿಂದುಳಿದ ವರ್ಗಗಳಿಗೆ ಸೇರಿದ ಒಬ್ಬ ವ್ಯಕ್ತಿ,

(viii) ಒಬ್ಬ ಮಹಿಳೆ

(ix) ಧಾರ್ಮಿಕ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ಒಬ್ಬ ವ್ಯಕ್ತಿ ಮತ್ತು

(x) ಇತರೆ ಇಬ್ಬರು.

– ಇರತಕ್ಕದ್ದು

ಪರಂತು, ಘಟಕ ಕಾಲೇಜಿನಲ್ಲಿ ಅಥವಾ ವಿಶ್ವವಿದ್ಯಾನಿಲಯದಲ್ಲಿ ಯಾವುದೇ ಸಾಮರ್ಥ್ಯದಲ್ಲಿ ನಿಯೋಜಿತನಾದ ಯಾವೊಬ್ಬ ವ್ಯಕ್ತಿಯೂ ನಾಮನಿರ್ದೇಶನಕ್ಕೆ ಅರ್ಹನಾಗಿರತಕ್ಕದ್ದಲ್ಲ.

(ಐ) ಕರ್ನಾಟಕ ವಿಧಾನಸಭೆಯಿಂದ ಮತ್ತು ಕರ್ನಾಟಕ ವಿಧಾನ ಪರಿಷತ್ತಿನಿಂದ ಚುನಾಯಿತರಾದ ಒಬ್ಬೊಬ್ಬ ಸದಸ್ಯರು.

**21. ಪದಾವಧಿ.–** (1) ಈ ಅಧಿನಿಯಮದ ಅಡಿಯಲ್ಲಿಯ ಯಾವುದೇ ಪ್ರಾಧಿಕಾರಗಳಿಗೆ ನಾಮನಿರ್ದೇಶಿತನಾದ ಯಾವೊಬ್ಬ ಸದಸ್ಯನು ಸಂಬಂಧಪಟ್ಟ ನಾಮನಿರ್ದೇಶಿಸುವ ಪ್ರಾಧಿಕಾರದ ಇಷ್ಟಪರ್ಯಂತ ಪದಧಾರಣ ಮಾಡತಕ್ಕದ್ದು. ಈ ಅಧಿನಿಯಮದ ಅಡಿಯಲ್ಲಿಯ ಯಾವುದೇ ಪ್ರಾಧಿಕಾರಗಳಿಗೆ ನಾಮನಿರ್ದೇಶಿತನಾದ ಯಾವೊಬ್ಬ ವ್ಯಕ್ತಿಯು ಎರಡನೇ ಅವಧಿಗಾಗಿ ನಾಮನಿರ್ದೇಶಿತನಾಗುವುದಕ್ಕೆ ಅಥವಾ ಚುನಾಯಿತನಾಗುವುದಕ್ಕೆ ಅರ್ಹನಾಗಿರತಕ್ಕದ್ದಲ್ಲ:

ಪರಂತು, ನಾಮನಿರ್ದೇಶಿತನಾದ ಒಬ್ಬ ಪ್ರಶಾಸನ ಸಭೆಯ ಸದಸ್ಯನು, ಯಾವ ಹುದ್ದೆಯ ಕಾರಣದಿಂದ ತಾನು ಪ್ರಶಾಸನ ಸಭೆಯ ಸದಸ್ಯನಾಗುವನೋ ಅಂಥ ಒಂದು ಹುದ್ದೆಗೆ ತಾತ್ಕಲಿಕವಾಗಿ ನೇಮಕನಾಗಿರುವಲ್ಲಿ ತಾನು ನೇಮಕನಾದ ಹುದ್ದೆಯ ಪ್ರಭಾರವನ್ನು ತೆಗೆದುಕೊಂಡ ದಿನದಿಂದ ಏಳು ದಿನಗಳ ಒಳಗೆ ತಾನು ಸಹಿಮಾಡಿದ ಲಿಖಿತ ನೋಟೀಸನ್ನು ಕುಲಪತಿಯವರಿಗೆ ನೀಡಿ ತನ್ನ ನಾಮ ನಿರ್ದೇಶನದ ಬಲದಿಂದ ಪ್ರಶಾಸನ ಸಭೆಯ ಸದಸ್ಯನಾಗಿ ಮುಂದುವರೆಯುವನೋ ಅಥವಾ ಅಂಥ ಸದಸ್ಯನ ಪದವನ್ನು ಬಿಟ್ಟುಕೊಟ್ಟು ಹುದ್ದೆಯ ಬಲದಿಂದ ಪದನಿಮಿತ್ತ ಸದಸ್ಯನಾಗುವುದನ್ನು ಆಯ್ಕೆ ಮಾಡಿಕೊಳ್ಳುವನೋ ಎಂಬುದನ್ನು ತಿಳಿಸತಕ್ಕದ್ದು ಮತ್ತು ಸದರಿ ಆಯ್ಕೆಯು ಅಂತಿಮವಾಗಿರತಕ್ಕದ್ದು, ಅಂಥ ಆಯ್ಕೆಯನ್ನು ಮಾಡಲು ತಪ್ಪಿದರೆ ಅವನು ನಾಮನಿರ್ದೇಶಿತ ಸದಸ್ಯನಾಗಿ ತನ್ನ ಸ್ಥಾನವನ್ನು ಖಾಲಿಮಾಡಿದ್ದಾನೆಂದು ಭಾವಿಸತಕ್ಕದ್ದು.

(2) ಒಬ್ಬ ವ್ಯಕ್ತಿಯು ಪ್ರಶಾಸನಸಭೆಯ ಸದಸ್ಯನಾಗಿರುವುದು ನಿಂತುಹೋದಾಗ, ಅವನು ಪ್ರಶಾಸನ ಸಭೆಯ ಸದಸ್ಯನಾಗಿರುವ ಬಲದಿಂದ ವಿಶ್ವವಿದ್ಯಾಲಯದ ಯಾವುದೇ ಇತರ ಪ್ರಾಧಿಕಾರದ ಸದಸ್ಯನಾಗಿರುವುದೂ ನಿಂತುಹೋಗತಕ್ಕದ್ದು.

(3) ಪ್ರಶಾಸನ ಸಭೆಯ ಸದಸ್ಯನು, ಅನುಮತಿಸಬಹುದಾದಂಥ ದಿನಭತ್ಯೆ ಮತ್ತು ಪ್ರಯಾಣ ಭತ್ಯೆಗಳ ಹೊರತಾಗಿ ವಿಶ್ವವಿದ್ಯಾನಿಲಯದಿಂದ ಯಾವುದೇ ಸಂಭಾವನೆಯನ್ನು ಸ್ವೀಕರಿಸಲು ಹಕ್ಕುಳ್ಳವನಾಗಿರತಕ್ಕದ್ದಲ್ಲ ;

ಪರಂತು, ಮೂರನೇ ಉಪ ಪ್ರಕರಣದಲ್ಲಿ ಇರುವುದಾವುದು ತಾನು ಧಾರಣಮಾಡಿದ ಹುದ್ದೆಯ ಬಲದಿಂದ ಹಕ್ಕುಳ್ಳವನಾಗಿರುವ ತನ್ನ ಸಾಮಾನ್ಯ ಉಪಲಬ್ಧಿಗಳನ್ನು ಪಡೆದುಕೊಳ್ಳದಂತೆ ಯಾವುಬ್ಬ ಸದಸ್ಯನನ್ನು ತಡೆಯತಕ್ಕದ್ದಲ್ಲ.

(4) ಪದನಿಮಿತ್ತ ಸದಸ್ಯನಲ್ಲದ ಒಬ್ಬ ಪ್ರಶಾಸನಸಭೆಯ ಸದಸ್ಯನು ತನ್ನ ಪದಾವಧಿಯು ಮುಕ್ತಾಯವಾಗುವ ಮೊದಲು ಯಾವುದೇ ಸಮಯದಲ್ಲಿ ತನ್ನ ಸದಸ್ಯತ್ವಕ್ಕೆ ರಾಜೀನಾಮೆ ಸಲ್ಲಿಸಬಹುದು. ಅಂಥ ರಾಜೀನಾಮೆಯನ್ನು ಸದಸ್ಯನು ಲಿಖಿತಪತ್ರದ ಮೂಲಕ ಕುಲಾಧಿಪತಿಯವರಿಗೆ ಕಳುಹಿಸಿಕೊಡತಕ್ಕದ್ದು ಮತ್ತು ರಾಜೀನಾಮೆಯು, ಕುಲಾಧಿಪತಿಯವರು ಅಂಗೀಕರಿಸಿದ ದಿನಾಂಕದಿಂದ ಪರಿಣಾಮಕ್ಕೆ ಬರತಕ್ಕದ್ದು.

(5) ಯಾವುವೇ ಪ್ರಾಧಿಕಾರಗಳಿಗೆ ನಾಮನಿರ್ದೇಶಿತನಾದ ಯಾವೊಬ್ಬ ಸದಸ್ಯನು, ಆತನ ದುರ್ವ್ಯವಹಾರ, ದುರ್ನಡತೆ ಅಥವಾ ಅನ್ಯ ಕಾರಣದ ಮೇಲೆ ಆ ಬಗ್ಗೆ ವಿಚಾರಣೆ ನಡೆಸಿದ ತರುವಾಯ ಕುಲಾಧಿಪತಿಯವರು ಯಾವುದೇ ಸಮಯದಲ್ಲಿ ಸದಸ್ಯತ್ವದಿಂದ ತೆಗೆದುಹಾಕುವುದಕ್ಕೆ ಬದ್ಧನಾಗಿರತಕ್ಕದ್ದು.

**22. ಪ್ರಶಾಸನ ಸಭೆಯ ಅಧಿಕಾರಗಳು.–** ಪ್ರಶಾಸನ ಸಭೆಯು ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು ವಿಶ್ವವಿದ್ಯಾಲಯದ ಆಡಳಿತಾತ್ಮಕ ಕಾರ್ಯನೀತಿಗಳು, ಕಾರ್ಯಕ್ರಮಗಳು ಮತ್ತು ಪ್ರಕಾರ್ಯಗಳ ನಿರ್ವಹಣೆಯ ಪರಿಶೀಲನೆಮಾಡತಕ್ಕದ್ದು, ಮತ್ತು ಈ ಮುಂದಿನ ಅಧಿಕಾರಗಳನ್ನು ಮತ್ತು ಪ್ರಕಾರ್ಯಗಳನ್ನು ಹೊಂದಿರತಕ್ಕದ್ದು, ಎಂದರೆ:–

(1) ವಿಶ್ವವಿದ್ಯಾಲಯದ ಆಡಳಿತಾತ್ಮಕ ಕಾರ್ಯನೀತಿಗಳನ್ನು ಮತ್ತು ಕಾರ್ಯಕ್ರಮಗಳನ್ನು ಮತ್ತು ಕಾರ್ಯ ನಿರ್ವಹಣೆಯನ್ನು ಕಾಲಕಾಲಕ್ಕೆ ಪರಿಶೀಲಿಸುವುದು ಮತ್ತು ವಿಶ್ವವಿದ್ಯಾಲಯದ ಸುಧಾರಣೆಗಾಗಿ ಕ್ರಮಗಳನ್ನು ಸಲಹೆಮಾಡುವುದು ;

(2) ಸಲಹೆಗಾಗಿ ಕಳುಹಿಸಿಕೊಡಬಹುದಾದ ಯಾವುದೇ ವಿಷಯದ ಸಂಬಂಧದಲ್ಲಿ ಕುಲಾಧಿಪತಿಯವರಿಗೆ ಸಲಹೆ ನೀಡುವುದು ;

(3) ಅದು ನಿರ್ಧರಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಉದ್ದೇಶಗಳಿಗಾಗಿ ಇತರೆ ವಿಶ್ವವಿದ್ಯಾಲಯಗಳೊಡನೆ, ಇತರ ಪ್ರಶಿಕ್ಷಣ ಪ್ರಾಧಿಕಾರಗಳೊಡನೆ ಮತ್ತು ಕಾಲೇಜುಗಳೊಡನೆ ಸಹಕರಿಸುವುದು;

(4) ಸಂಸ್ಕೃತ ಭಾಷೆಯಲ್ಲಿ ಮತ್ತು ಸಾಹಿತ್ಯದಲ್ಲಿ ಸಂಶೋಧನೆ ಮುಂದುವರಿಕೆ ಮತ್ತು ಜ್ಞಾನದ ಪ್ರಸಾರಕ್ಕಾಗಿ ಅವಕಾಶ ಕಲ್ಪಿಸುವುದು ;

(5) ವಿಶ್ವವಿದ್ಯಾಲಯಕ್ಕೆ ಅಗತ್ಯವಾದ ಉಪನ್ಯಾಸಕರ, ರೀಡರುಗಳ, ಪ್ರಾಧ್ಯಾಪಕರ ಮತ್ತು ಯಾವುದೇ ಇತರ ಅಧ್ಯಾಪಕ ವರ್ಗದ ಅಥವಾ ಸಂಶೋಧನೆಯ ಹುದ್ದೆಗಳನ್ನು ಪ್ರಾರಂಭಿಸುವುದು ;

(6) ಪದವಿಗಳು, ಡಿಪ್ಲೋಮ ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರಾರಂಭಿಸುವುದು ;

(7) ನಿಯಮಿಸಬಹುದಾದ ಷರತ್ತುಗಳಿಗೊಳಪಟ್ಟು ಸಂಶೋಧನೆ ನಡೆಸುವ ವ್ಯಕ್ತಿಗಳಿಗೆ ಪದವಿಗಳು, ಡಿಪ್ಲೋಮ ಮತ್ತು ಇತರ ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರದಾನಮಾಡುವುದು ;

(8) ಪ್ರಶಾಸನ ಸಭೆಯ ಸದಸ್ಯರ ಪೈಕಿ ಮೂರನೆ ಎರಡಕ್ಕಿಂತ ಕಡಿಮೆಯಿಲ್ಲದ ಸದಸ್ಯರು ಶಿಫಾರಸ್ಸು ಮಾಡಿದ ಗೌರವ ಪದವಿಗಳು ಅಥವಾ ಇತರ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು.

(9) ಶಾಸನಗಳಿಗೆ ಅನುಸಾರವಾಗಿ, ಫೆಲೋಷಿಪ್‌ಗಳು, ವಿದ್ಯಾರ್ಥಿವೇತನಗಳು, ಬರ್ಸರಿಗಳು, ಪ್ರದರ್ಶಿಕೆಗಳು, ಪದಕಗಳು ಮತ್ತು ಪಾರಿತೋಷಕಗಳನ್ನು ಪ್ರಾರಂಭಿಸುವುದು ಮತ್ತು ಅವುಗಳನ್ನು ನೀಡುವುದು.

(10) ವಾರ್ಷಿಕ ವರದಿ, ವಾರ್ಷಿಕ ಲೆಕ್ಕಪತ್ರಗಳು, ಮತ್ತು ಹಣಕಾಸು ಅಂದಾಜುಗಳನ್ನು ಪರಿಗಣಿಸುವುದು ಮತ್ತು ಅವುಗಳ ಬಗ್ಗೆ ತಾನು ಸೂಕ್ತವೆಂದು ಭಾವಿಸಬಹುದಾದಂಥ ಕ್ರಮಕೈಗೊಳ್ಳುವುದು.

(11) ಯಾವುದೇ ಸಂಸ್ಥೆಯ ಆಡಳಿತವನ್ನು ವಹಿಸಿಕೊಳ್ಳುವುದಕ್ಕಾಗಿ ಮತ್ತು ಅದರ ಆಸ್ತಿಗಳನ್ನು ಮತ್ತು ಹೊಣೆಗಾರಿಕೆಗಳನ್ನು ವಹಿಸಿಕೊಳ್ಳುವುದಕ್ಕಾಗಿ ಅಥವಾ ಈ ಅಧಿನಿಯಮದ ಉಪಬಂಧಗಳಿಗೆ ವಿರೋಧವಾಗಿರದ ಯಾವುದೇ ಇತರ ಉದ್ದೇಶಗಳಿಗಾಗಿ ಕೇಂದ್ರ ಅಥವಾ ಯಾವುದೇ ಇತರ ರಾಜ್ಯ ಸರ್ಕಾರದೊಡನೆ ಅಥವಾ ಖಾಸಗಿ ಸಂಸ್ಥೆಯೊಡನೆ ಯಾವುದೇ ಒಪ್ಪಂದ ಮಾಡಿಕೊಳ್ಳುವುದು;

(12) ವಿಶ್ವ ವಿದ್ಯಾಲಯದ ಸ್ವತ್ತುಗಳ ಮತ್ತು ನಿಧಿಗಳನ್ನು ಧಾರಣ ಮಾಡುವುದು, ನಿಯಂತ್ರಿಸುವುದು ಮತ್ತು ಆಡಳಿತ ನಡೆಸುವುದು.

(13) ವಿಶ್ವವಿದ್ಯಾಲಯದ ಸಾಮಾನ್ಯ ಮೊಹರಿನ ಸ್ವರೂಪ, ಅಭಿರಕ್ಷೆ ಮತ್ತು ಬಳಕೆಯನ್ನು ನಿರ್ದೇಶಿಸುವುದು;

(14) ಈ ಅಧಿನಿಯಮಕ್ಕೆ ಮತ್ತು ಶಾಸನಗಳಿಗೆ ಅನುಸಾರವಾಗಿ ವಿಶ್ವವಿದ್ಯಾಲಯಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳನ್ನು ವಿನಿಯಮಗೊಳಿಸುವುದು ಮತ್ತು ನಿರ್ಧರಿಸುವುದು;

(15) ನಿರ್ದಿಷ್ಟ ಉದ್ದೇಶಗಳಿಗಾಗಿ ವಿಶ್ವವಿದ್ಯಾಲಯದ ವಿಲೆಗಾಗಿ ಒಪ್ಪಿಸಿದ ಎಲ್ಲ ಸ್ವತ್ತುಗಳ ಮತ್ತು ಎಲ್ಲ ನಿಧಿಗಳ ಆಡಳಿತ ನಡೆಸುವುದು;

(16) (ಎ) ವಿಶ್ವವಿದ್ಯಾಲಯದ ಉಪನ್ಯಾಸಕರು, ವಿಶ್ವವಿದ್ಯಾಲಯದ ರೀಡರ್‌ಗಳು, ವಿಶ್ವವಿದ್ಯಾಲಯದ ಪ್ರಾಧ್ಯಾಪಕರು, ವಿಶ್ವವಿದ್ಯಾಲಯದ ಸಂಶೋಧಕರು ಮತ್ತು ವಿಶ್ವವಿದ್ಯಾಲಯದ ಅಧ್ಯಾಪಕರನ್ನು ನೇಮಕ ಮಾಡುವುದು ಮತ್ತು ಅವರ ಉಪಲಬ್ದಿಗಳು ಯಾವುದಾದರು ಇದ್ದರೆ ಅದನ್ನು ನಿಗದಿಪಡಿಸುವುದು; ಅವರ ಕರ್ತವ್ಯಗಳನ್ನು ಮತ್ತು ಸೇವಾ ಷರತ್ತುಗಳನ್ನು ನಿರ್ದಿಷ್ಟಪಡಿಸುವುದು ಮತ್ತು ತಾತ್ಕಾಲಿಕ ಖಾಲಿ ಹುದ್ದೆಗಳನ್ನು ಭರ್ತಿ ಮಾಡುವುದು ;

(ಬಿ) ಆಡಳಿತಾತ್ಮಕ ಮತ್ತು ಅದೇರೀತಿಯ ಇತರ ಹುದ್ದೆಗಳ ನೇಮಕದ ವಿಧಾನವನ್ನು ನಿರ್ದಿಷ್ಟಪಡಿಸುವ ಶಾಸನಗಳನ್ನು ರಚಿಸುವುದು ಮತ್ತು ಅವರ ಉಪಲಬ್ಧಿಗಳು ಯಾವುದಾದರೂ ಇದ್ದರೆ ಅವುಗಳನ್ನು ನಿಗದಿಪಡಿಸುವುದು ಅವರ ಕರ್ತವ್ಯಗಳನ್ನು ಮತ್ತು ಸೇವಾ ಷರತ್ತುಗಳನ್ನು ನಿರ್ದಿಷ್ಟಪಡಿಸುವುದು ಮತ್ತು ತಾತ್ಕಾಲಿಕ ಖಾಲಿ ಹುದ್ದೆಗಳನ್ನು ಭರ್ತಿ ಮಾಡುವುದು ;

(17) ವಿಶ್ವವಿದ್ಯಾಲಯದ ಉಪನ್ಯಾಸಕರು, ವಿಶ್ವವಿದ್ಯಾಲಯದ ರೀಡರ್‌ಗಳು, ವಿಶ್ವವಿದ್ಯಾಲಯದ ಪ್ರಾಧ್ಯಾಪಕರು, ವಿಶ್ವವಿದ್ಯಾಲಯದ ಸಂಶೋಧಕರು ಮತ್ತು ವಿಶ್ವವಿದ್ಯಾಲಯದ ಅಧ್ಯಾಪಕರು ಮತ್ತು ವಿಶ್ವವಿದ್ಯಾಲಯದ ಇತರ ನೌಕರರನ್ನು ಅಮಾನತ್ತು ಮಾಡುವುದು ಮತ್ತು ವಜಾಮಾಡುವುದು;

(18) ವಿಶ್ವವಿದ್ಯಾಲಯದ ಪರವಾಗಿ ದತ್ತಿಗಳನ್ನು, ಉಯಿಲುದಾನ, ದೇಣಿಗೆಗಳನ್ನು, ಅನುದಾನಗಳನ್ನು ಮತ್ತು ಅದಕ್ಕೆ ವರ್ಗಾವಣೆ ಮಾಡಿದ ಸ್ಥಿರ ಮತ್ತು ಚರ ಸ್ವತ್ತುಗಳನ್ನು ಸ್ವೀಕರಿಸುವುದು.

(19) (ಎ) ವಿಶ್ವವಿದ್ಯಾಲಯದ ಪರವಾಗಿ ಕೇಂದ್ರ ಅಥವಾ ರಾಜ್ಯ ಸರ್ಕಾರದಿಂದ ಮತ್ತು ವಿಶ್ವವಿದ್ಯಾಲಯದ ಅನುದಾನ ಆಯೋಗದಿಂದ ಅಥವಾ ಸಾರ್ವಜನಿಕರಿಂದ ಅಥವಾ ಕೇಂದ್ರ ಅಥವಾ ರಾಜ್ಯ ಸರ್ಕಾರದ ಸ್ವಾಮ್ಯದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಯಾವುದೇ ನಿಗಮದಿಂದ ಸಾಲಗಳನ್ನು ಎತ್ತುವುದು ;

(ಬಿ) ಸರ್ಕಾರದ ಅನುಮೋದನೆಯೊಡನೆ ವಿಶ್ವವಿದ್ಯಾಲಯದ ಉದ್ದೇಶಕ್ಕಾಗಿ ವಿಶ್ವವಿದ್ಯಾಲಯದ ಭದ್ರತೆ ಮೇಲೆ ಹಣವನ್ನು ಸಾಲವಾಗಿ ಪಡೆಯುವುದು ;

(20) ವಿದ್ಯಾರ್ಥಿನಿಲಯಗಳ ತಪಾಸಣೆಗಾಗಿ ವ್ಯವಸ್ಥೆ ಮಾಡುವುದು ಮತ್ತು ನಿರ್ದೇಶಿಸುವುದು ;

(21) ಶಾಸನಗಳ ಮೂಲಕ ನಿಯಮಿಸಬಹುದಾದಂತಹ ಇತರ ಅಧಿಕಾರಗಳನ್ನು ಚಲಾಯಿಸುವುದು ಮತ್ತು ಅಂಥ ಪ್ರಕಾರ್ಯಗಳನ್ನು ನೆರವೇರಿಸುವುದು ;

(22) ಶಾಸನಗಳನ್ನು ರಚಿಸುವುದು ಅಥವಾ ಶಾಸನಗಳನ್ನು ತಿದ್ದುಪಡಿ ಮಾಡುವುದು ಅಥವಾ ನಿರಸನಗೊಳಿಸುವುದು;

**23. ಪ್ರಶಾಸನ ಸಭೆಯ ಸಭೆಗಳು: (1)** ಪ್ರಶಾಸನ ಸಭೆಯು ಪ್ರತಿಯೊಂದು ವರ್ಷದಲ್ಲಿ ಕುಲಾಧಿಪತಿಯವರು ನಿಗದಿಪಡಿಸುವ ದಿನಾಂಕದಂದು ಕೊನೆಯ ಪಕ್ಷ ಮೂರುಸಲವಾದರೂ ಸಭೆ ಸೇರತಕ್ಕದ್ದು. ಅಂಥ ಸಭೆಗಳಲ್ಲಿ ಒಂದನ್ನು ವಾರ್ಷಿಕ ಸಭೆ ಎಂದು ಕರೆಯತಕ್ಕದ್ದು. ಪ್ರಶಾಸನ ಸಭೆಯು ತಾನು ಕಾಲಕಾಲಕ್ಕೆ ನಿರ್ಧರಿಸಬಹುದಾದಂತಹ ಇತರ ಸಮಯಗಳಲ್ಲಿ ಸಭೆ ಸೇರಬಹುದು;

(2) ಒಟ್ಟು ಸದಸ್ಯರ ಸಂಖ್ಯೆಯ ಮೂರನೇ ಒಂದರಷ್ಟು ಸದಸ್ಯರು ಪ್ರಶಾಸನ ಸಭೆಯ ಕೋರಂ ಆಗಿರತಕ್ಕದ್ದು ;

ಪರಂತು ಅಂಥ ಕೋರಂ, ವಿಶ್ವವಿದ್ಯಾಲಯದ ಘಟಿಕೋತ್ಸವದ ಸಭೆಗಾಗಿ ಪದವಿ ಡಿಪ್ಲೋಮಾ ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳ ಪ್ರಧಾನ ಮಾಡುವ ಉದ್ದೇಶಕ್ಕಾಗಿ ನಡೆದ ಪ್ರಶಾಸನ ಸಭೆಯಲ್ಲಿ ಅಗತ್ಯವಿರತಕ್ಕದ್ದಲ್ಲ;

**(3)** ಕುಲಾಧಿಪತಿಯವರು, ಅವರು ಸೂಕ್ತವೆಂದು ಭಾವಿಸಿದಾಗ ಮತ್ತು ಪ್ರಶಾಸನ ಸಭೆಯ ಸದಸ್ಯರ ಶೇಕಡಾ ಐವತ್ತಕ್ಕೆ ಕಡಿಮೆ ಅಲ್ಲದಷ್ಟು ಸದಸ್ಯರು ಸಹಿಮಾಡಿ ಲಿಖಿತದಲ್ಲಿ ನೀಡಿದ ಕೋರಿಕೆಯ ಮೇರೆಗೆ ಪ್ರಶಾಸನ ಸಭೆಯ ವಿಶೇಷ ಸಭೆಯನ್ನು ಕರೆಯಬಹುದು ;

**24. ಪ್ರಶಿಕ್ಷಣ ಪರಿಷತ್ತು:** (1) ಕುಲಾಧಿಪತಿಯವರು, ಪ್ರಥಮ ಕುಲಪತಿಯವರ ನೇಮಕವಾದ ಕೂಡಲೆ ಪ್ರಶಿಕ್ಷಣ ಪರಿಷತ್ತನ್ನು ರಚಿಸತಕ್ಕದ್ದು.

(2) ಪ್ರಶಿಕ್ಷಣ ಪರಿಷತ್ತು ಕುಲಪತಿಯವರ ಜೊತೆಗೆ ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು ಎಂದರೆ:–

(ಎ) ಉನ್ನತ ಶಿಕ್ಷಣದ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ;

(ಬಿ) ಆರ್ಥಿಕ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ.

(ಸಿ) ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಭಾರ ಹೊಂದಿರುವ ಸರ್ಕಾರದ ಕಾರ್ಯದರ್ಶಿ.

(ಡಿ) ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

(ಇ) ಫ್ಯಾಕಲ್ಟಿಗಳ ಡೀನರು.

(ಎಫ್) ಸರ್ಕಾರವು ನಾಮ ನಿರ್ದೇಶನ ಮಾಡಿದ ಗೇಯ ಸಂಗೀತ, ಪ್ರದರ್ಶಕ ಕಲೆಗಳು, ವಾದ್ಯ ಸಂಗೀತ ಮತ್ತು ಸಂಗೀತ ಶಾಸ್ತ್ರದ ಕ್ಷೇತ್ರಗಳಲ್ಲಿ ಅಸಾಧಾರಣ ಕೊಡುಗೆ ನೀಡಿರುವಂಥ ಖ್ಯಾತ ನಾಮರಾದ ಎಂಟು ಜನರು. ಅವರಲ್ಲಿ ಒಬ್ಬರು ಪರಿಶಿಷ್ಟಜಾತಿಗೆ ಸೇರಿದವರಾಗಿರತಕ್ಕದ್ದು ಇನ್ನೊಬ್ಬರು ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರತಕ್ಕದ್ದು, ಒಬ್ಬರು ಮಹಿಳೆಯಾಗಿರತಕ್ಕದ್ದು ಒಬ್ಬರು ಮತೀಯ ಆಧಾರದ ಮೇಲೆ ಅಲ್ಪಸಂಖ್ಯಾತರಾಗಿರತಕ್ಕದ್ದು ಮತ್ತು ಒಬ್ಬರು ಸರ್ಕಾರವು ನಿರ್ದಿಷ್ಟಪಡಿಸಿದ ಹಿಂದುಳಿದ ವರ್ಗಗಳಿಗೆ ಸೇರಿದವರಾಗಿರತಕ್ಕದ್ದು.

(3) ಕುಲಪತಿಯವರು ಪ್ರಶಿಕ್ಷಣ ಪರಿಷತ್ತಿನ ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು.

(4) ಶಿಕ್ಷಣ ಇಲಾಖೆ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ ಅಥವಾ ಆರ್ಥಿಕ ಇಲಾಖೆ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ ಅಥವಾ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಭಾರದಲ್ಲಿರುವ ಕಾರ್ಯದರ್ಶಿ ಇವರು ಯಾವುದೇ ಕಾರಣಕ್ಕಾಗಿ ಪ್ರಶಿಕ್ಷಣ ಪರಿಷತ್ತಿನ ಸಭೆಗಳಿಗೆ ಹಾಜರಾಗಲು ಸಾಧ್ಯವಾಗದ ಸಂದರ್ಭದಲ್ಲಿ ಸರ್ಕಾರದ ಉಪ ಕಾರ್ಯದರ್ಶಿಯ ದರ್ಜೆಗೆ ಕಡಿಮೆಯಲ್ಲದ ತನ್ನ ಇಲಾಖೆಯ ಯಾವೊಬ್ಬ ಅಧಿಕಾರಿಯನ್ನು ಪ್ರತಿನಿಯೋಜಿಸಬಹುದು.

(5) ಈ ಅಧಿನಿಯಮದ ಅಡಿಯಲ್ಲಿಯ ಯಾವುದೇ ಪ್ರಾಧಿಕಾರಗಳಿಗೆ ನಾಮನಿರ್ದೇಶಿತನಾದ ಯಾವೊಬ್ಬ ಸದಸ್ಯನು ಸಂಬಂಧಪಟ್ಟ ನಾಮನಿರ್ದೇಶಿಸುವ ಪ್ರಾಧಿಕಾರದ ಇಷ್ಟಪರ್ಯಂತ ಪದಧಾರಣ ಮಾಡತಕ್ಕದ್ದು. ಈ ಅಧಿನಿಯಮದ ಅಡಿಯಲ್ಲಿಯ ಯಾವುದೇ ಪ್ರಾಧಿಕಾರಗಳಿಗೆ ನಾಮನಿರ್ದೇಶಿತನಾದ ಯಾವೊಬ್ಬ ವ್ಯಕ್ತಿಯು ಎರಡನೇ ಅವಧಿಗಾಗಿ ನಾಮನಿರ್ದೇಶಿತನಾಗುವುದಕ್ಕೆ ಅಥವಾ ಚುನಾಯಿತನಾಗುವುದಕ್ಕೆ ಅರ್ಹನಾಗಿರತಕ್ಕದ್ದಲ್ಲ ;

ಪರಂತು, ನಾಮನಿರ್ದೇಶಿತನಾದ ಒಬ್ಬ ಪ್ರಶಿಕ್ಷಣ ಪರಿಷತ್ತಿನ ಸದಸ್ಯನು, ಯಾವ ಹುದ್ದೆಯ ಕಾರಣದಿಂದ ತಾನು ಪ್ರಶಿಕ್ಷಣ ಪರಿಷತ್ತಿನ ಸದಸ್ಯನಾಗುವನೋ ಅಂಥ ಒಂದು ಹುದ್ದೆಗೆ ತಾತ್ಕಾಲಿಕವಾಗಿ ನೇಮಕನಾದಲ್ಲಿ, ತಾನು ನೇಮಕನಾದ ಹುದ್ದೆಯ ಪ್ರಭಾರವನ್ನು ತೆಗೆದುಕೊಂಡ ದಿನದಿಂದ ಏಳು ದಿನಗಳ ಒಳಗೆ, ತಾನು ಸಹಿಮಾಡಿದ ಲಿಖಿತ ನೋಟೀಸನ್ನು

ಕುಲಪತಿಯವರಿಗೆ ನೀಡಿ, ತನ್ನ ನಾಮ ನಿರ್ದೇಶನದ ಬಲದಿಂದ ಪ್ರಶಿಕ್ಷಣ ಪರಿಷತ್ತಿನ ಸದಸ್ಯನಾಗಿ ಮುಂದುವರೆಯುವನೇ ಅಥವಾ ಅಂಥ ಸದಸ್ಯನ ಪದವನ್ನು ಬಿಟ್ಟುಕೊಟ್ಟು ಹುದ್ದೆಯ ಬಲದಿಂದ ಪದನಿಮಿತ್ತ ಸದಸ್ಯನಾಗುವುದನ್ನು ಆಯ್ಕೆ ಮಾಡಿಕೊಳ್ಳುವನೇ ಎಂಬುದನ್ನು ತಿಳಿಸತಕ್ಕದ್ದು ಮತ್ತು ಸದರಿ ಆಯ್ಕೆಯು ಅಂತಿಮವಾಗಿರತಕ್ಕದ್ದು, ಅಂಥ ಆಯ್ಕೆಯನ್ನು ಮಾಡಲು ತಪ್ಪಿದರೆ ಅವನು ನಾಮನಿರ್ದೇಶಿತ ಸದಸ್ಯನಾಗಿ ತನ್ನ ಸ್ಥಾನವನ್ನು ಖಾಲಿಮಾಡಿದ್ದಾನೆಂದು ಭಾವಿಸತಕ್ಕದ್ದು.

(6) ಒಬ್ಬ ವ್ಯಕ್ತಿಯು ಪ್ರಶಿಕ್ಷಣ ಪರಿಷತ್ತಿನ ಸದಸ್ಯನಾಗಿರುವುದು ನಿಂತುಹೋದಾಗ, ಅವನು ಪ್ರಶಿಕ್ಷಣ ಪರಿಷತ್ತಿನ ಸದಸ್ಯನಾಗಿರುವ ಬಲದಿಂದ ವಿಶ್ವವಿದ್ಯಾಲಯದ ಯಾವುದೇ ಇತರ ಪ್ರಾಧಿಕಾರದ ಸದಸ್ಯನಾಗಿರುವುದೂ ನಿಂತುಹೋಗತಕ್ಕದ್ದು.

(7) ಪ್ರಶಿಕ್ಷಣ ಪರಿಷತ್ತಿನ ಸದಸ್ಯನು, ಅನುಮತಿಸಬಹುದಾದಂಥ ದಿನಭತ್ಯೆ ಮತ್ತು ಪ್ರಯಾಣ ಭತ್ಯೆಗಳ ಹೊರತಾಗಿ ವಿಶ್ವವಿದ್ಯಾನಿಲಯದಿಂದ ಯಾವುದೇ ಸಂಭಾವನೆಯನ್ನು ಸ್ವೀಕರಿಸಲು ಹಕ್ಕುಳ್ಳವನಾಗಿರತಕ್ಕದ್ದಲ್ಲ ;

ಪರಂತು, ಮೂರನೇ ಉಪ ಪ್ರಕರಣದಲ್ಲಿ ಇರುವುದಾವುದು ತಾನು ಧಾರಣಮಾಡಿದ ಹುದ್ದೆಯ ಬಲದಿಂದ ಹಕ್ಕುಳ್ಳವನಾಗಿರುವ ತನ್ನ ಸಾಮಾನ್ಯ ಉಪಲಬ್ಧಿಗಳನ್ನು ಪಡೆದುಕೊಳ್ಳದಂತೆ ಯಾವೊಬ್ಬ ಸದಸ್ಯನನ್ನು ತಡೆಯತಕ್ಕದ್ದಲ್ಲ.

(8) ಪದನಿಮಿತ್ತ ಸದಸ್ಯನಲ್ಲದ ಒಬ್ಬ ಪ್ರಶಿಕ್ಷಣ ಪರಿಷತ್ತಿನ ಸದಸ್ಯನು ತನ್ನ ಪದಾವಧಿಯು ಮುಕ್ತಾಯವಾಗುವ ಮೊದಲು ಯಾವುದೇ ಸಮಯದಲ್ಲಿ ತನ್ನ ಸದಸ್ಯತ್ವಕ್ಕೆ ರಾಜೀನಾಮೆ ಸಲ್ಲಿಸಬಹುದು. ಅಂಥ ರಾಜೀನಾಮೆಯನ್ನು ಸದಸ್ಯನು ಲಿಖಿತಪತ್ರದ ಮೂಲಕ ಕುಲಾಧಿಪತಿಯವರಿಗೆ ಕಳುಹಿಸಿಕೊಡತಕ್ಕದ್ದು ಮತ್ತು ರಾಜೀನಾಮೆಯು, ಕುಲಾಧಿಪತಿಯವರು ಅಂಗೀಕರಿಸಿದ ದಿನಾಂಕದಿಂದ ಪರಿಣಾಮಕ್ಕೆ ಬರತಕ್ಕದ್ದು.

**25. ಪ್ರಶಿಕ್ಷಣ ಪರಿಷತ್ತಿನ ಅಧಿಕಾರಗಳು:** ಪ್ರಶಿಕ್ಷಣ ಪರಿಷತ್ತು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು ಎಂದರೆ,–

(1) ಅಧ್ಯಾಪಕ ವಿದ್ಯಾರ್ಹತೆಗಳನ್ನು ನೇಮಿಸುವುದು.

(2) ನಿಯಮಿಸಬಹುದಾದಂಥ ಶುಲ್ಕಗಳನ್ನು ವಿಧಿಸುವುದು ಮತ್ತು ಸಂಗ್ರಹಿಸುವುದು.

(3) ಶಾಸನಗಳಿಗನುಸಾರವಾಗಿ ವಿಶ್ವವಿದ್ಯಾಲಯಕ್ಕೆ ವಿದ್ಯಾರ್ಥಿಗಳಿಗೆ ಪ್ರವೇಶ ನೀಡುವುದನ್ನು ನಿಯಂತ್ರಿಸುವುದು.

(4) ಅಧ್ಯಯನ ಮಂಡಳಿಗಳಿಗೆ ಸದಸ್ಯರನ್ನು ನೇಮಕ ಮಾಡುವುದು.

(5) (ಎ) ಶಾಸನಗಳಲ್ಲಿ ಹೇಳಿದ ಕಾರ್ಯವಿಧಾನಕ್ಕೆ ಅನುಸಾರವಾಗಿ ಮಂಡಳಿಗಳ ಶಿಫಾರಸ್ಸನ್ನು ಪರಿಗಣಿಸಿದ ತರುವಾಯ ರೆಫರಿ ಮತ್ತು ಪರೀಕ್ಷಕರನ್ನು ನೇಮಕ ಮಾಡುವುದು.

(ಬಿ) ಅವರ ಸಂಭಾವನೆಗಳನ್ನು ನಿಗದಿಪಡಿಸುವುದು.

(6) ವಿಶ್ವವಿದ್ಯಾಲಯದ ನಿವಾಸದ ಮತ್ತು ಶಿಸ್ತಿನ ಮೇಲ್ವಿಚಾರಣೆ ಮತ್ತು ನಿಯಂತ್ರಣ ಮತ್ತು ಅವರ ಆರೋಗ್ಯ ಮತ್ತು ಕ್ಷೇಮವನ್ನು ತಿಳಿದುಕೊಳ್ಳುವುದಕ್ಕಾಗಿ ವ್ಯವಸ್ಥೆ ಮಾಡುವುದು.

(7) ವಿಶ್ವವಿದ್ಯಾಲಯಗಳು ಸ್ಥಾಪಿಸಿದ ಮತ್ತು ನಿರ್ವಹಿಸುತ್ತಿರುವ ಗ್ರಂಥಾಲಯಗಳು, ವಸ್ತು ಸಂಗ್ರಹಾಲಯಗಳು, ಸಂಶೋಧನಾ ಸಂಸ್ಥೆಗಳು ಮತ್ತು ಇತರೆ ಸಂಸ್ಥೆಗಳನ್ನು ಪ್ರಾರಂಭಿಸುವುದು ಮತ್ತು ನಿರ್ವಹಿಸುವುದು;

(8) ವಿಶ್ವವಿದ್ಯಾಲಯವು ಪ್ರಾರಂಭಿಸಿದ ವಿದ್ಯಾರ್ಥಿನಿಲಯಗಳನ್ನು ನಿರ್ವಹಿಸುವುದು;

(9) ವಿಶ್ವವಿದ್ಯಾಲಯವು ಪ್ರಾರಂಭಿಸಿದ ಯಾವುದೇ ಪ್ರಕಟಣಾ ಬ್ಯೂರೋವನ್ನು ನಿರ್ವಹಿಸುವುದು;

(10) ವಿಶ್ವವಿದ್ಯಾಲಯದೊಳಗೆ ಸಂಶೋಧನೆಗೆ ಉತ್ತೇಜಿಸುವುದು; ಮತ್ತು ಅಂಥ ಸಂಶೋಧನೆಯ ವರದಿಗಳನ್ನು ಕಾಲಕಾಲಕ್ಕೆ ಪಡೆದುಕೊಳ್ಳುವುದು;

(11) ಶೈಕ್ಷಣಿಕ ವಿಷಯಕ್ಕೆ ಸಂಬಂಧಪಟ್ಟ ವಿಷಯಗಳನ್ನು ವಿನಿಯಮಗೊಳಿಸುವುದು;

(12) ಅಧ್ಯಯನ ವ್ಯಾಸಂಗ ಕ್ರಮಗಳನ್ನು ವಿನಿಯಮಗೊಳಿಸುವುದು;

(13) ವಿದ್ಯಾರ್ಥಿಗಳನ್ನು ಪರೀಕ್ಷೆಗಳಿಗೆ, ಪದವಿಗಳಿಗೆ, ಡಿಪ್ಲೋಮಗಳಿಗೆ, ಪ್ರಮಾಣಪತ್ರ ಕೋರ್ಸುಗಳಿಗೆ ಅಥವಾ ಇತರ ಶೈಕ್ಷಣಿಕ ಪ್ರಶಸ್ತಿಗಳಿಗೆ ಪ್ರವೇಶ ನೀಡತಕ್ಕ ವಿಷಯದ ಬಗ್ಗೆ ಪರೀಕ್ಷಾ ಯೋಜನೆಯನ್ನು ಮತ್ತು ಷರತ್ತುಗಳನ್ನು ವಿನಿಯಮಗೊಳಿಸುವುದು;

(14) ವಿಶ್ವವಿದ್ಯಾಲಯದ ವಿವಿಧ ಪರೀಕ್ಷೆಗಳ ಫಲಿತಾಂಶಗಳ ಘೋಷಣೆಯನ್ನು ವಿನಿಯಮಗೊಳಿಸುವುದು;

(15) ಕಾಲೇಜುಗಳಲ್ಲಿ ಮತ್ತು ಮಾನ್ಯತೆ ಪಡೆದ ಸಂಸ್ಥೆಗಳಲ್ಲಿ ಅಧ್ಯಯನ ಮತ್ತು ಬೋಧನೆಯನ್ನು ಸಮನ್ವಯಗೊಳಿಸುವುದನ್ನು ವಿನಿಯಮಗೊಳಿಸುವುದು;

(16) ವಿಶ್ವವಿದ್ಯಾಲಯದಲ್ಲಿ ಸಂಶೋಧನೆಗೆ ಉತ್ತೇಜನ ನೀಡುವುದಕ್ಕಾಗಿ ಮತ್ತು ಇತರ ವಿಶೇಷ ಅಧ್ಯಯನಗಳನ್ನು ಉತ್ತೇಜಿಸುವುದಕ್ಕಾಗಿ ಯೋಜನೆಗಳನ್ನು ರೂಪಿಸುವುದು;

(17) ಫ್ಯಾಕಲ್ಟಿಗಳಿಗೆ ವಿಷಯಗಳನ್ನು ಹಂಚಿಕೆ ಮಾಡುವುದಕ್ಕಾಗಿ ಪ್ರಸ್ತಾವಗಳನ್ನು ಮಾಡುವುದು ಮತ್ತು ತನ್ನ ಸದಸ್ಯರುಗಳನ್ನು ಫ್ಯಾಕಲ್ಟಿಗಳಿಗೆ ವಹಿಸಿಕೊಡುವುದು;

(18) ಪರೀಕ್ಷೆಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಸಂಬಂಧಪಟ್ಟಂತೆ ವಿನಾಯತಿ ನೀಡುವುದಕ್ಕಾಗಿ ಮಾನದಂಡಗಳನ್ನು ನಿರ್ಧರಿಸುವುದು;

(19) ವಿಶ್ವವಿದ್ಯಾಲಯವು ಅಗತ್ಯಪಡಿಸಿದ ಪ್ರಾಧ್ಯಾಪಕರ, ರೀಡರುಗಳ, ಉಪನ್ಯಾಸಕರ, ಮತ್ತು ಇತರ ಅಧ್ಯಾಪಕರ ಹುದ್ದೆಗಳನ್ನು ಪ್ರಾರಂಭಿಸುವುದಕ್ಕಾಗಿ ಮತ್ತು ಅಂಥ ಹುದ್ದೆಗಳಿಗಾಗಿ ಕರ್ತವ್ಯಗಳನ್ನು ನಿಯಮಿಸುವುದಕ್ಕಾಗಿ ಪ್ರಸ್ತಾವಗಳನ್ನು ಮಾಡುವುದು;

(20) ಫೆಲೋಶಿಪ್‌ಗಳು, ಟ್ರಾವಲಿಂಗ್ ಫೆಲೋಶಿಪ್, ವಿದ್ಯಾರ್ಥಿವೇತನಗಳು, ಶಿಷ್ಯವೇತನಗಳು, ಅಥವಾ ಪ್ರಶಸ್ತಿಗಳನ್ನು ಪ್ರಾರಂಭಿಸುವುದು ಮತ್ತು ನೀಡುವುದಕ್ಕಾಗಿ ಪ್ರಸ್ತಾವಗಳನ್ನು ಮಾಡುವುದು;

(21) ಪರೀಕ್ಷೆಗಳ ಸಮತೆಯನ್ನು ನಿಯಮಿಸುವುದಕ್ಕಾಗಿ ವಿನಿಯಮಗೊಳಿಸುವುದು;

(22) ಪದವಿಗಳು, ಡಿಪ್ಲೋಮಗಳು ಮತ್ತು ಇತರೆ ಶೈಕ್ಷಣಿಕ ಪ್ರಶಸ್ತಿಗಳಿಗಾಗಿ ಅರ್ಹತೆ ನೀಡುವ ಸಂಬಂಧದಲ್ಲಿ ವಿಶ್ವವಿದ್ಯಾಲಯದಲ್ಲಿ ಅನುಮೋದಿತ ಅಧ್ಯಯನ ವ್ಯಾಸಂಗ ಕ್ರಮಗಳಿಂದ ವಿನಾಯಿತಿ ನೀಡುವುದನ್ನು ವಿನಿಯಮಗೊಳಿಸುವುದು;

(23) ಸಂಶೋಧನೆಗಾಗಿ ಮತ್ತು ಕಲಿಕೆಯ ಮುಂದುವರಿಕೆಗೆ ಮತ್ತು ಪ್ರಸಾರಕ್ಕಾಗಿ ಸೂಕ್ತವಾಗಬಹುದಾದಂಥ ಕಲಿಕೆ ಮತ್ತು ಅಧ್ಯಯನ ವ್ಯಾಸಂಗ ಕ್ರಮಗಳ ಶಾಖೆಗಳಲ್ಲಿ ಶಿಕ್ಷಣ, ಬೋಧನೆ ಮತ್ತು ತರಬೇತಿಗಾಗಿ ಅವಕಾಶ ಕಲ್ಪಿಸುವುದು;

(24) ಮಾನ್ಯತೆ ಪಡೆದ ಸಂಸ್ಥೆಗಳು ವ್ಯಾಸಂಗವಿಷಯಗಳಲ್ಲಿ ವಿಶೇಷ ಅಧ್ಯಯನ ಕೈಗೊಳ್ಳುವುದು ಸಾಧ್ಯವಾಗುವಂತೆ ಮಾಡಲು ಏರ್ಪಾಡುಗಳನ್ನು ಮಾಡುವುದು;

(25) ಈ ಅಧಿನಿಯಮದ ಅಥವಾ ಶಾಸನಗಳ ಮೂಲಕ ಅದಕ್ಕೆ ಪ್ರದಾನ ಮಾಡಬಹುದಾದ ಅಥವಾ ವಿಧಿಸಬಹುದಾದಂಥ ಇತರೆ ಅಧಿಕಾರಗಳನ್ನು ಚಲಾಯಿಸುವುದು ಮತ್ತು ಅಂಥ ಕರ್ತವ್ಯಗಳನ್ನು ನೆರವೇರಿಸುವುದು;

(26) ಶಾಸನಗಳಿಗನುಸಾರವಾಗಿ ತನ್ನ ಯಾವುವೇ ಅಧಿಕಾರಗಳನ್ನು ಕುಲಪತಿಯವರಿಗೆ ಅಥವಾ ತನ್ನ ಸದಸ್ಯರ ಪೈಕಿಯಿಂದ ರಚಿಸಿದ ಸಮಿತಿಗೆ ಪ್ರತ್ಯಾಯೋಜಿಸುವುದು;

**26. ಪ್ರಶಿಕ್ಷಣ ಪರಿಷತ್ತಿನ ಸಭೆಗಳು:** (1) ಪ್ರಶಿಕ್ಷಣ ಪರಿಷತ್ತು ನಿಯಮಿಸಬಹುದಾದಂಥ ಸಮಯದಲ್ಲಿ ಮತ್ತು ಸ್ಥಳಗಳಲ್ಲಿ ಸಭೆ ಸೇರತಕ್ಕದ್ದು ಮತ್ತು (2) ಮತ್ತು (3)ನೇ ಉಪಪ್ರಕರಣಗಳ ಉಪಬಂಧಗಳಿಗೊಳಪಟ್ಟು ಸಭೆಯ ಕೋರಂ ಒಳಗೊಂಡಂತೆ ಅದರ ಸಭೆಯಲ್ಲಿ ವ್ಯವಹರಿಸಬೇಕಾದ ವಿಷಯಗಳ ಸಂಬಂಧದಲ್ಲಿ ನಿಯಮಿಸಬಹುದಾದಂಥ ಕಾರ್ಯವಿಧಾನ ನಿಯಮಗಳನ್ನು ಪಾಲಿಸತಕ್ಕದ್ದು,–

ಪರಂತು ಪ್ರಶಿಕ್ಷಣ ಪರಿಷತ್ತು ಪ್ರತಿ ಮೂರು ತಿಂಗಳಿಗೊಮ್ಮೆ ಸಭೆ ಸೇರತಕ್ಕದ್ದು;

(2) ಕುಲಪತಿಯವರು ಅಥವಾ ಅವರ ಗೈರು ಹಾಜರಿಯಲ್ಲಿ ಸದಸ್ಯರು ಆಯ್ಕೆ ಮಾಡಿದ ಯಾವೊಬ್ಬ ಸದಸ್ಯರು ಪ್ರಶಿಕ್ಷಣ ಪರಿಷತ್ತಿನ ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು.

(3) ಪ್ರಶಿಕ್ಷಣ ಪರಿಷತ್ತಿನ ಯಾವುದೇ ಸಭೆಯಲ್ಲಿ ಎಲ್ಲಾ ಪ್ರಶ್ನೆಗಳನ್ನು ಹಾಜರಿದ್ದ ಮತ್ತು ಮತ ಚಲಾಯಿಸುವ ಸದಸ್ಯರ ಬಹುಮತದಿಂದ ನಿರ್ಧರಿಸತಕ್ಕದ್ದು ಮತ್ತು ಮತಗಳು ಸಮನಾಗಿ ಬಂದ ಸಂದರ್ಭದಲ್ಲಿ ಕುಲಪತಿಯವರು ಅಥವಾ ಸಂದರ್ಭಾನುಸಾರ ಅಧ್ಯಕ್ಷತೆ ವಹಿಸಿದ ಸದಸ್ಯರು ಎರಡನೆಯ ಅಥವಾ ನಿರ್ಣಾಯಕ ಮತ ಚಲಾಯಿಸತಕ್ಕದ್ದು;

(4) (ಎ) ಪ್ರಶಿಕ್ಷಣ ಪರಿಷತ್ತು ಸಮಾಲೋಚನೆಯ ಉದ್ದೇಶಕ್ಕಾಗಿ, ಪರಿಶೀಲನೆಯಲ್ಲಿರುವ ಯಾವುದೇ ವಿಷಯದಲ್ಲಿ ವಾಸ್ತವಿಕ ಅನುಭವದ ವಿಶೇಷ ಜ್ಞಾನವಿರುವ ಯಾವೊಬ್ಬ ವ್ಯಕ್ತಿಯು ಯಾವುದೇ ಸಭೆಗೆ ಹಾಜರಾಗಲು ಆಹ್ವಾನಿಸಬಹುದು. ಅಂಥವ್ಯಕ್ತಿಯು ಸಭೆಯಲ್ಲಿ ಮಾತನಾಡಬಹುದು ಮತ್ತು ಅನ್ಯಥಾ ಈ ಸಭೆಯ ನಡೆವಳಿಗಳಲ್ಲಿ ಭಾಗವಹಿಸಬಹುದು, ಆದರೆ ಮತಚಲಾಯಿಸಲು ಹಕ್ಕುಳ್ಳವನಾಗಿರತಕ್ಕದ್ದಲ್ಲ;

(ಬಿ) ಹಾಗೇ ಆಹ್ವಾನಿಸಲಾದ ವ್ಯಕ್ತಿಯು, ಪ್ರಶಿಕ್ಷಣ ಪರಿಷತ್ತಿನ ಸದಸ್ಯನಿಗೆ ಅನುಮತಿಸಬಹುದಾದಂಥ ದಿನಭತ್ಯೆ ಮತ್ತು ಪ್ರಯಾಣ ಭತ್ಯೆ ಪಡೆಯಲು ಹಕ್ಕುಳ್ಳವನಾಗಿರತಕ್ಕದ್ದು;

**27. ಫ್ಯಾಕಲ್ಟಿಗಳ ರಚನೆ ಮತ್ತು ಪ್ರಕಾರ್ಯಗಳು.**– (1) ವಿಶ್ವವಿದ್ಯಾನಿಲಯವು, ಗೇಯ (ಹಾಡುಗಾರಿಕೆ) ಸಂಗೀತ, ವಾದ್ಯ ಸಂಗೀತ, ಪ್ರದರ್ಶಕ ಕಲೆಗಳು, ಸಂಗೀತ ಶಾಸ್ತ್ರ ಮತ್ತು ಶಾಸನಗಳಿಂದ ನಿಯಮಿಸಬಹುದಾದಂಥ ಇತರ ಫ್ಯಾಕಲ್ಟಿಗಳನ್ನು ಹೊಂದಿರತಕ್ಕದ್ದು.

(2) ಫ್ಯಾಕಲ್ಟಿಗಳ ರಚನೆ ಮತ್ತು ಪ್ರಕಾರ್ಯಗಳು ಇತರ ಎಲ್ಲ ವಿಷಯಗಳಲ್ಲಿ, ನಿಯಮಿಸಬಹುದಾದಂತೆ ಇರತಕ್ಕದ್ದು.

(3) ಪ್ರತಿಯೊಂದು ಫ್ಯಾಕಲ್ಟಿಯು ಮೊದಲನೇ ಶಾಸನಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ವಿದ್ಯಾ ವಿಭಾಗಗಳನ್ನು ಒಳಗೊಂಡಿರತಕ್ಕದ್ದು.

**28. ಹಣಕಾಸು ಸಮಿತಿ.**– (1) ಹಣಕಾಸು ಸಮಿತಿಯು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) ಕುಲಪತಿ,

(ಬಿ) ಹಣಕಾಸಿನ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ,

(ಸಿ) ಶಿಕ್ಷಣದ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ,

(ಡಿ) ಪ್ರಶಿಕ್ಷಣ ಪರಿಷತ್ತು ತನ್ನ ಸದಸ್ಯರ ಪೈಕಿಯಿಂದ ನಾಮನಿರ್ದೇಶಿಸಿದ ಇಬ್ಬರು ಸದಸ್ಯರಲ್ಲಿ ಒಬ್ಬರು ಪ್ರಾಧ್ಯಾಪಕರಾಗಿರತಕ್ಕದ್ದು ಮತ್ತು ಇನ್ನೊಬ್ಬರು ಪ್ರಶಿಕ್ಷಣ ಪರಿಷತ್ತಿಗೆ ಕುಲಾಧಿಪತಿಯವರಿಂದ ನಾಮ ನಿರ್ದೇಶಿತರಾದ ವ್ಯಕ್ತಿಯಾಗಿರತಕ್ಕದ್ದು.

(2) ಯಾವುದೇ ಕಾರಣದಿಂದಾಗಿ (1)ನೇ ಉಪ-ಪ್ರಕರಣದ (ಬಿ) ಖಂಡ ಅಥವಾ (ಸಿ) ಖಂಡದಲ್ಲಿ ಉಲ್ಲೇಖಿಸಲಾದ ಅಧಿಕಾರಿಯು ಹಣಕಾಸು ಸಮಿತಿಯ ಯಾವುದೇ ಸಭೆಗೆ ಹಾಜರಾಗಲು ಅಸಮರ್ಥರಾದರೆ ಅವರು ಸರ್ಕಾರದ ಉಪ-ಕಾರ್ಯದರ್ಶಿ ದರ್ಜೆಗೆ ಕಡಿಮೆಯದಲ್ಲದ ದರ್ಜೆಯ ತನ್ನ ಇಲಾಖೆಯ ಯಾವೊಬ್ಬ ಅಧಿಕಾರಿಯನ್ನು ಅಂಥ ಸಭೆಯಲ್ಲಿ ಹಾಜರಿರಲು ಪ್ರತಿನಿಯೋಜಿಸಬಹುದು. ಅಧಿಕಾರಿ ಅಥವಾ ಪ್ರತಿನಿಯೋಜಿತ ವ್ಯಕ್ತಿಯು ಸಮಿತಿಯ ಚರ್ಚೆಗಳಲ್ಲಿ ಭಾಗವಹಿಸಲು ಮತ್ತು ಮತ ನೀಡಲು ಹಕ್ಕುಳ್ಳವನಾಗಿರತಕ್ಕದ್ದು.

(3) ಕುಲಪತಿಯವರು, ಹಣಕಾಸು ಸಮಿತಿಯ ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು ಮತ್ತು ಹಣಕಾಸು ಅಧಿಕಾರಿಯು ಪದನಿಮಿತ್ತ ಕಾರ್ಯದರ್ಶಿಯಾಗಿರತಕ್ಕದ್ದು.

(4) ಪದನಿಮಿತ್ತ ಸದಸ್ಯರಲ್ಲದ ಹಣಕಾಸು ಸಮಿತಿಯ ಎಲ್ಲ ಸದಸ್ಯರು ಮೂರು ವರ್ಷಗಳ ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು.

(5) ಹಣಕಾಸು ಸಮಿತಿಯ ಲೆಕ್ಕಪತ್ರಗಳನ್ನು ಪರೀಕ್ಷಿಸಲು ಮತ್ತು ವೆಚ್ಚಗಳ ಪ್ರಸ್ತಾವಗಳನ್ನು ಪರಿಶೀಲಿಸಲು ಕಡೇಪಕ್ಷ ಮೂರು ತಿಂಗಳಿಗೊಮ್ಮೆಯಾದರೂ ಸಭೆ ಸೇರತಕ್ಕದ್ದು;

(6) ಹಣಕಾಸು ಅಧಿಕಾರಿಯು ಸಿದ್ಧಪಡಿಸಿದ ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕಪತ್ರಗಳನ್ನು ಪರ್ಯಾಲೋಚನೆ ಮತ್ತು ಟೀಕೆ-ಟಿಪ್ಪಣಿಗಳಿಗಾಗಿ ಹಣಕಾಸು ಸಮಿತಿಯ ಮುಂದೆ ಮಂಡಿಸತಕ್ಕದ್ದು ಮತ್ತು ತದನಂತರ ಅನುಮೋದನೆಗಾಗಿ ಪ್ರಶಾಸನ ಸಭೆಗೆ ಸಲ್ಲಿಸತಕ್ಕದ್ದು.

(7) ಹಣಕಾಸು ಸಮಿತಿಯು, ಉತ್ಪಾದನಾಪರ ಕಾರ್ಯಗಳ ಸಂದರ್ಭಗಳಲ್ಲಿ ಸಾಲಗಳಿಂದ ಬರುವ ಉತ್ಪತ್ತಿಗಳನ್ನು ಒಳಗೊಳ್ಳಬಹುದಾದ ವಿಶ್ವವಿದ್ಯಾಲಯದ ಆದಾಯ ಮತ್ತು ಸಂಪನ್ಮೂಲಗಳನ್ನು ಆಧರಿಸಿ ಆ ವರ್ಷದ ಒಟ್ಟು ಆವರ್ತಕ ವೆಚ್ಚ ಮತ್ತು ಒಟ್ಟು ಅನಾವರ್ತಕ ವೆಚ್ಚಗಳಿಗಾಗಿ ಪರಿಮಿತಿಗಳನ್ನು ಶಿಫಾರಸ್ಸು ಮಾಡತಕ್ಕದ್ದು.

(8) ಹಣಕಾಸು ಸಮಿತಿಯು,–

(ಎ) ವಿಶ್ವವಿದ್ಯಾಲಯದ ಹಣಕಾಸು ಸ್ಥಿತಿಯನ್ನು ಆಗಿಂದಾಗ್ಗೆ ಪುನರವಲೋಕನ ಮಾಡತಕ್ಕದ್ದು;

(ಬಿ) ವಾರ್ಷಿಕ ಹಣಕಾಸು ಅಂದಾಜುಗಳಲ್ಲಿ ಬಂಡವಾಳ ಹೂಡಿಕೆ ಅಥವಾ ವೆಚ್ಚಕ್ಕೆ ಯಾವುದೇ ಹಣದ ಏರ್ಪಾಡು ಮಾಡಿಲ್ಲದ ಅಥವಾ ವಾರ್ಷಿಕ ಹಣಕಾಸು ಅಂದಾಜುಗಳಲ್ಲಿ ಏರ್ಪಾಡು ಮಾಡಿರುವ ಮೊಬಲಗನ್ನು ಮೀರಿದ ವೆಚ್ಚವನ್ನು ಒಳಗೊಳ್ಳುವ ಪ್ರತಿಯೊಂದು ಪ್ರಸ್ತಾವದ ಬಗ್ಗೆ ಪ್ರಶಿಕ್ಷಣ ಪರಿಷತ್ತಿಗೆ ಶಿಫಾರಸ್ಸು ಮಾಡತಕ್ಕದ್ದು;

(ಸಿ) ವಿಶ್ವವಿದ್ಯಾಲಯದ ಲೆಕ್ಕಪತ್ರಗಳನ್ನು ನಿರ್ವಹಿಸುವುದಕ್ಕಾಗಿ ವಿಧಾನಗಳನ್ನು ಮತ್ತು ಪ್ರಕ್ರಿಯೆಗಳನ್ನು ಮತ್ತು ರೀತಿಗಳನ್ನು ನಿಯಮಿಸತಕ್ಕದ್ದು;

(ಡಿ) ವಿಶ್ವವಿದ್ಯಾಲಯದ ಹಣಕಾಸಿಗೆ ಸಂಬಂಧಪಟ್ಟ ಎಲ್ಲ ವಿಷಯಗಳ ಬಗ್ಗೆ ಪ್ರಶಿಕ್ಷಣ ಪರಿಷತ್ತಿಗೆ ಶಿಫಾರಸ್ಸುಗಳನ್ನು ಮಾಡತಕ್ಕದ್ದು; ಮತ್ತು

(ಇ) ನಿಯಮಿಸಬಹುದಾದಂಥ ಇತರ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು.

(9) ಹಣಕಾಸು ಅಧಿಕಾರಿಯು ಸಿದ್ಧಪಡಿಸಿದ ವಿಶ್ವವಿದ್ಯಾಲಯದ ಹಣಕಾಸು ಅಂದಾಜುಗಳನ್ನು ಪರ್ಯಾಲೋಚನೆ ಮತ್ತು ಟೀಕೆ–ಟಿಪ್ಪಣಿಗಳಿಗಾಗಿ ಹಣಕಾಸು ಸಮಿತಿಯ ಮುಂದೆ ಮಂಡಿಸತಕ್ಕದ್ದು. ನಂತರ ಪರ್ಯಾಲೋಚನೆಗಾಗಿ, ಸದರಿ ಅಂದಾಜುಗಳನ್ನು ಹಣಕಾಸು ಸಮಿತಿಯಿಂದ ಮಾರ್ಪಾಟಾದ ರೂಪದಲ್ಲಿ ಪ್ರಶಿಕ್ಷಣ ಪರಿಷತ್ತಿನ ಮುಂದೆ ಮಂಡಿಸತಕ್ಕದ್ದು. ಪ್ರಶಿಕ್ಷಣ ಪರಿಷತ್ತು ಹಣಕಾಸು ಸಮಿತಿಯು ಮಾಡಿದ ಮಾರ್ಪಾಡುಗಳನ್ನು ಅಂಗೀಕರಿಸಬಹುದು.

**29. ಅಧ್ಯಯನ ಮಂಡಲಿಗಳು.–** ಪ್ರತಿಯೊಂದು ಬೋಧನಾ ವಿಭಾಗಕ್ಕೆ ಲಗತ್ತಾಗಿ ಸೇರಿದಂತೆ ಅಧ್ಯಯನ ಮಂಡಲಿಗಳು ಇರತಕ್ಕದ್ದು. ಅಧ್ಯಯನ ಮಂಡಲಿಗಳ ರಚನೆ ಮತ್ತು ಅಧಿಕಾರಗಳು ಶಾಸನ ನಿಯಮಿಸಬಹುದಾದಂತೆ ಇರತಕ್ಕದ್ದು.

**30. ಇತರ ಪ್ರಾಧಿಕಾರಗಳ ರಚನೆ.–** ಶಾಸನವು ವಿಶ್ವವಿದ್ಯಾಲಯದ ಪ್ರಾಧಿಕಾರಗಳೆಂದು ಘೋಷಿಸಬಹುದಾದಂಥ ಇತರ ನಿಕಾಯಗಳ ರಚನೆಗೆ ನಿಯಮಿಸಬಹುದಾದ ರೀತಿಯಲ್ಲಿ ಉಪಬಂಧ ಕಲ್ಪಿಸತಕ್ಕದ್ದು.

**31. ಸದಸ್ಯರ ಅನರ್ಹತೆಗಳು:** (1) ಒಬ್ಬ ವ್ಯಕ್ತಿಯು ವಿಶ್ವವಿದ್ಯಾಲಯದ ಯಾವುವೇ ಪ್ರಾಧಿಕಾರಗಳ ಸದಸ್ಯನಾಗಿ ನಾಮನಿರ್ದೇಶಿತನಾಗಲು ಅಥವಾ ನಾಮನಿರ್ದೇಶನದ ದಿನಾಂಕದಂದು ಆತನು,

(i) ಅಸ್ವಸ್ಥ ಚಿತ್ತನಾಗಿದ್ದರೆ;

(ii) ಅನುನ್ಮುಕ್ತ ದಿವಾಳಿಯಾಗಿದ್ದಾನೆಂದು ನ್ಯಾಯನಿರ್ಣಿತನಾಗಿದ್ದರೆ;

(iii) ನೈತಿಕ ಅಧಃಪತನವನ್ನು ಒಳಗೊಳ್ಳುವ ಯಾವುದೇ ಅಪರಾಧಕ್ಕಾಗಿ ಕ್ರಿಮಿನಲ್ ನ್ಯಾಯಾಲಯದಿಂದ ಕಾರವಾಸ ಶಿಕ್ಷೆಗೆ ಅಪರಾಧ ನಿರ್ಣಿತನಾಗಿದ್ದರೆ;

– ಅನರ್ಹನಾಗಿರತಕ್ಕದ್ದು;

(2) ಅನರ್ಹತೆಗೆ ಸಂಬಂಧಪಟ್ಟಂತೆ ಯಾವುದೇ ವಿವಾದ ಅಥವಾ ಸಂದೇಹವಿದ್ದಲ್ಲಿ ಪ್ರಶಾಸನ ಸಭೆಯು (1)ನೇ ಉಪ ಪ್ರಕರಣದ ಅಡಿಯಲ್ಲಿ ಆ ವ್ಯಕ್ತಿಯು ಅನರ್ಹನಾಗಿರುವನೇ ಅಥವಾ ಇಲ್ಲವೇ ಎಂಬುದನ್ನು ನಿರ್ಧರಿಸತಕ್ಕದ್ದು. ಮತ್ತು ಅದರ ತೀರ್ಮಾನವು ಅಂತಿಮವಾಗಿರತಕ್ಕದ್ದು.

(3) ಈ ಅಧಿನಿಯಮದ ಅಡಿಯಲ್ಲಿ ಯಾವುವೇ ಪ್ರಾಧಿಕಾರಗಳಿಗೆ ನಾಮನಿರ್ದೇಶಿತನಾದ ಯಾವೊಬ್ಬ ವ್ಯಕ್ತಿಯು, ಸಂಬಂಧಪಟ್ಟ ನಾಮನಿರ್ದೇಶನ ಮಾಡುವ ಪ್ರಾಧಿಕಾರದ ಇಷ್ಟಪರ್ಯಂತ ಪದಧಾರಣ ಮಾಡತಕ್ಕದ್ದು.

(4) ಯಾವುವೇ ಪ್ರಾಧಿಕಾರಗಳಿಗೆ ನಾಮನಿರ್ದೇಶಿತನಾದ ಯಾವೊಬ್ಬ ವ್ಯಕ್ತಿಯನ್ನು, ಆತನ ದುರ್ವರ್ತನೆ, ದುರ್ನಡತೆ ಅಥವಾ ಅನ್ಯಥಾ ಕಾರಣದ ಮೇಲೆ ವಿಚಾರಣೆಯನ್ನು ನಡೆಸಿದ ತರುವಾಯ ಕುಲಾಧಿಪತಿಯವರು ಯಾವುದೇ ಕಾಲದಲ್ಲಿ ಸದಸ್ಯತ್ವದಿಂದ ತೆಗೆದುಹಾಕಬಹುದು.:

ಪರಂತು, ಪ್ರಶಾಸನ ಸಭೆಯ ಮತ್ತು ಪ್ರಶಿಕ್ಷಣ ಪರಿಷತ್ತಿನ ಯಾವೊಬ್ಬ ಸದಸ್ಯನು ವಯೋನಿವೃತ್ತನಾದಾಗ ಆತನು ಸದಸ್ಯತ್ವವನ್ನು ಹೊಂದಿರುವುದು ನಿಂತುಹೋಗತಕ್ಕದ್ದು.

**32. ಕೆಲವೊಂದು ಸಂದರ್ಭಗಳಲ್ಲಿ ಪ್ರಶಾಸನ ಸಭೆ ಮತ್ತು ಪ್ರಶಿಕ್ಷಣ ಪರಿಷತ್ತಿಗೆ ನಾಮನಿರ್ದೇಶನ ಹೊಂದಲು ಅನರ್ಹತೆಗಳು:** (1) 21 ಅಥವಾ 24ನೇ ಪ್ರಕರಣಗಳಲ್ಲಿ ಏನೇ ಇದ್ದರೂ ಈ ಮುಂದಿನ ಪ್ರಾಧಿಕಾರಗಳಲ್ಲಿ ಯಾವುದಾದರೊಂದರಲ್ಲಿ ಅಥವಾ ಅವೆರಡರಲ್ಲೂ ಒಟ್ಟು ಆರು ವರ್ಷಗಳ ಕಾಲ ಸದಸ್ಯನಾಗಿರುವ ಯಾವೊಬ್ಬ ವ್ಯಕ್ತಿಯು, ಎಂದರೆ,–

(ಎ) ಪ್ರಶಾಸನ ಸಭೆ; ಮತ್ತು

(ಬಿ) ಪ್ರಶಿಕ್ಷಣ ಪರಿಷತ್ತು ಆ ಎರಡು ಪ್ರಾಧಿಕಾರಗಳಲ್ಲಿ ಯಾವುದಕ್ಕೂ ನಾಮನಿರ್ದೇಶನ ಹೊಂದಲು ಅರ್ಹನಾಗಿರತಕ್ಕದ್ದಲ್ಲ.

**ವಿವರಣೆ:–** ಈ ಉಪ ಪ್ರಕರಣದಲ್ಲಿ ಹೇಳಿದ ಆರು ವರ್ಷಗಳ ಒಟ್ಟು ಅವಧಿಯನ್ನು ಲೆಕ್ಕ ಹಾಕುವಾಗ ಒಬ್ಬ ವ್ಯಕ್ತಿ ಒಂದು ಪ್ರಾಧಿಕಾರದಲ್ಲಿ ನಾಮನಿರ್ದೇಶಿತನಾಗಿ ಅಧಿಕಾರ ಸ್ಥಾನದಲ್ಲಿದ್ದ ಒಟ್ಟು ಮೂರು ವರ್ಷಗಳು ಇನ್ನೊಂದು ಪ್ರಾಧಿಕಾರದಲ್ಲಿ ನಾಮನಿರ್ದೇಶಿತನಾಗಿ ಅಧಿಕಾರ ಸ್ಥಾನದಲ್ಲಿದ್ದ ಒಟ್ಟು ಮೂರು ವರ್ಷಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು ಮತ್ತು ಅದಕ್ಕನುಸಾರವಾಗಿ ಆ ವ್ಯಕ್ತಿಯು ಅಂಥ ಪ್ರಾಧಿಕಾರಗಳಲ್ಲಿ ಯಾವುದೊಂದಕ್ಕೆ ನಾಮನಿರ್ದೇಶಿತನಾಗಲು ಅರ್ಹನಾಗತಕ್ಕದ್ದಲ್ಲ;

ಪರಂತು ಈ ಉಪ ಪ್ರಕರಣದ ಉದ್ದೇಶಕ್ಕಾಗಿ ಒಬ್ಬ ವ್ಯಕ್ತಿಯನ್ನು ಒಂದು ಪ್ರಾಧಿಕಾರಕ್ಕೆ ನಾಮನಿರ್ದೇಶನ ಮಾಡಿದ್ದು ಮೊದಲು ಹೇಳಿದ ಪ್ರಾಧಿಕಾರದ ಸದಸ್ಯತ್ವದ ಕಾರಣದಿಂದ ಎರಡನೇ ಪ್ರಾಧಿಕಾರಕ್ಕೆ ಅವನು ಸದಸ್ಯನಾದರೆ ಆತನು ಮೊದಲನೆ ಪ್ರಾಧಿಕಾರದ ಸದಸ್ಯನಾಗಿದ್ದ ಅವಧಿಯನ್ನು ಮಾತ್ರ ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು.

(2) (1)ನೇ ಉಪ ಪ್ರಕರಣದಲ್ಲಿರುವುದು ಯಾವುದೂ,–

(ಎ) (ಜಿ) ಬಾಬಿನಲ್ಲಿ ಹೇಳಲಾದ ಪ್ರಶಾಸನಸಭೆಯ ಸದಸ್ಯರಲ್ಲದ (20)ನೇ ಪ್ರಕರಣದ (2)ನೇ ಉಪಪ್ರಕರಣದ ಸದಸ್ಯರಿಗೆ

(ಬಿ) 24ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ನಿಂದ (ಎಫ್) ಖಂಡದಲ್ಲಿ ಹೇಳಲಾದ ಸದಸ್ಯರಿಗೆ

–ಅನ್ವಯಿಸತಕ್ಕದ್ದಲ್ಲ.

**33. ಆಕಸ್ಮಿಕ ಖಾಲಿಸ್ಥಾನಗಳನ್ನು ಭರ್ತಿ ಮಾಡುವುದು.**– ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ಇತರ ನಿಕಾಯದ ಪದನಿಮಿತ್ತ ಸದಸ್ಯರಲ್ಲದ ಸದಸ್ಯರ ಪೈಕಿ ಉಂಟಾಗುವ ಎಲ್ಲ ಆಕಸ್ಮಿಕ ಖಾಲಿಸ್ಥಾನಗಳನ್ನು, ಆ ಸದಸ್ಯನನ್ನು ನಾಮನಿರ್ದೇಶಿಸಿದ ವ್ಯಕ್ತಿ ಅಥವಾ ನಿಕಾಯವು, ಅನುಕೂಲವಾದಷ್ಟು ಬೇಗನೆ ಭರ್ತಿ ಮಾಡತಕ್ಕದ್ದು ಮತ್ತು ಆಕಸ್ಮಿಕ ಖಾಲಿಸ್ಥಾನದಲ್ಲಿ ನಾಮನಿರ್ದೇಶಿತನಾದ ವ್ಯಕ್ತಿಯು, ಯಾವ ವ್ಯಕ್ತಿಯ ಸ್ಥಾನದಲ್ಲಿ ಭರ್ತಿಗೊಂಡಿರುವನೋ ಆ ವ್ಯಕ್ತಿಯು ಸದಸ್ಯನಾಗಿರುತ್ತಿದ್ದ ಉಳಿದ ಅವಧಿಯವರೆಗೆ ಅಂಥ ಪ್ರಾಧಿಕಾರ ಅಥವಾ ನಿಕಾಯದ ಸದಸ್ಯನಾಗಿರತಕ್ಕದ್ದು:

ಪರಂತು, ಅಂಥ ಯಾವುದೇ ಆಕಸ್ಮಿಕ ಖಾಲಿಸ್ಥಾನವು, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಇತರ ನಿಕಾಯದ ಸದಸ್ಯನ ಪದಾವಧಿಯು ಮುಕ್ತಾಯವಾಗುವ ದಿನಾಂಕಕ್ಕೆ ಮುಂಚಿನ ಆರು ತಿಂಗಳೊಳಗಾಗಿ ಉಂಟಾದರೆ, ಅಂಥ ಯಾವುದೇ ಖಾಲಿಸ್ಥಾನವನ್ನು ಭರ್ತಿಮಾಡತಕ್ಕದ್ದಲ್ಲ.

**34. ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಮತ್ತು ನಿಕಾಯಗಳ ವ್ಯವಹರಣೆಗಳು, ಖಾಲಿಸ್ಥಾನಗಳು ಇರುವುದರಿಂದಾಗಿ ಅಮಾನ್ಯವಾಗತಕ್ಕದ್ದಲ್ಲ.**– ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಇತರ ನಿಕಾಯದ ಯಾವುದೇ ಕೃತ್ಯ ಅಥವಾ ವ್ಯವಹರಣೆಯು, ಯಾವುದೇ ಖಾಲಿಸ್ಥಾನ ಇದೆ ಎಂಬ ಅಥವಾ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಇತರ ನಿಕಾಯದ ಸದಸ್ಯನ ನೇಮಕಾತಿಯಲ್ಲಿನ ಯಾವುದೇ ದೋಷ ಅಥವಾ ಅಕ್ರಮತೆಯ ಅಥವಾ ಪ್ರಕರಣದ ಗುಣಗಳಿಗೆ ಬಾಧಕವಾಗದ, ಅಂಥ ಕೃತ್ಯ ಅಥವಾ ವ್ಯವಹರಣೆಯಲ್ಲಿನ ಯಾವುದೇ ದೋಷ ಅಥವಾ ಅಕ್ರಮತೆಯ ಕಾರಣ ಮಾತ್ರದಿಂದಲೇ ಅಮಾನ್ಯವಾಗತಕ್ಕದ್ದಲ್ಲ.

**35. ವಿಶ್ವವಿದ್ಯಾಲಯದ ಸದಸ್ಯತ್ವದಿಂದ ತೆಗೆದುಹಾಕುವುದು.**– (1) ಪ್ರಶಾಸನ ಸಭೆಯು, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಸದಸ್ಯತ್ವದಿಂದ ಯಾವೊಬ್ಬ ವ್ಯಕ್ತಿಯನ್ನು, ಅಂಥ ವ್ಯಕ್ತಿಯು, ಕಾರ್ಯಕಾರಿ ಸಮಿತಿಯ ಅಭಿಪ್ರಾಯದಲ್ಲಿ ನೈತಿಕ ಅಧಃಪತನವನ್ನು ಒಳಗೊಳ್ಳುವ ಒಂದು ಅಪರಾಧಕ್ಕಾಗಿ ಕ್ರಿಮಿನಲ್ ನ್ಯಾಯಾಲಯದಿಂದ ಅಪರಾಧ ನಿರ್ಣಿತನಾಗಿ ಅಥವಾ ಗುರುತರ ದುರ್ವರ್ತನೆಯ ದೋಷಿಯಾಗಿದ್ದರೆ ಪ್ರಶಾಸನ ಸಭೆಯು ಒಟ್ಟು ಸದಸ್ಯರ ಬಹುಮತದಿಂದ ಮತ್ತು ಸಭೆಯಲ್ಲಿ ಹಾಜರಿದ್ದು ಮತ ನೀಡುವ ಪ್ರಶಾಸನ ಸಭೆಯ ಮೂರನೇ ಎರಡರಷ್ಟು ಸಂಖ್ಯೆಯ ಸದಸ್ಯರಿಗಿಂತ ಕಡಿಮೆಯಿಲ್ಲದ ಬಹುಮತದಿಂದ ಒಂದು ಗೊತ್ತುವಳಿಯನ್ನು ಅಂಗೀಕರಿಸಿ ಆ ಬಗ್ಗೆ ಲಿಖಿತದಲ್ಲಿ ಆದೇಶವನ್ನು ಹೊರಡಿಸುವ ಮೂಲಕ ತೆಗೆದು ಹಾಕಬಹುದು ಮತ್ತು ಅದೇ ಕಾರಣಕ್ಕಾಗಿ ಪ್ರಶಾಸನ ಸಭೆಯು ವಿಶ್ವವಿದ್ಯಾಲಯವು ಆ ವ್ಯಕ್ತಿಗೆ ಪ್ರದಾನ ಮಾಡಿರುವ ಅಥವಾ ನೀಡಿರುವ ಯಾವುದೇ ಪದವಿ ಅಥವಾ ಡಿಪ್ಲೋಮಾವನ್ನು ಹಿಂತೆಗೆದುಕೊಳ್ಳಬಹುದು.

(2) ಪ್ರಶಾಸನ ಸಭೆಯು, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಸದಸ್ಯತ್ವದಿಂದ ಯಾವೊಬ್ಬ ವ್ಯಕ್ತಿಯನ್ನು, ಅವನು ಅಸ್ವಸ್ಥಚಿತ್ತದವನಾದರೆ, ಕಿವುಡನಾದರೆ, ಮೂಕನಾದರೆ, ಅಥವಾ ಕುಷ್ಠರೋಗದಿಂದ ನರಳುತ್ತಿದ್ದರೆ ಅಥವಾ ದಿವಾಳಿಯೆಂದು ನ್ಯಾಯ ನಿರ್ಣಯಿಸಬೇಕೆಂದು ಅರ್ಜಿ ಸಲ್ಲಿಸಿದ್ದರೆ ಅಥವಾ ಹಾಗೆಂದು ನ್ಯಾಯ ನಿರ್ಣೀತನಾಗಿದ್ದರೆ, ಈ ಬಗ್ಗೆ ಹೊರಡಿಸಲಾದ ಲಿಖಿತ ಆದೇಶದ ಮೂಲಕ ತೆಗೆದುಹಾಕಬಹುದು.

(3) ಈ ಪ್ರಕರಣದ ಅಡಿಯಲ್ಲಿ ಯಾವೊಬ್ಬ ವ್ಯಕ್ತಿಯ ವಿರುದ್ಧ ತೆಗೆದುಕೊಳ್ಳಲು ಉದ್ದೇಶಿಸಿದ ಕ್ರಮದ ವಿರುದ್ಧ ಕಾರಣ ತೋರಿಸಲು ಅವನಿಗೆ ಒಂದು ಯುಕ್ತ ಅವಕಾಶವನ್ನು ನೀಡಿದ ಹೊರತು, ಅವನ ಮೇಲೆ ಕ್ರಮವನ್ನು ಕೈಗೊಳ್ಳತಕ್ಕದ್ದಲ್ಲ.

(4) ಸಂದರ್ಭಾನುಸಾರ, (1)ನೇ ಉಪ–ಪ್ರಕರಣದ ಅಥವಾ (2)ನೇ ಉಪ–ಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಆದೇಶದ ಒಂದು ಪ್ರತಿಯನ್ನು ಅದನ್ನು ಹಾಗೆ ಹೊರಡಿಸಿದ ತರುವಾಯ ಸಾಧ್ಯವಾದಷ್ಟು ಬೇಗನೆ, ನಿಯಮಿಸಲಾದ ರೀತಿಯಲ್ಲಿ ಸಂಬಂಧಪಟ್ಟ ವ್ಯಕ್ತಿಗೆ ಕಳುಹಿಸತಕ್ಕದ್ದು.

**36. ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಮತ್ತು ನಿಕಾಯಗಳ ರಚನೆಗೆ ಸಂಬಂಧಪಟ್ಟ ವಿವಾದಗಳು.**– ಯಾವೊಬ್ಬ ವ್ಯಕ್ತಿಯು, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ವಿಶ್ವವಿದ್ಯಾಲಯದ ಇತರ ನಿಕಾಯದ ಸದಸ್ಯನಾಗಿ ಯಥೋಚಿತವಾಗಿ ನಾಮನಿರ್ದೇಶಿತನಾಗಿದ್ದಾನೆಯೇ ಅಥವಾ ಸದಸ್ಯನಾಗಿರಲು ಹಕ್ಕುಳ್ಳವನಾಗಿದ್ದಾನೆಯೇ ಎಂಬ ಬಗ್ಗೆ ಯಾವುದೇ ಪ್ರಶ್ನೆ ಉದ್ಭವಿಸಿದರೆ, ಪ್ರಶ್ನೆಯನ್ನು ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಅದರ ಬಗ್ಗೆ ಅವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

**37. ಸಮಿತಿಗಳ ರಚನೆ.-** ವಿಶ್ವವಿದ್ಯಾಲಯದ ಎಲ್ಲ ಪ್ರಾಧಿಕಾರಗಳು ಸಮಿತಿಗಳನ್ನು ರಚಿಸಲು ಅಥವಾ ಪುನರ್ ರಚಿಸಲು ಮತ್ತು ತಾವು ಉಚಿತವೆಂದು ಭಾವಿಸುವ ಅಂಥ ತಮ್ಮ ಅಧಿಕಾರಗಳನ್ನು ಅವುಗಳಿಗೆ ಪ್ರತ್ಯಾಯೋಜಿಸಲು ಅಧಿಕಾರ ಹೊಂದಿರತಕ್ಕದ್ದು. ಅಂಥ ಸಮಿತಿಗಳು, ಅನ್ಯಥಾ ಉಪಬಂಧಿಸಿರುವುದನ್ನುಳಿದು, ಸಂಬಂಧಪಟ್ಟ ಪ್ರಾಧಿಕಾರದ ಸದಸ್ಯರನ್ನು ಮತ್ತು ಪ್ರಾಧಿಕಾರವು ಪ್ರತಿಯೊಂದು ಸಂದರ್ಭದಲ್ಲಿ ತಾನು ಉಚಿತವೆಂದು ಭಾವಿಸಬಹುದಾದಂಥ ಇತರ ವ್ಯಕ್ತಿಗಳು, ಯಾರಾದರೂ ಇದ್ದರೆ, ಅವರನ್ನು ಒಳಗೊಂಡಿರತಕ್ಕದ್ದು.

## ಅಧ್ಯಾಯ – V

### ಶಾಸನಗಳು

**38. ಶಾಸನಗಳು.-** ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಶಾಸನಗಳು, ಈ ಮುಂದಿನ ಎಲ್ಲ ಅಥವಾ ಯಾವುವೇ ವಿಷಯಗಳಿಗಾಗಿ ಉಪಬಂಧ ಕಲ್ಪಿಸಬಹುದು, ಎಂದರೆ: –

(1) ಪದವಿಗಳನ್ನು ಪ್ರದಾನ ಮಾಡಲು ಘಟಿಕೋತ್ಸವವನ್ನು ಏರ್ಪಡಿಸುವುದು;

(2) ಗೌರವ ಪದವಿಗಳನ್ನು ಮತ್ತು ಶೈಕ್ಷಣಿಕ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು;

(3) ವಿಶ್ವವಿದ್ಯಾಲಯದ ಪ್ರಾಧಿಕಾರಗಳ ರಚನೆ, ಅಧಿಕಾರಗಳು ಮತ್ತು ಪ್ರಕಾರ್ಯಗಳು;

(4) ವಿಶ್ವವಿದ್ಯಾಲಯದ ಪ್ರಾಧಿಕಾರಗಳ ಸದಸ್ಯರ ಪೈಕಿಯಿಂದ ಖಾಲಿಸ್ಥಾನಗಳನ್ನು ಭರ್ತಿ ಮಾಡುವ ರೀತಿ;

(5) ಪ್ರಾಧಿಕಾರಗಳ ಮತ್ತು ಅವುಗಳ ಸಮಿತಿಗಳ ಸದಸ್ಯರಿಗೆ ಸಂದಾಯ ಮಾಡಬೇಕಾಗಿರುವ ಭತ್ಯೆಗಳು;

(6) ಪ್ರಾಧಿಕಾರಗಳ ಆದೇಶಗಳ ಅಥವಾ ತೀರ್ಮಾನಗಳ ಪ್ರಮಾಣೀಕರಣ;

(7) ಪ್ರಾಧಿಕಾರಗಳ ಸಭೆಗಳಲ್ಲಿನ ಕಾರ್ಯಕಲಾಪಗಳಿಗೆ, ಅಂಥ ಸಭೆಗಳಲ್ಲಿ ಇರಬೇಕಾದ ಗಣಪೂರ್ತಿಯನ್ನೂ ಒಳಗೊಂಡಂತೆ, ಅಂಥ ಸಭೆಗಳ ಕಾರ್ಯವಿಧಾನ;

(8) ವಿಶ್ವವಿದ್ಯಾಲಯದ ಸಂಶೋಧನಾ ಇಲಾಖೆಗಳ ರಚನೆ;

(9) ಕುಲಾಧಿಪತಿಯವರು ಮತ್ತು ಸಹಕುಲಾಧಿಪತಿಗಳಲ್ಲದ ವಿಶ್ವವಿದ್ಯಾಲಯದ ಅಧಿಕಾರಿಗಳ ಪದಾವಧಿ ಮತ್ತು ನೇಮಕಾತಿ ವಿಧಾನಗಳು ಮತ್ತು ಸೇವಾ ಷರತ್ತುಗಳು;

(10) ವಿಶ್ವವಿದ್ಯಾಲಯದಿಂದ ನಿಯೋಜಿತರಾದ ಬೋಧಕರು ಮತ್ತು ಇತರ ವ್ಯಕ್ತಿಗಳ ವಿದ್ಯಾರ್ಹತೆಗಳು;

(11) ವಿಶ್ವವಿದ್ಯಾಲಯದಿಂದ ನಿಯೋಜಿತರಾದ ಬೋಧಕರು ಮತ್ತು ಇತರ ವ್ಯಕ್ತಿಗಳ ವರ್ಗೀಕರಣ, ನೇಮಕಾತಿ ವಿಧಾನ ಮತ್ತು ಸೇವಾ ನಿಬಂಧನೆಗಳು ಮತ್ತು ಷರತ್ತುಗಳ ನಿರ್ಧಾರ;

(12) ವಿಶ್ವವಿದ್ಯಾಲಯದಿಂದ ನಿಯೋಜಿತರಾದ ಅಧಿಕಾರಿಗಳು, ಬೋಧಕರು ಮತ್ತು ಇತರ ವ್ಯಕ್ತಿಗಳ ಪ್ರಯೋಜನಕ್ಕಾಗಿ ನಿವೃತ್ತಿ ವೇತನ, ಉಪದಾನ, ವಿಮೆ ಅಥವಾ ಭವಿಷ್ಯ ನಿಧಿಗಳ ಪ್ರಾರಂಭ;

(13) ಸಂಶೋಧನಾ ವೇತನಗಳು, ಪ್ರವಾಸೀ ಸಂಶೋಧನಾ ವೇತನಗಳು, ವಿದ್ಯಾರ್ಥಿ ವೇತನ, ಶಿಷ್ಯ ವೇತನ, ಬರ್ಸರಿಗಳು, ಪ್ರದರ್ಶನಗಳು, ಪದಕಗಳು ಮತ್ತು ಬಹುಮಾನಗಳನ್ನು ನೀಡುವುದನ್ನು ಪ್ರಾರಂಭಿಸುವುದು ಮತ್ತು ಅವುಗಳನ್ನು ನೀಡುವ ಬಗ್ಗೆ ಷರತ್ತುಗಳು;

(14) ವಸತಿ ನಿಲಯಗಳು ಮತ್ತು ಹಾಸ್ಟೆಲುಗಳ ಸ್ಥಾಪನೆ ಮತ್ತು ನಿರ್ವಹಣೆ;

(15) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ವಸತಿ ಮತ್ತು ವಿಶ್ವವಿದ್ಯಾಲಯವು ನಿರ್ವಹಿಸುವ ಹಾಸ್ಟೆಲುಗಳು ಮತ್ತು ವಸತಿ ನಿಲಯಗಳ ಷರತ್ತುಗಳು ಮತ್ತು ಅಂಥ ವಸತಿಗೆ ಶುಲ್ಕಗಳು ಮತ್ತು ಇತರ ವೆಚ್ಚಗಳನ್ನು ವಿಧಿಸುವುದು;

(16) ವಿಶ್ವವಿದ್ಯಾಲಯದ ಅಧಿಕಾರಿಗಳ ಮೇಲೆ ಪ್ರಾಧಿಕಾರಗಳಲ್ಲಿ ನಿಹಿತವಾಗಿರುವ ಅಧಿಕಾರಗಳ ಪ್ರತ್ಯಾಯೋಜನೆ;

(17) ವಿಶ್ವವಿದ್ಯಾಲಯಕ್ಕೆ ವಿದ್ಯಾರ್ಥಿಗಳ ಪ್ರವೇಶ;

(18) ಪರೀಕ್ಷಾ ನಿಕಾಯಗಳು ಮತ್ತು ಪರೀಕ್ಷಕರ ನೇಮಕಾತಿ ಷರತ್ತುಗಳು ಮತ್ತು ವಿಧಾನ ಹಾಗೂ ಅವರ ಕರ್ತವ್ಯಗಳು;

(19) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ಮಧ್ಯೆ ಶಿಸ್ತು ನಿರ್ವಹಣೆಯ ಷರತ್ತುಗಳು;

(20) ಸಂಶೋಧನೆಗೆ ವಿಧಿಸಬೇಕಾದ ಶುಲ್ಕಗಳು; ಮತ್ತು

(21) ಪರಿನಿಯಮಗಳಿಂದ ನಿಯಮಿಸುವ ಅಗತ್ಯವಿರುವ ಅಥವಾ ನಿಯಮಿಸಬಹುದಾದ ಇತರ ಯಾವುದೇ ವಿಷಯ.

**39. ಶಾಸನಗಳನ್ನು ರಚಿಸುವ ಬಗೆ.–** (1) ಪ್ರಶಾಸನ ಸಭೆಯು ಈ ಪ್ರಕರಣದಲ್ಲಿ ಇನ್ನು ಮುಂದೆ ಉಪಬಂಧಿಸಿದ ವಿಧಾನದಲ್ಲಿ ಕಾಲಕಾಲಕ್ಕೆ ಶಾಸನಗಳನ್ನು ರಚಿಸಬಹುದು ಹಾಗೂ ಅವುಗಳನ್ನು ತಿದ್ದುಪಡಿ ಮಾಡಬಹುದು ಅಥವಾ ನಿರಸನಗೊಳಿಸಬಹುದು.

(2) ಪ್ರಶಿಕ್ಷಣ ಪರಿಷತ್ತು ಅಥವಾ ಕುಲಪತಿಯವರು ಯಾವುವೇ ಶಾಸನಗಳ ಅಥವಾ ಅವುಗಳಿಗೆ ಮಾಡಬೇಕಾದ ಯಾವುವೇ ತಿದ್ದುಪಡಿಗಳ ಕರಡನ್ನು ಅಥವಾ ಶಾಸನದ ನಿರಸನದ ಪ್ರಸ್ತಾವದ ಕರಡನ್ನು ಪ್ರಶಾಸನ ಸಭೆಯ ಅಂಗೀಕಾರಕ್ಕಾಗಿ ಸಲ್ಲಿಸಬಹುದು ಮತ್ತು ಅಂಥ ಕರಡನ್ನು ಪ್ರಶಾಸನ ಸಭೆಯು ತನ್ನ ಮುಂದಿನ ಸಭೆಯಲ್ಲಿ ಪರಿಗಣಿಸತಕ್ಕದ್ದು:

ಪರಂತು, ಕುಲಪತಿಯವರು ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಧಿಕಾರಗಳಿಗೆ ಮತ್ತು ರಚನೆಗೆ ಬಾಧಕವಾಗುವಂತೆ ಯಾವುವೇ ಶಾಸನಗಳಿಗೆ ಯಾವುವೇ ತಿದ್ದುಪಡಿಗಳನ್ನು ಮಾಡುವ ಪ್ರಸ್ತಾವಗಳನ್ನು, ಅಂಥ ಪ್ರಾಧಿಕಾರಕ್ಕೆ ತನ್ನ ಅಭಿಪ್ರಾಯವನ್ನು ಹೇಳಿಕೊಳ್ಳಲು ಅವಕಾಶವನ್ನು ನೀಡದೇ ಮಂಡಿಸತಕ್ಕದ್ದಲ್ಲ ಮತ್ತು ಹಾಗೆ ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಪ್ರಶಾಸನ ಸಭೆ ಪರಿಗಣಿಸತಕ್ಕದ್ದು.

(3) ಪ್ರಶಿಕ್ಷಣ ಪರಿಷತ್ತು ಅಥವಾ ಕುಲಪತಿಯವರು (2)ನೇ ಉಪಪ್ರಕರಣದ ಅಡಿಯಲ್ಲಿ ಪ್ರಸ್ತಾವಿಸಿದ ಕರಡನ್ನು ಪ್ರಶಾಸನ ಸಭೆಯು ಪರಿಗಣಿಸಬಹುದು ಮತ್ತು ಆ ಕರಡನ್ನು ಅಂಗೀಕರಿಸಬಹುದು ಅಥವಾ ತಿರಸ್ಕರಿಸಬಹುದು ಅಥವಾ ತಿದ್ದುಪಡಿಗಳೊಡನೆ ಅಥವಾ ತಿದ್ದುಪಡಿಗಳಿಲ್ಲದೆ ಅದನ್ನು ಪುನರ್ ಪರಿಗಣನೆ ಮಾಡಲು ಸಂದರ್ಭಾನುಸಾರ ಪ್ರಶಿಕ್ಷಣ ಪರಿಷತ್ತಿಗೆ ಅಥವಾ ಕುಲಪತಿಯವರಿಗೆ ಹಿಂದಿರುಗಿಸಬಹುದು.

(4) (ಎ) ಪ್ರಶಾಸನ ಸಭೆಯ ಯಾವೊಬ್ಬ ಸದಸ್ಯನು, ಪ್ರಶಾಸನ ಸಭೆಗೆ ಕರಡು ಶಾಸನಗಳನ್ನು ಅಥವಾ ಶಾಸನಗಳ ತಿದ್ದುಪಡಿ ಅಥವಾ ನಿರಸನಕ್ಕಾಗಿ ಪ್ರಸ್ತಾವವನ್ನು ಸಲ್ಲಿಸಬಹುದು ಮತ್ತು ಪ್ರಶಾಸನ ಸಭೆಯು, ಆ ವಿಷಯವು ಪ್ರಶಿಕ್ಷಣ ಸಭೆಯ ಪರಿಮಿತಿಯಲ್ಲಿ ಬರುವಂತಹದಲ್ಲದಿದ್ದರೆ ಕರಡನ್ನು ಒಪ್ಪಿಕೊಳ್ಳಬಹುದು ಅಥವಾ ತಿರಸ್ಕರಿಸಬಹುದು.

(ಬಿ) ವಿಷಯವು ಪ್ರಶಿಕ್ಷಣ ಪರಿಷತ್ತಿನ ಪರಿಮಿತಿಯಲ್ಲಿ ಬರುತ್ತಿದ್ದರೆ ಅಂಥ ಕರಡನ್ನು ಪ್ರಶಾಸನ ಸಭೆಯು ಪ್ರಶಿಕ್ಷಣ ಪರಿಷತ್ತಿಗೆ ಪರಿಗಣನೆಗಾಗಿ ಕಳುಹಿಸತಕ್ಕದ್ದು. ಪ್ರಶಿಕ್ಷಣ ಪರಿಷತ್ತು, ಪ್ರಶಾಸನ ಸಭೆಗೆ ತಾನು ಕರಡನ್ನು ಒಪ್ಪಿಲ್ಲವೆಂದು ವರದಿ ಮಾಡಬಹುದು ಅಥವಾ ಪ್ರಶಿಕ್ಷಣ ಪರಿಷತ್ತು ಅಂಗೀಕರಿಸಬಹುದಾದ ರೂಪದಲ್ಲಿ ಕರಡನ್ನು ಪ್ರಶಾಸನ ಸಭೆಗೆ ಸಲ್ಲಿಸಬಹುದು ಮತ್ತು ಪ್ರಶಾಸನ ಸಭೆಯು ತಿದ್ದುಪಡಿ ಇಲ್ಲದೆ ಅಥವಾ ತಿದ್ದುಪಡಿಗಳೊಡನೆ ಕರಡನ್ನು ಅಂಗೀಕರಿಸಬಹುದು ಅಥವಾ ತಿರಸ್ಕರಿಸಬಹುದು.

(5) ಪ್ರಶಾಸನಸಭೆಯು, ಹಣಕಾಸಿನ ವಿಷಯಗಳನ್ನು ಒಳಗೊಂಡ ಶಾಸನಗಳ ಸಂಬಂಧದಲ್ಲಿ ಹಣಕಾಸು ಸಮಿತಿಯ ಅಭಿಪ್ರಾಯವನ್ನು ಪಡೆಯತಕ್ಕದ್ದು.

(6) ಪ್ರಶಾಸನ ಸಭೆಯು ಕರಡು ಶಾಸನಗಳ ಸಂಬಂಧದಲ್ಲಿ ಅವುಗಳನ್ನು ಪರಿಗಣಿಸುವುದಕ್ಕೆ ಮುಂಚೆ ತಾನು ಅವಶ್ಯವೆಂದು ಭಾವಿಸಿದರೆ, ವಿಶ್ವವಿದ್ಯಾಲಯದ ಯಾವೊಬ್ಬ ಅಧಿಕಾರಿಯ, ಪ್ರಾಧಿಕಾರದ ಅಥವಾ ನಿಕಾಯದ ಅಭಿಪ್ರಾಯವನ್ನು ಸಹ ಪಡೆಯಬಹುದು.

(7) ಪ್ರಶಾಸನ ಸಭೆಯು ತಾನು ಅಂಗೀಕರಿಸಿದ ಪ್ರತಿಯೊಂದು ಶಾಸನವನ್ನು, ತನ್ನ ನಿರ್ದಿಷ್ಟ ಶಿಫಾರಸ್ಸುಗಳೊಡನೆ ಅನುಮೋದನೆಗಾಗಿ ಕುಲಾಧಿಪತಿಯವರಿಗೆ ಒಪ್ಪಿಸುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(8) ರಾಜ್ಯ ಸರ್ಕಾರವು, ಕರಡು ಶಾಸನಗಳನ್ನು ಸ್ವೀಕರಿಸಿದ ಮೇಲೆ, ಅವುಗಳನ್ನು ಸ್ವೀಕರಿಸಿದ ದಿನಾಂಕದಿಂದ ಎರಡು ತಿಂಗಳುಗಳೊಳಗೆ ತನ್ನ ಟೀಕೆ ಟಿಪ್ಪಣಿಗಳು ಮತ್ತು ನಿರ್ದಿಷ್ಟ ಶಿಫಾರಸ್ಸುಗಳೊಡನೆ, ಅಂಥ ಕರಡು ಶಾಸನಗಳನ್ನು ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಕುಲಾಧಿಪತಿಯವರು, ರಾಜ್ಯ ಸರ್ಕಾರದಿಂದ ಕರಡು ಶಾಸನಗಳನ್ನು ಸ್ವೀಕರಿಸಿದ ದಿನಾಂಕದಿಂದ ಎರಡು ತಿಂಗಳೊಳಗೆ ತನ್ನ ಅನುಮೋದನೆಯನ್ನು ನೀಡಬಹುದು ಅಥವಾ ಅದಕ್ಕೆ ತನ್ನ ಅನುಮೋದನೆಯನ್ನು ತಡೆಹಿಡಿಯಬಹುದು ಅಥವಾ ಅದನ್ನು ಮತ್ತಷ್ಟು ಪರಿಗಣನೆಗಾಗಿ ಪ್ರಶಾಸನ ಸಭೆಗೆ ಕಳುಹಿಸಬಹುದು.

(9) ಪ್ರಶಾಸನ ಸಭೆಯು ಅಂಗೀಕರಿಸಿದ ಶಾಸನಗಳನ್ನು ಕುಲಾಧಿಪತಿಯವರು ಅನುಮೋದಿಸುವವರೆಗೆ ಜಾರಿಗೊಳಿಸತಕ್ಕದ್ದಲ್ಲ.

**40. ವಿನಿಯಮಗಳು.–** (1) ಪ್ರಶಿಕ್ಷಣ ಪರಿಷತ್ತು ಎಲ್ಲಾ ಅಥವಾ ಯಾವುವೇ ಅಧಿಕಾರಗಳನ್ನು ಚಲಾಯಿಸಲು ಉಪಬಂಧಿಸುವುದಕ್ಕಾಗಿ ಮತ್ತು ವಿಶೇಷವಾಗಿ ಈ ಮುಂದಿನ ವಿಷಯಗಳ ಬಗ್ಗೆ ಉಪಬಂಧ ಕಲ್ಪಿಸುವುದಕ್ಕಾಗಿ ಈ ಅಧಿನಿಯಮಕ್ಕೆ ಸುಸಂಗತವಾಗಿರುವ ವಿನಿಯಮಗಳನ್ನು ರಚಿಸಬಹುದು, ಎಂದರೆ:–

(ಎ) ವಿಶ್ವವಿದ್ಯಾಲಯಕ್ಕೆ ವಿದ್ಯಾರ್ಥಿಗಳ ಪ್ರವೇಶ;

(ಬಿ) ಇತರ ವಿಶ್ವವಿದ್ಯಾಲಯಗಳ ಪರೀಕ್ಷೆಗಳು ಮತ್ತು ಪದವಿಗಳನ್ನು, ವಿಶ್ವವಿದ್ಯಾಲಯದ ಪರೀಕ್ಷೆ ಮತ್ತು ಪದವಿಗಳಿಗೆ ಸಮನಾದುವೆಂದು ಮನ್ನಣೆ ನೀಡುವುದು;

(ಸಿ) ವಿಶ್ವವಿದ್ಯಾಲಯದ ವ್ಯಾಸಂಗ ಕ್ರಮಗಳು ಮತ್ತು ಪರೀಕ್ಷೆಗಳು ಮತ್ತು ವಿಶ್ವವಿದ್ಯಾಲಯದ ಅಥವಾ ಸಂಯೋಜನೆಗೊಂಡ ಕಾಲೇಜುಗಳ ಅಥವಾ ವಿಶ್ವವಿದ್ಯಾಲಯದ ಇತರ ಸಂಸ್ಥೆಗಳ ವಿದ್ಯಾರ್ಥಿಗಳನ್ನು ಯಾವ ಷರತ್ತುಗಳ ಮೇಲೆ ವಿಶ್ವವಿದ್ಯಾಲಯದ ಪರೀಕ್ಷೆಗಳು ಅಥವಾ ಪದವಿಗಳು, ಡಿಪ್ಲೊಮೋಗಳು ಮತ್ತು ಇತರ ಪ್ರಮಾಣ ಪತ್ರಗಳಿಗೆ ಸೇರಿಸಿಕೊಳ್ಳತಕ್ಕದ್ದೋ ಆ ಷರತ್ತುಗಳು;

(ಡಿ) ವಿನಾಯಿತಿಗಳನ್ನು ನೀಡುವುದು ಮತ್ತು

(ಇ) ವಿನಿಯಮಗಳ ಮೂಲಕ ನಿಯಂತ್ರಿಸುವ ಅಗತ್ಯವಿರುವ ಅಥವಾ ನಿಯಂತ್ರಿಸಬಹುದಾದ ಯಾವುವೇ ಇತರ ವಿಷಯಗಳು

(2) ಪ್ರಶಿಕ್ಷಣ ಪರಿಷತ್ತು ಅಂಗೀಕರಿಸಿದ ಎಲ್ಲ ವಿನಿಯಮಗಳನ್ನು ಕುಲಾಧಿಪತಿಯವರ ಅನುಮೋದನೆಗಾಗಿ ಸಲ್ಲಿಸಲು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು. ರಾಜ್ಯ ಸರ್ಕಾರವು, ವಿಶ್ವವಿದ್ಯಾಲಯದಿಂದ ಸ್ವೀಕರಿಸಿದ ವಿನಿಯಮಗಳನ್ನು ಅವುಗಳನ್ನು ಸ್ವೀಕರಿಸಿದ ದಿನದಿಂದ ಎರಡು ತಿಂಗಳೊಳಗೆ ತನ್ನ ಟೀಕೆ ಟಿಪ್ಪಣಿಗಳೊಡನೆ ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು. ಕುಲಾಧಿಪತಿಯವರು, ರಾಜ್ಯ ಸರ್ಕಾರದಿಂದ ಈ ವಿನಿಯಮಗಳನ್ನು ಸ್ವೀಕರಿಸಿದ ದಿನದಿಂದ ಒಂದು ತಿಂಗಳೊಳಗೆ ಅವುಗಳನ್ನು ಅನುಮೋದಿಸಬಹುದು ಅಥವಾ ಮತ್ತಷ್ಟು ಪರಿಶೀಲನೆಗಾಗಿ ಅವುಗಳನ್ನು ಪ್ರಶಿಕ್ಷಣ ಪರಿಷತ್ತಿಗೆ ಹಿಂದಿರುಗಿಸಬಹುದು.

(3) ಎಲ್ಲ ವಿನಿಯಮಗಳು, ಕುಲಾಧಿಪತಿಯವರು ಅವುಗಳನ್ನು ಅನುಮೋದಿಸಿದ ದಿನಾಂಕದಿಂದ ಅಥವಾ ಕುಲಾಧಿಪತಿಯವರು ನಿರ್ದೇಶಿಸಬಹುದಾದಂಥ ಇತರ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

## ಅಧ್ಯಾಯ – VI

### ಫ್ಯಾಕಲ್ಟಿಗಳು

**41. ಫ್ಯಾಕಲ್ಟಿಗಳು ಮತ್ತು ವಿಭಾಗಗಳು.–** ಈ ಕೆಳಗೆ ಹೇಳಿದ ವಿಭಾಗಗಳನ್ನು ತನ್ನ ಅಡಿಯಲ್ಲಿ ಹೊಂದಿರುವಂಥ ಈ ಮುಂದಿನ ಫ್ಯಾಕಲ್ಟಿಗಳು ಇರತಕ್ಕದ್ದು:–

I. ಗೇಯ ಸಂಗೀತ (ಹಾಡುಗಾರಿಕೆ) ಫ್ಯಾಕಲ್ಟಿ

II. ವಾದ್ಯ ಸಂಗೀತ ಫ್ಯಾಕಲ್ಟಿ

III. ಸಂಗೀತ ಶಾಸ್ತ್ರದ ಫ್ಯಾಕಲ್ಟಿ

IV. ನೃತ್ಯದ ಫ್ಯಾಕಲ್ಟಿ

V. ಪ್ರದರ್ಶಕ ಕಲೆಗಳ ಫ್ಯಾಕಲ್ಟಿ.

VI. ನಾಟಕ ಫ್ಯಾಕಲ್ಟಿ

VII. ವಿಶ್ವವಿದ್ಯಾಲಯವು ನಿರ್ಧರಿಸಬಹುದಾದ ಇತರ ಫ್ಯಾಕಲ್ಟಿ

**1. ಗೇಯ ಸಂಗೀತ (ಹಾಡುಗಾರಿಕೆ) ಫ್ಯಾಕಲ್ಟಿ**

ಈ ಫ್ಯಾಕಲ್ಟಿಯ ಅಡಿಯಲ್ಲಿ ಕೆಳಗೆ ತಿಳಿಸಿರುವ ಸಂಗೀತ ವಿಭಾಗಗಳು ಇರುತ್ತವೆ.

ಎ. ಹಿಂದೂಸ್ತಾನೀ ಶಾಸ್ತ್ರೀಯ ಗಾಯನ ಸಂಗೀತ ವಿಭಾಗ

ಬಿ. ಕರ್ನಾಟಕ ಶಾಸ್ತ್ರೀಯ ಗಾಯನ ಸಂಗೀತ ವಿಭಾಗ

**II. ವಾದ್ಯ ಸಂಗೀತ ಫ್ಯಾಕಲ್ಟಿ**

ಎ. ತಂತಿವಾದ್ಯಗಳ ವಿಭಾಗ

ಬಿ. ಊದುವಾದ್ಯಗಳ ವಿಭಾಗ

ಸಿ. ತಾಳವಾದ್ಯಗಳ ವಿಭಾಗ

ಡಿ. ಡೋಲು ವಾದ್ಯಗಳ ವಿಭಾಗ

**III. ಸಂಗೀತ ಶಾಸ್ತ್ರದ ಫ್ಯಾಕಲ್ಟಿ**

ಎ. ಶಾಸ್ತ್ರ ವಿಭಾಗ

ಬಿ. ಹಸ್ತಪ್ರತಿ ವಿಭಾಗ

ಸಿ. ದೃಶ್ಯ ಧ್ವನಿ ವಿಭಾಗ

ಡಿ. ಸಂಶೋಧನಾ ವಿಧಿ–ವಿಧಾನ ವಿಭಾಗ

ಇ. ಗ್ರಂಥ ಸಂಪಾದನೆ ವಿಭಾಗ

ಎಫ್. ವಿಶ್ವ ಸಂಗೀತ ಶಾಸ್ತ್ರ ವಿಭಾಗ

ಜಿ. ಭಾಷಾಂತರ ವಿಭಾಗ

ಹೆಚ್. ವಸ್ತುಸಂಗ್ರಹಾಲಯ ಮತ್ತು ಪತ್ರಾಗಾರ ವಿಭಾಗ

IV. **ನೃತ್ಯ ಫ್ಯಾಕಲ್ಟಿ**

ಎ. ಭರತನಾಟ್ಯ ವಿಭಾಗ.

ಬಿ. ಕಥಕ್ ವಿಭಾಗ.

ಸಿ. ಕೂಚ್ಚುಪುಡಿ ವಿಭಾಗ.

ಡಿ. ಯಕ್ಷಗಾನ ಮತ್ತು ಜನಪದ ನೃತ್ಯ ವಿಭಾಗ.

V. **ಇತರ ಪ್ರದರ್ಶಕ ಕಲೆಗಳ ವಿಭಾಗ.**

ಎ. ವೇಷಭೂಷಣಗಳ ವಿಭಾಗ.

ಬಿ. ಅನುಮೇಶನ ವಿಭಾಗ.

ಸಿ. ಮಾನವಿಕಗಳ ವಿಭಾಗ.

ಡಿ. ಭಾರತೀಯ ಕಲೆಗಳು ಮತ್ತು ಸಂಸ್ಕೃತಿಯ ಇತಿಹಾಸ ವಿಭಾಗ.

ಇ. ಜನಪದಗೀತೆಗಳು, ಸಂಗೀತ ಮತ್ತು ನೃತ್ಯ ವಿಭಾಗ.

ಎಫ್. ಭಾಷಾಂತರ ವಿಭಾಗ.

ಜಿ. ವಸ್ತು ಸಂಗ್ರಹಾಲಯಗಳು ಮತ್ತು ಪತ್ರಗಾರ ವಿಭಾಗ.

**VI. ನಾಟಕ ಫ್ಯಾಕಲ್ಟಿ**

**VII. ವಿಶ್ವವಿದ್ಯಾಲಯವು ನಿರ್ಧರಿಸಬಹುದಾದ ಇತರ ಫ್ಯಾಕಲ್ಟಿ.**

**42. ಆಯ್ಕೆ ಸಮಿತಿಗಳು.**– (1) ವಿಶ್ವವಿದ್ಯಾಲಯವು ನಿರ್ವಹಿಸುವ ಸಂಸ್ಥೆಗಳಲ್ಲಿಯ ಪ್ರಾಧ್ಯಾಪಕರು, ಸಹ ಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರು ಮತ್ತು ಗ್ರಂಥಪಾಲರ ಹುದ್ದೆಗಳಿಗೆ ನೇಮಕ ಮಾಡುವ ಬಗ್ಗೆ ಕಾರ್ಯಕಾರಿ ಸಮಿತಿಗೆ ಶಿಫಾರಸ್ಸು ಮಾಡಲು ಒಂದು ಆಯ್ಕೆ ಸಮಿತಿ ಇರತಕ್ಕದ್ದು.

(2) ಕೆಳಕಂಡ ಕೋಷ್ಟಕದ (1)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾದ ಹುದ್ದೆಗಳ ನೇಮಕಾತಿಗಾಗಿ ಆಯ್ಕೆ ಸಮಿತಿಯು ಕುಲಪತಿ, ಸರ್ಕಾರದ ಒಬ್ಬ ನಾಮನಿರ್ದೇಶಿತ ವ್ಯಕ್ತಿ ಮತ್ತು ಸದರಿ ಕೋಷ್ಟಕದ (2)ನೇ ಅಂಕಣದಲ್ಲಿಯ ಸಂವಾದಿ ನಮೂದಿನಲ್ಲಿ ನಿರ್ದಿಷ್ಟಪಡಿಸಲಾದ ವ್ಯಕ್ತಿಗಳನ್ನು ಒಳಗೊಂಡಿರತಕ್ಕದ್ದು ಮತ್ತು ಇಲಾಖಾ ಮುಖ್ಯಸ್ಥರಿಲ್ಲದಿರುವ ಕಡೆ ಪ್ರಾಧ್ಯಾಪಕರು, ಸಹಪ್ರಾಧ್ಯಾಪಕರು ಅಥವಾ ಸಹಾಯಕ ಪ್ರಾಧ್ಯಾಪಕರ ನೇಮಕಾತಿಯ ಸಂದರ್ಭದಲ್ಲಿ ಕಾರ್ಯಕಾರಿ ಸಮಿತಿಯು ತನ್ನ ಸದಸ್ಯರ ಪೈಕಿಯಿಂದ ನಾಮನಿರ್ದೇಶನ ಮಾಡಿರುವ ವ್ಯಕ್ತಿಯನ್ನು ಸಹ ಒಳಗೊಂಡಿರತಕ್ಕದ್ದು.

**ಕೋಷ್ಟಕ**

| 1 | 2 |
|---|---|
| ಪ್ರಾಧ್ಯಾಪಕರು ಅಥವಾ ಸಹಪ್ರಾಧ್ಯಾಪಕರು | (i) ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರು, ಅವರು ಪ್ರಾಧ್ಯಾಪಕರಾಗಿದ್ದರೆ. |
| | (ii) ಕುಲಪತಿಯವರಿಂದ ನಾಮ ನಿರ್ದೇಶಿತರಾಗಬೇಕಾದ ಒಬ್ಬ ಡೀನ್ ಅಥವಾ ಪ್ರಾಧ್ಯಾಪಕರು. |
| | (iii) ಪ್ರಾಧ್ಯಾಪಕರು ಅಥವಾ ಸಹಪ್ರಾಧ್ಯಾಪಕರಿಗೆ ಸಂಬಂಧಪಟ್ಟ ವಿಷಯದಲ್ಲಿ ವಿಶೇಷ ಜ್ಞಾನ ಅಥವಾ ಆಸಕ್ತಿಯುಳ್ಳ, ಪ್ರಶಾಸನಸಭೆಯಿಂದ ನಾಮನಿರ್ದೇಶಿತರಾದ ವಿಶ್ವವಿದ್ಯಾಲಯದ ಸೇವೆಯಲ್ಲಿರದ ಮೂವರು ವ್ಯಕ್ತಿಗಳು. |

| | | |
|---|---|---|
| ಸಹಾಯಕ ಪ್ರಾಧ್ಯಾಪಕರು | (i) | ಸಂಬಂಧಪಟ್ಟ ವಿಭಾಗದ ಮುಖ್ಯಸ್ಥರು. |
| | (ii) | ಕುಲಪತಿಯವರಿಂದ ನಾಮನಿರ್ದೇಶಿತರಾಗಬೇಕಾದ ಒಬ್ಬ ಪ್ರಾಧ್ಯಾಪಕರು. |
| | (iii) | ಸಹಾಯಕ ಪ್ರಾಧ್ಯಾಪಕರಿಗೆ ಸಂಬಂಧಪಟ್ಟ ವಿಷಯದಲ್ಲಿ ವಿಶೇಷ ಜ್ಞಾನ ಅಥವಾ ಆಸಕ್ತಿಯುಳ್ಳ, ಪ್ರಶಾಸನಸಭೆಯಿಂದ ನಾಮ ನಿರ್ದೇಶಿತರಾದ, ವಿಶ್ವವಿದ್ಯಾಲಯದ ಸೇವೆಯಲ್ಲಿರದ ಇಬ್ಬರು ವ್ಯಕ್ತಿಗಳು. |
| ಗ್ರಂಥಪಾಲ | (i) | ಗ್ರಂಥಾಲಯ ವಿಜ್ಞಾನ ಅಥವಾ ಗ್ರಂಥಾಲಯ ಆಡಳಿತದ ಬಗ್ಗೆ ವಿಶೇಷ ಜ್ಞಾನವಿರುವ ಪ್ರಶಾಸನ ಸಭೆಯಿಂದ ನಾಮನಿರ್ದೇಶಿತರಾಗಬೇಕಾದ, ವಿಶ್ವವಿದ್ಯಾಲಯದ ಸೇವೆಯಲ್ಲಿರದ ಇಬ್ಬರು ವ್ಯಕ್ತಿಗಳು. |
| | (ii) | ಪ್ರಶಾಸನಸಭೆಯಿಂದ ನಾಮ ನಿರ್ದೇಶಿತನಾದ ವಿಶ್ವವಿದ್ಯಾಲಯದ ಸೇವೆಯಲ್ಲಿರದ ಒಬ್ಬ ವ್ಯಕ್ತಿ. |

**ವಿವರಣೆ.-I**. ಅಂತರ ವಿದ್ಯಾವಿಷಯಗಳ ಯೋಜನೆಗಾಗಿ ನೇಮಕಾತಿಗಳನ್ನು ಮಾಡುತ್ತಿರುವಲ್ಲಿ, ಯೋಜನೆಯ ಮುಖ್ಯಸ್ಥನನ್ನು ಸಂಬಂಧಪಟ್ಟ ಇಲಾಖೆಯ ಮುಖ್ಯಸ್ಥನೆಂದು ಭಾವಿಸತಕ್ಕದ್ದು.

ವಿವರಣೆ.-II. ನಾಮನಿರ್ದೇಶಿತರಾಗಬೇಕಾದ ಪ್ರಾಧ್ಯಾಪಕರು, ಆಯ್ಕೆ ಮಾಡಲಾಗುವ ವಿಶೇಷ ವಿಷಯಕ್ಕೆ ಸಂಬಂಧಿಸಿದ ಪ್ರಾಧ್ಯಾಪಕರಾಗಿರತಕ್ಕದ್ದು ಮತ್ತು ಕುಲಪತಿಯವರು, ಪ್ರಾಧ್ಯಾಪಕರನ್ನು ನಾಮನಿರ್ದೇಶಿಸುವುದಕ್ಕೆ ಮುಂಚೆ ಇಲಾಖಾ ಮುಖ್ಯಸ್ಥರು ಮತ್ತು ಫ್ಯಾಕಲ್ಟಿ ಡೀನರೊಂದಿಗೆ ಸಮಾಲೋಚಿಸತಕ್ಕದ್ದು.

**ವಿವರಣೆ.- III.** (1) (2)ನೇ ಅಂಕಣದಲ್ಲಿ ಉಲ್ಲೇಖಿಸಲಾದ ವಿಶೇಷ ವಿಷಯಕ್ಕೆ ಸಂಬಂಧಿಸಿದಂತೆ, ಸಂದರ್ಭಾನುಸಾರ, ಕಡೇ ಪಕ್ಷ ನಾಲ್ವರ ಪೈಕಿ ಮೂವರು ಅಥವಾ ಮೂವರು ಸದಸ್ಯರ ಪೈಕಿ ಇಬ್ಬರು ಆಯ್ಕೆ ಸಮಿತಿಯ ಸಭೆಯಲ್ಲಿ ಹಾಜರಿರತಕ್ಕದ್ದು.

(2) ಕುಲಪತಿಯವರು ಆಯ್ಕೆ ಸಮಿತಿಯ ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು.

(3) ಆಯ್ಕೆ ಸಮಿತಿಯ ಸಭೆಗಳನ್ನು ಕುಲಪತಿಯವರು ಸಮಾವೇಶಗೊಳಿಸತಕ್ಕದ್ದು.

(4) ಶಿಫಾರಸ್ಸುಗಳನ್ನು ಮಾಡುವಲ್ಲಿ ಆಯ್ಕೆ ಸಮಿತಿಯು ಅನುಸರಿಸಬೇಕಾದ ಕಾರ್ಯವಿಧಾನವು ನಿಯಮಿಸಬಹುದಾದಂತೆ ಇರತಕ್ಕದ್ದು.

(5) ಆಯ್ಕೆ ಸಮಿತಿಯು ಮಾಡಿದ ಶಿಫಾರಸ್ಸುಗಳನ್ನು ಅಂಗೀಕರಿಸಲು ಪ್ರಶಾಸನಸಭೆಗೆ ಸಾಧ್ಯವಾಗದಿದ್ದರೆ, ಅದು ಕಾರಣಗಳನ್ನು ದಾಖಲಿಸಿ, ಅಂತಿಮ ಆದೇಶಗಳಿಗಾಗಿ ಪ್ರಕರಣವನ್ನು ಕುಲಾಧಿಪತಿಯವರಿಗೆ ಒಪ್ಪಿಸತಕ್ಕದ್ದು.

(6) ತಾತ್ಕಾಲಿಕ ಹುದ್ದೆಗಳಿಗೆ ಮಾಡುವ ನೇಮಕಾತಿಗಳನ್ನು ಈ ಕೆಳಗೆ ಸೂಚಿಸಲಾದಂತೆ ಮಾಡತಕ್ಕದ್ದು:-

(i) ತಾತ್ಕಾಲಿಕ ಖಾಲಿಸ್ಥಾನಗಳು ಒಂದು ಶೈಕ್ಷಣಿಕ ವರ್ಷಕ್ಕಿಂತ ಹೆಚ್ಚಿನ ಅವಧಿಯವರೆಗಿನದಾಗಿದ್ದರೆ, ಅದನ್ನು ಆಯ್ಕೆ ಸಮಿತಿಯ ಸಲಹೆಯೊಂದಿಗೆ, ಪೂರ್ವೋಕ್ತ ಉಪಬಂಧಗಳಲ್ಲಿ ಸೂಚಿಸಿರುವ ಪ್ರಕ್ರಿಯೆಗನುಸಾರವಾಗಿ ಭರ್ತಿ ಮಾಡತಕ್ಕದ್ದು:

ಪರಂತು, ಕೆಲಸದ ಹಿತಾಸಕ್ತಿಯಲ್ಲಿ ಖಾಲಿ ಸ್ಥಾನವನ್ನು ಭರ್ತಿ ಮಾಡುವುದು ಅಗತ್ಯವೆಂದು ಕುಲಪತಿಯವರಿಗೆ ಮನದಟ್ಟಾದರೆ, (2)ನೇ ಉಪ-ಖಂಡದಲ್ಲಿ ಉಲ್ಲಿಖಿತವಾದ ಸ್ಥಳೀಯ ಆಯ್ಕೆ ಸಮಿತಿಯು ಆರು ತಿಂಗಳಿಗೆ ಮೀರದ ಅವಧಿಗೆ, ತಾತ್ಕಾಲಿಕ ಆಧಾರದ ಮೇಲೆ ನೇಮಕಾತಿ ಮಾಡಬಹುದು.

(ii) ತಾತ್ಕಾಲಿಕ ಖಾಲಿ ಸ್ಥಾನವು ಒಂದು ವರ್ಷಕ್ಕಿಂತ ಕಡಿಮೆ ಅವಧಿಯದಾಗಿದ್ದರೆ ಅಂಥ ಖಾಲಿಸ್ಥಾನಕ್ಕೆ ನೇಮಕಾತಿಯನ್ನು, ಸಂಬಂಧಪಟ್ಟ ಫ್ಯಾಕಲ್ಟಿಯ ಡೀನ್, ಇಲಾಖಾ ಮುಖ್ಯಸ್ಥ ಹಾಗೂ ಕುಲಪತಿಯವರಿಂದ ನಾಮನಿರ್ದೇಶಿತರಾದ ವ್ಯಕ್ತಿ ಇವರನ್ನು ಒಳಗೊಂಡಿರುವ ಸ್ಥಳೀಯ ಆಯ್ಕೆ ಸಮಿತಿಯ ಶಿಫಾರಸ್ಸಿನ ಮೇಲೆ ಮಾಡತಕ್ಕದ್ದು:

ಪರಂತು, ಒಬ್ಬನೇ ವ್ಯಕ್ತಿಯು ಡೀನ್ ಮತ್ತು ಇಲಾಖಾ ಮುಖ್ಯಸ್ಥರ ಪದವನ್ನು ಧಾರಣ ಮಾಡಿದ್ದರೆ ಆಯ್ಕೆ ಸಮಿತಿಯು ಕುಲಪತಿಯವರಿಂದ ನಾಮನಿರ್ದೇಶಿತರಾದ ಇಬ್ಬರು ವ್ಯಕ್ತಿಗಳನ್ನು ಒಳಗೊಂಡಿರಬಹುದು:

ಮತ್ತು ಪರಂತು, ಅಧ್ಯಾಪಕ ಹುದ್ದೆಗಳಲ್ಲಿ ಮರಣ ಅಥವಾ ಇತರ ಯಾವುದೇ ಕಾರಣಕ್ಕಾಗಿ ಇದ್ದಕ್ಕಿದ್ದಂತೆ ಉಂಟಾದ ಆಕಸ್ಮಿಕ ಖಾಲಿ ಸ್ಥಾನದ ಸಂದರ್ಭದಲ್ಲಿ, ಡೀನರು, ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರೊಂದಿಗೆ ಸಮಾಲೋಚಿಸಿ, ಒಂದು ತಿಂಗಳಿಗಾಗಿ ತಾತ್ಕಾಲಿಕ ನೇಮಕಾತಿಯನ್ನು ಮಾಡಿ, ಅಂಥ ನೇಮಕಾತಿಯ ಬಗ್ಗೆ ಕುಲಪತಿಯವರಿಗೆ ಮತ್ತು ಕುಲಸಚಿವರಿಗೆ ವರದಿ ಮಾಡತಕ್ಕದ್ದು.

(iii) ತಾತ್ಕಾಲಿಕವಾಗಿ ನೇಮಕಗೊಂಡ ಯಾವೊಬ್ಬ ಬೋಧಕನು ತಾನು ಈ ಶಾಸನಗಳ ಅಡಿಯಲ್ಲಿ ನೇಮಕಾತಿಗಾಗಿ ಇರುವ ನಿಯತ ಆಯ್ಕೆ ಸಮಿತಿಯಿಂದ ಶಿಫಾರಸ್ಸು ಪಡೆದಿರದಿದ್ದರೆ, ಸಂದರ್ಭಾನುಸಾರ, ತಾತ್ಕಾಲಿಕ ಅಥವಾ ಖಾಯಂ ನೇಮಕಾತಿಗಾಗಿ ತದನಂತರ ಸ್ಥಳೀಯ ಆಯ್ಕೆ ಸಮಿತಿ ಅಥವಾ ಕ್ರಮಬದ್ಧ ಆಯ್ಕೆ ಸಮಿತಿಯಿಂದ ಆಯ್ಕೆಗೊಂಡ ಹೊರತು, ಅಂಥ ತಾತ್ಕಾಲಿಕ ಉದ್ಯೋಗದಲ್ಲಿ ಮುಂದುವರಿಯತಕ್ಕದ್ದಲ್ಲ.

## ಅಧ್ಯಾಯ – VII

## ವಿಶ್ವವಿದ್ಯಾಲಯದ ನಿಧಿಗಳು

**43. ಸಾಮಾನ್ಯ ನಿಧಿಗಳು.–** ವಿಶ್ವವಿದ್ಯಾಲಯವು ಒಂದು ಸಾಮಾನ್ಯ ನಿಧಿಯನ್ನು ಹೊಂದಿರತಕ್ಕದ್ದು, ಅದಕ್ಕೆ,–

(ಎ) ಶುಲ್ಕಗಳು, ಅನುದಾನಗಳು, ದಾನಗಳು ಮತ್ತು ಕೊಡುಗೆಗಳು, ಯಾವುವಾದರೂ ಇದ್ದರೆ, ಅವುಗಳಿಂದ ಬರುವ ವರಮಾನ;

(ಬಿ) ಕೇಂದ್ರ ಸರ್ಕಾರದಿಂದ ಮಾಡಲಾದ ಯಾವುದೇ ವಂತಿಗೆ ಅಥವಾ ಅನುದಾನಗಳು, ಯಾವುವಾದರೂ ಇದ್ದರೆ, ಅವು ಅಥವಾ ಯಾವುದೇ ರಾಜ್ಯ ಸರ್ಕಾರ, ವಿಶ್ವವಿದ್ಯಾಲಯ ಅನುದಾನದ ಆಯೋಗ ಅಥವಾ ಅಂಥದೇ ಪ್ರಾಧಿಕಾರ, ಯಾವುದೇ ಸ್ಥಳೀಯ ಪ್ರಾಧಿಕಾರ ಅಥವಾ ಸರ್ಕಾರದ ಒಡೆತನದಲ್ಲಿರುವ ಅಥವಾ ಅದರ ನಿಯಂತ್ರಣದಲ್ಲಿರುವ ಯಾವುದೇ ನಿಗಮದಿಂದ ಮಾಡಲಾದ ಯಾವುದೇ ವಂತಿಗೆ ಅಥವಾ ಅನುದಾನ; ಮತ್ತು

(ಸಿ) ದತ್ತಿಗಳು ಮತ್ತು ಇತರ ಸ್ವೀಕೃತಿಗಳು,

–ಜಮೆಯಾಗತಕ್ಕದ್ದು.

**44. ಇತರ ನಿಧಿಗಳು.–** ವಿಶ್ವವಿದ್ಯಾಲಯವು, ಶಾಸನಗಳ ಮೂಲಕ ನಿಯಮಿಸಬಹುದಾದಂಥ ಇತರ ನಿಧಿಗಳನ್ನು ಹೊಂದಿರಬಹುದು.

**45. ಸಾಲ ಪಡೆದುಕೊಳ್ಳುವ ಅಧಿಕಾರ.–** ವಿಶ್ವವಿದ್ಯಾಲಯವು, ಶಾಸನಗಳ ಮೂಲಕ ನಿಯಮಿಸಬಹುದಾದ ಯಾವುವೇ ಉದ್ದೇಶಗಳಿಗಾಗಿ, ಒಂದು ಬ್ಯಾಂಕು ಅಥವಾ ನಿಗಮದಿಂದ ಹಣವನ್ನು ಸಾಲ ಪಡೆದುಕೊಳ್ಳಬಹುದು. ಸಾಲ ಪಡೆದುಕೊಂಡ ಹಣದ ಒಟ್ಟು ಮೊಬಲಗು ಐದು ಲಕ್ಷ ರೂಪಾಯಿಗಳನ್ನು ಮೀರುವಲ್ಲಿ, ಅಂಥ ಸಾಲಕ್ಕೆ ಸರ್ಕಾರದ ಪೂರ್ವ ಅನುಮೋದನೆಯನ್ನು ಪಡೆದುಕೊಳ್ಳತಕ್ಕದ್ದು.

**46. ನಿಧಿಗಳ ನಿರ್ವಹಣೆ.–** ವಿಶ್ವವಿದ್ಯಾಲಯದ ಎಲ್ಲ ನಿಧಿಗಳನ್ನು ಶಾಸನಗಳ ಮೂಲಕ ನಿಯಮಿಸಬಹುದಾದಂಥ ವಿಧಾನದಲ್ಲಿ ನಿರ್ವಹಿಸತಕ್ಕದ್ದು.

**47. ಲೆಕ್ಕ ಪರಿಶೋಧನೆಗೆ ನಿರ್ದೇಶಿಸಲು ಸರ್ಕಾರದ ಅಧಿಕಾರ.–** ಸರ್ಕಾರವು ಅವಶ್ಯಕವೆಂದು ಭಾವಿಸಿದಾಗಲೆಲ್ಲಾ ತಾನು ನಿರ್ದೇಶಿಸಬಹುದಾದಂಥ ಲೆಕ್ಕ ಪರಿಶೋಧಕರಿಂದ ವಿಶ್ವವಿದ್ಯಾಲಯದ ಲೆಕ್ಕಪತ್ರಗಳ ಲೆಕ್ಕಪರಿಶೋಧನೆ ನಡೆಸುವಂತೆ ಆದೇಶಿಸುವ ಅಧಿಕಾರವನ್ನು ಹೊಂದಿರತಕ್ಕದ್ದು.

**48. ಹಣಕಾಸಿನ ಅಂದಾಜುಗಳು.–** (1) ಕುಲಪತಿಯವರು, ನಿಯಮಿಸಬಹುದಾದಂಥ ದಿನಾಂಕದಂದು ಅಥವಾ ಅದಕ್ಕಿಂತ ಮೊದಲು, ಮುಂಬರುವ ವರ್ಷಕ್ಕಾಗಿ ವಿಶ್ವವಿದ್ಯಾಲಯದ ಹಣಕಾಸು ಅಂದಾಜುಗಳನ್ನು ಸಿದ್ಧಪಡಿಸುವಂತೆ ಮತ್ತು ಅದನ್ನು ಅನುಮೋದನೆಗಾಗಿ ಪ್ರಶಾಸನ ಸಭೆಯ ಮುಂದೆ ಇಡುವಂತೆ ಮಾಡತಕ್ಕದ್ದು.

(2) ಪ್ರಶಾಸನ ಸಭೆಯು ತಾನು ಸೂಕ್ತವೆಂದು ಭಾವಿಸುವಂಥ ಮಾರ್ಪಾಟುಗಳನ್ನು ಮಾಡಿ ಹಣಕಾಸು ಅಂದಾಜುಗಳನ್ನು ಅನುಮೋದಿಸಬಹುದು ಮತ್ತು ಪ್ರಶಾಸನ ಸಭೆ ಅನುಮೋದಿಸಿದ ಹಣಕಾಸು ಅಂದಾಜುಗಳಿಗನುಸಾರವಾಗಿ ಹೊರತು ಯಾವ ವೆಚ್ಚವನ್ನೂ ಮಾಡತಕ್ಕದ್ದಲ್ಲ.

**49. ವಾರ್ಷಿಕ ಲೆಕ್ಕಪತ್ರಗಳು ಮತ್ತು ಲೆಕ್ಕ ಪರಿಶೋಧನೆ.–** (1) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕ-ಪತ್ರಗಳನ್ನು ಪ್ರಶಿಕ್ಷಣ ಪರಿಷತ್ತಿನ ನಿರ್ದೇಶನದ ಮೇರೆಗೆ ಸಿದ್ಧಪಡಿಸತಕ್ಕದ್ದು.

(2) ಹಾಗೆ ಸಿದ್ಧಪಡಿಸಿದ ವಾರ್ಷಿಕ ಲೆಕ್ಕಪತ್ರಗಳನ್ನು ಪ್ರಶಾಸನ ಸಭೆಯು ತನ್ನ ಮುಂದಿನ ನಿಕಟಸಭೆಯಲ್ಲಿ ಪರಿಗಣಿಸತಕ್ಕದ್ದು. ಪ್ರಶಾಸನ ಸಭೆಯು ಅದರ ಸಂಬಂಧದಲ್ಲಿ ಒಂದು ನಿರ್ಣಯವನ್ನು ಹೊರಡಿಸಬಹುದು ಮತ್ತು ಅದನ್ನು ಪ್ರಶಿಕ್ಷಣ ಪರಿಷತ್ತಿಗೆ ತಿಳಿಸಬಹುದು. ಪ್ರಶೀಕ್ಷಣ ಪರಿಷತ್ತು ಪ್ರಶಾಸನ ಸಭೆಯು ಮಾಡಿದ ಸಲಹೆಗಳನ್ನು ಪರಿಗಣಿಸತಕ್ಕದ್ದು ಮತ್ತು ತಾನು ಸೂಕ್ತವೆಂದು ಭಾವಿಸುವಂತ: ಕ್ರಮವನ್ನು ಅದರ ಬಗ್ಗೆ ತೆಗೆದುಕೊಳ್ಳತಕ್ಕದ್ದು ಮತ್ತು ತನ್ನ ಮುಂದಿನ ಸಭೆಯಲ್ಲಿ ತಾನು ತೆಗೆದುಕೊಂಡ ಕ್ರಮವನ್ನು ಅಥವಾ ಕ್ರಮ ಕೈಗೊಳ್ಳುವುದಕ್ಕೆ ಕಾರಣಗಳನ್ನು ಪ್ರಶಾಸನ ಸಭೆಗೆ ತಿಳಿಸತಕ್ಕದ್ದು.

(3) ವಿಶ್ವವಿದ್ಯಾಲಯದ ಲೆಕ್ಕಪತ್ರಗಳನ್ನು ರಾಜ್ಯ ಲೆಕ್ಕಪತ್ರಗಳ ಇಲಾಖೆಯ ನಿಯಂತ್ರಕರು ವರ್ಷಕ್ಕೊಮ್ಮೆ ಏಪ್ರೀಲ್ ತಿಂಗಳಲ್ಲಿ ಲೆಕ್ಕಪರಿಶೋಧನೆ ಮಾಡತಕ್ಕದ್ದು.

(4) ಹಾಗೆ ಲೆಕ್ಕಪರಿಶೋಧನೆ ಮಾಡಿದ ಲೆಕ್ಕಪತ್ರಗಳನ್ನು ಪ್ರಶಾಸನ ಸಭೆಯಮುಂದೆ ಇರಿಸತಕ್ಕದ್ದು ಮತ್ತು ತದನಂತರ ಅದನ್ನು ಪ್ರತಿ ವರ್ಷದ ಸೆಪ್ಟೆಂಬರ ಅಂತ್ಯಕ್ಕೆ ಮುಂಚೆ ತನ್ನ ಟೀಕೆಟಿಪ್ಪಣೆಗಳೊಡನೆ ರಾಜ್ಯ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು. ರಾಜ್ಯ ಸರ್ಕಾರವು ಅದನ್ನು ರಾಜ್ಯ ವಿಧಾನ ಮಂಡಳದ ಮುಂದೆ ಅದರ ನಂತರದ ನಿಕಟ ಅಧಿವೇಶನದಲ್ಲಿ ಇರಿಸತಕ್ಕದ್ದು.

**50. ವಾರ್ಷಿಕ ವರದಿ.-** (1) ಪ್ರಶಿಕ್ಷಣ ಪರಿಷತ್ತು ಪ್ರತಿಯೊಂದು ಹಣಕಾಸು ವರ್ಷಕ್ಕೆ, ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ವಿವರಗಳನ್ನು ಒಳಗೊಂಡ ವಾರ್ಷಿಕ ವರದಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ಶಾಸನಗಳ ಮೂಲಕ ನಿಯಮಿಸಬಹುದಾದಂಥ ದಿನಾಂಕಗಳಂದು ಅಥವಾ ಅದಕ್ಕೆ ಮೊದಲು ಪ್ರಶಾಸನ ಸಭೆಗೆ ಸಲ್ಲಿಸತಕ್ಕದ್ದು. ಪ್ರಶಾಸನ ಸಭೆಯು ಅವುಗಳ ಮೇಲೆ ನಿರ್ಣಯಗಳನ್ನು ಹೊರಡಿಸಬಹುದು ಮತ್ತು ಪ್ರಶಿಕ್ಷಣ ಪರಿಷತ್ತು ಅದಕ್ಕನುಸಾರವಾಗಿ ಕ್ರಮಕೈಗೊಳ್ಳತಕ್ಕದ್ದು. ಕೈಗೊಳ್ಳಲಾದ ಕ್ರಮವನ್ನು ಪ್ರಶಾಸನ ಸಭೆಗೆ ತಿಳಿಸತಕ್ಕದ್ದು.

(2) ವಾರ್ಷಿಕ ವರದಿಯ ಪ್ರತಿಗಳನ್ನು ಹಾಗೂ ಅವುಗಳ ಮೇಲಿನ ಪ್ರಶಾಸನ ಸಭೆಯ ನಿರ್ಣಯಗಳನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಅವುಗಳನ್ನು ಮಂಡಿಸತಕ್ಕದ್ದು.

## ಅಧ್ಯಾಯ – VIII

### ಸೇವಾ ಷರತ್ತುಗಳು

**51. ನಿವೃತ್ತಿ ವೇತನ, ಉಪದಾನ ಮೊದಲಾದವುಗಳು.-** (1) ವಿಶ್ವವಿದ್ಯಾಲಯವು ವಿಶ್ವವಿದ್ಯಾಲಯದಿಂದ ನಿಯೋಜಿತರಾದ ಅಧಿಕಾರಿಗಳು, ಅಧ್ಯಾಪಕರು ಮತ್ತು ಇತರ ವ್ಯಕ್ತಿಗಳ ಪ್ರಯೋಜನಕ್ಕಾಗಿ ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಷರತ್ತುಗಳಿಗೊಳಪಟ್ಟು ತಾನು ಉಚಿತವೆಂದು ಭಾವಿಸುವಂಥ ನಿವೃತ್ತಿ ವೇತನ, ಉಪದಾನ, ವಿಮೆ ಮತ್ತು ಭವಿಷ್ಯ ನಿಧಿಗಳನ್ನು ಪ್ರಾರಂಭಿಸತಕ್ಕದ್ದು.

(2) ವಿಶ್ವವಿದ್ಯಾಲಯವು, (1)ನೇ ಉಪ-ಪ್ರಕರಣದ ಅಡಿಯಲ್ಲಿ ಭವಿಷ್ಯ ನಿಧಿಯನ್ನು ಪ್ರಾರಂಭಿಸಿರುವಲ್ಲಿ, ಸರ್ಕಾರವು, ಭವಿಷ್ಯ ನಿಧಿಗಳ ಅಧಿನಿಯಮ, 1925 (1925ರ ಕೇಂದ್ರಾಧಿನಿಯಮ 19)ರ ಉಪಬಂಧಗಳು, ವಿಶ್ವವಿದ್ಯಾಲಯವು ಒಂದು ಸ್ಥಳೀಯ ಪ್ರಾಧಿಕಾರವೆಂಬಂತೆ ಮತ್ತು ನಿಧಿಯು ಸರ್ಕಾರಿ ಭವಿಷ್ಯ ನಿಧಿಯೆಂಬಂತೆ ಅಂಥ ನಿಧಿಗೆ ಅನ್ವಯವಾಗತಕ್ಕದ್ದೆಂದು ಘೋಷಿಸಬಹುದು.

(3) ವಿಶ್ವವಿದ್ಯಾಲಯವು, ಹಣಕಾಸು ಸಮಿತಿಯೊಂದಿಗೆ ಸಮಾಲೋಚಿಸಿ ತಾನು ನಿರ್ಧರಿಸಬಹುದಾದಂಥ ರೀತಿಯಲ್ಲಿ, ಭವಿಷ್ಯ ನಿಧಿಯ ಮೊಬಲಗನ್ನು ತೊಡಗಿಸಬಹುದು.

**52. ನೇಮಕಾತಿ ವಿಧಾನ ಮತ್ತು ಸೇವಾ ಷರತ್ತುಗಳು.-** ಈ ಅಧಿನಿಯಮದ ಉಪಬಂಧಗಳಿಗೊಳಪಟ್ಟು, ವಿಶ್ವವಿದ್ಯಾಲಯದಲ್ಲಿ ನಿಯೋಜಿತರಾದ ಅಧಿಕಾರಿಗಳು, ಅಧ್ಯಾಪಕರು ಮತ್ತು ಇತರ ವ್ಯಕ್ತಿಗಳ ನೇಮಕಾತಿ, ಆಯ್ಕೆಯ ಕಾರ್ಯವಿಧಾನ, ವೇತನ ಮತ್ತು ಭತ್ಯಗಳು ಮತ್ತು ಇತರ ಸೇವಾ ಷರತ್ತುಗಳು ನಿಯಮಿಸಬಹುದಾದಂತೆ ಇರತಕ್ಕದ್ದು.

**ವಿವರಣೆ.-** ಈ ಪ್ರಕರಣದ ಉದ್ದೇಶಗಳಿಗಾಗಿ, "ಅಧಿಕಾರಿಗಳು ಎಂಬ ಪದವು ಕುಲಾಧಿಪತಿ ಮತ್ತು ಸಹ ಕುಲಾಧಿಪತಿಯವರನ್ನು ಒಳಗೊಳ್ಳತಕ್ಕದ್ದಲ್ಲ.

**53. ವಿಭಾಗದ ಮುಖ್ಯಸ್ಥರ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು.-** (1) ವಿಶ್ವವಿದ್ಯಾಲಯದ ಪ್ರತಿಯೊಂದು ವಿಭಾಗದ, ಪ್ರಾಧ್ಯಾಪಕರಾಗಿರುವ ಒಬ್ಬರನ್ನು ಮುಖ್ಯಸ್ಥರನ್ನಾಗಿ ಹೊಂದಿರತಕ್ಕದ್ದು ಮತ್ತು ಅವರ ಕರ್ತವ್ಯಗಳು ಮತ್ತು ಪ್ರಕಾರ್ಯಗಳು ಮತ್ತು ನೇಮಕಾತಿಯ ನಿಬಂಧನೆಗಳು ಮತ್ತು ಷರತ್ತುಗಳು ನಿಯಮಿಸಬಹುದಾದಂತೆ ಇರತಕ್ಕದ್ದು:

ಪರಂತು, ಯಾವುದೇ ಇಲಾಖೆಯಲ್ಲಿ ಒಬ್ಬರಿಗಿಂತ ಹೆಚ್ಚು ಮಂದಿ ಪ್ರಾಧ್ಯಾಪಕರಿದ್ದರೆ, ಇಲಾಖಾ ಮುಖ್ಯಸ್ಥರನ್ನು ನಿಯಮಿಸಬಹುದಾದ ರೀತಿಯಲ್ಲಿ ನೇಮಕ ಮಾಡತಕ್ಕದ್ದು:

ಮತ್ತು ಪರಂತು, ಇಲಾಖೆಯಲ್ಲಿ ಪ್ರಾಧ್ಯಾಪಕರು ಇಲ್ಲದಿದ್ದಲ್ಲಿ, ಸಹ ಪ್ರಾಧ್ಯಾಪಕರು ಅಥವಾ ಸಹಾಯಕ ಪ್ರಾಧ್ಯಾಪಕರನ್ನು ನಿಯಮಿಸಲಾದ ರೀತಿಯಲ್ಲಿ ಇಲಾಖಾ ಮುಖ್ಯಸ್ಥರನ್ನಾಗಿ ನೇಮಕ ಮಾಡಬಹುದು.

(2) ಪ್ರಾಧ್ಯಾಪಕರು ಅಥವಾ ಸಹ-ಪ್ರಾಧ್ಯಾಪಕರು ಅಥವಾ ಸಹಾಯಕ ಪ್ರಾಧ್ಯಾಪಕರಿಗೆ ಇಲಾಖಾ ಮುಖ್ಯಸ್ಥರ ಹುದ್ದೆಯನ್ನು ನಿರಾಕರಿಸುವ ಅವಕಾಶವಿರತಕ್ಕದ್ದು.

(3) ಇಲಾಖಾ ಮುಖ್ಯಸ್ಥನಾಗಿ ನೇಮಕಗೊಂಡ ವ್ಯಕ್ತಿಯು, ಮೂರು ವರ್ಷಗಳ ಅವಧಿಯವರೆಗೆ ಇಲಾಖಾ ಮುಖ್ಯಸ್ಥನಾಗಿ ಪದಧಾರಣ ಮಾಡತಕ್ಕದ್ದು ಮತ್ತು ಮರು ನೇಮಕಾತಿಗೆ ಅರ್ಹರಾಗಿರತಕ್ಕದ್ದು.

(4) ಇಲಾಖಾ ಮುಖ್ಯಸ್ಥನು ತನ್ನ ಪದಾವಧಿಯ ಯಾವುದೇ ಕಾಲದಲ್ಲಿ ತನ್ನ ಪದಕ್ಕೆ ರಾಜೀನಾಮೆ ನೀಡಬಹುದು.

(5) ಇಲಾಖಾ ಮುಖ್ಯಸ್ಥನು ನಿಯಮಿಸಬಹುದಾದ ಅಂಥ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

**54. ಫ್ಯಾಕಲ್ಟಿಗಳ ಡೀನರ ಸೇವಾ ನಿಬಂಧನೆಗಳು ಮತ್ತು ಷರತ್ತುಗಳು.–** ಫ್ಯಾಕಲ್ಟಿಯ ಪ್ರತಿಯೊಬ್ಬ ಡೀನರು ಮೊದಲನೇ ಶಾಸನಗಳಲ್ಲಿ ನಿರ್ದಿಷ್ಟಪಡಿಸಲಾದಂಥ ರೀತಿಯಲ್ಲಿ ನೇಮಿತರಾಗತಕ್ಕದ್ದು ಮತ್ತು ಅವರು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**55. ಅಧ್ಯಾಪಕರ ಕರ್ತವ್ಯಗಳು.–** (1) ವಿಶ್ವವಿದ್ಯಾಲಯದ ಮಾನ್ಯತೆ ಪಡೆದ ವಿದ್ಯಾ ಸಂಸ್ಥೆಯ ಪ್ರತಿಯೊಬ್ಬ ಅಧ್ಯಾಪಕನು, ಕಾಲಕಾಲಕ್ಕೆ ವಿಶ್ವವಿದ್ಯಾಲಯದಿಂದ ಅವನಿಗೆ ವಹಿಸಲಾದ ಬೋಧನೆ, ಸಂಶೋಧನೆ, ಪರೀಕ್ಷೆ ಅಥವಾ ಶೈಕ್ಷಣಿಕ ಕಾರ್ಯಗಳಿಗೆ ಸಂಬಂಧಪಟ್ಟ ಕೆಲಸಗಳನ್ನು ನಿರ್ವಹಿಸತಕ್ಕದ್ದು.

(2) (1)ನೇ ಉಪಪ್ರಕರಣದ ಉದ್ದೇಶಗಳಿಗಾಗಿ, ವಿಶ್ವವಿದ್ಯಾಲಯದ ಮತ್ತು ವಿಶ್ವವಿದ್ಯಾಲಯಕ್ಕೆ ಸಂಯೋಜನೆಗೊಂಡ ಕಾಲೇಜಿನ ಸೇವೆಯಲ್ಲಿರುವ ಬೋಧಕ ಮತ್ತು ಬೋಧಕೇತರ ನೌಕರರನ್ನು ವಿಶ್ವವಿದ್ಯಾಲಯವು ಆಡಳಿತಾತ್ಮಕವಾಗಿ ನಿಯಂತ್ರಿಸತಕ್ಕದ್ದು ಮತ್ತು ಅವರು ಕಾಲಕಾಲಕ್ಕೆ ವಿಶ್ವವಿದ್ಯಾಲಯವು ನೀಡಿದ ಸೂಚನೆಗಳು ಅಥವಾ ಆದೇಶಗಳನ್ನು ಪಾಲಿಸತಕ್ಕದ್ದು.

**56. ಪರೀಕ್ಷಾ ಕಾರ್ಯವನ್ನು ನೆರವೇರಿಸುವ ಹೊಣೆ.–** (1) ಯಾವ ವ್ಯಕ್ತಿಗೆ ಪ್ರಶ್ನೆ ಪತ್ರಿಕೆಯನ್ನು ಸಿದ್ಧಪಡಿಸುವುದು, ಪರಿವೀಕ್ಷಣೆ, ಮೇಲ್ವಿಚಾರಣೆ, ಮೌಲ್ಯಮಾಪನ, ಪ್ರಾಯೋಗಿಕ ಪರೀಕ್ಷೆಗಳನ್ನು ನಡೆಸುವುದು, ಪ್ರಶ್ನೆ ಪತ್ರಿಕೆಗಳ ಮತ್ತು ಉತ್ತರ ಪತ್ರಿಕೆಗಳ ಮುದ್ರಣ ಮತ್ತು ಅಂಕಪಟ್ಟಿಯನ್ನು ಸಿದ್ಧಪಡಿಸುವುದೇ ಮುಂತಾದ ಪರೀಕ್ಷೆಗೆ ಸಂಬಂಧಿಸಿದ ಕಾರ್ಯವನ್ನು ಮತ್ತು ಅದಕ್ಕೆ ಪ್ರಾಸಂಗಿಕವಾದ ಮತ್ತು ಅದಕ್ಕೆ ಸಂಬಂಧಿಸಿದಂಥ ಎಲ್ಲ ಚಟುವಟಿಕೆಗಳನ್ನು ವಹಿಸಲಾಗಿದೆಯೋ ಆ ವ್ಯಕ್ತಿಯು, ಅಂಥ ಕರ್ತವ್ಯಗಳನ್ನು ಶೈಕ್ಷಣಿಕ ಗುಣಮಟ್ಟಗಳನ್ನು ಸಾಧಿಸುವುದಕ್ಕಾಗಿ ವಿವೇಕದಿಂದ ಮತ್ತು ಅತ್ಯಂತ ಪ್ರಾಮಾಣಿಕತೆಯಿಂದ ನಿರ್ವಹಿಸತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಪರೀಕ್ಷಾ ಕಾರ್ಯವನ್ನು ಹಂಚಿಕೆ ಮಾಡಲಾಗಿರುವ ಯಾವೊಬ್ಬ ವ್ಯಕ್ತಿಯು, ಕರ್ತವ್ಯಗಳ ಉಲ್ಲಂಘನೆಯ ತಪ್ಪಿತಸ್ಥನೆಂದು ಕಂಡು ಬಂದರೆ ಅಥವಾ ದುರ್ನಡತೆಯಲ್ಲಿ ಪಾಲ್ಗೊಂಡಿದ್ದರೆ, ಅಪರಾಧ ನಿರ್ಣಯವಾದ ತರುವಾಯ, ಮೂರು ವರ್ಷಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಎರಡು ಸಾವಿರ ರೂಪಾಯಿಗಳ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

(3) ಕುಲಸಚಿವರು (ಮೌಲ್ಯಮಾಪನ) ನೀಡಿದ ದೂರಿನ ಮೇಲಲ್ಲದೆ ಈ ಪ್ರಕರಣದ ಅಡಿಯಲ್ಲಿ, ದಂಡನೀಯವಾದ ಒಂದು ಅಪರಾಧದ ಅಥವಾ ಅಂಥ ಅಪರಾಧದ ದುಷ್ಪ್ರೇರಣೆಯ ಸಂಜ್ಞಾನವನ್ನು ಯಾವುದೇ ನ್ಯಾಯಾಲಯವು ತೆಗೆದುಕೊಳ್ಳತಕ್ಕದ್ದಲ್ಲ.

**57. ಅಪರಾಧದ ದುಷ್ಪ್ರೇರಣೆಗಾಗಿ ಶಿಕ್ಷೆ.–** 64ನೇ ಪ್ರಕರಣದ ಅಡಿಯಲ್ಲಿ ದಂಡನೀಯವಾದ ಒಂದು ಅಪರಾಧವನ್ನು ಪ್ರಚೋದಿಸುವ ಅಥವಾ ದುಷ್ಪ್ರೇರಿಸುವ ಯಾವೊಬ್ಬ ವ್ಯಕ್ತಿಯು, ಅಪರಾಧ ನಿರ್ಣಯವಾದ ತರುವಾಯ, ಆ ಪ್ರಕರಣದಲ್ಲಿ ಅದಕ್ಕಾಗಿ ಉಪಬಂಧಿಸಲಾದ ಶಿಕ್ಷೆಯಿಂದಲೇ ದಂಡಿತನಾಗತಕ್ಕದ್ದು.

**58. ಕೆಲವು ಸಂಸ್ಥೆಗಳಿಗೆ ಮಾನ್ಯತೆ.–** (1) **ಸಂಶೋಧನೆ** ಅಥವಾ ನಿರ್ದಿಷ್ಟಪಡಿಸಿದ ಅಧ್ಯಯನಗಳನ್ನು ನಡೆಸುವ ಕಾಲೇಜುಗಳನ್ನು ಹೊರತುಪಡಿಸಿ, ವಿಶ್ವವಿದ್ಯಾಲಯ ಪ್ರದೇಶದ ಒಳಗೆ ಅಥವಾ ಹೊರಗೆ ಇರುವ ಯಾವುದೇ ಸಂಸ್ಥೆಯನ್ನು, ಶಾಸನಗಳ ಮೂಲಕ ನಿಯಮಿಸಬಹುದಾದಂಥ ಉದ್ದೇಶಕ್ಕಾಗಿ ಮತ್ತು ಅಂಥ ವಿಧಾನದಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು, ಮಾನ್ಯತೆ ಪಡೆದ ಸಂಸ್ಥೆಯೆಂದು ಪ್ರಶಾಸನ ಸಭೆಯು ಮಾನ್ಯತೆ ನೀಡಬಹುದು.

(2) ಯಾವುದೇ ಅಂಥ ಮಾನ್ಯತೆಯನ್ನು ಶಾಸನಗಳ ಮೂಲಕ ನಿಯಮಿಸಬಹುದಾದಂಥ ವಿಧಾನದಲ್ಲಿ ಮತ್ತು ಅಂಥ ಕಾರಣಗಳಿಗಾಗಿ ಪೂರ್ಣವಾಗಿಯಾಗಲಿ ಅಥವಾ ಭಾಗಶಃವಾಗಿಯಾಗಲಿ ಹಿಂತೆಗೆದುಕೊಳ್ಳಬಹುದು ಅಥವಾ ಮಾರ್ಪಾಟು ಮಾಡಬಹುದು.

## ಅಧ್ಯಾಯ – IX

### ಸಂಕೀರ್ಣ ವಿಷಯಗಳು.

**59. ಅಧಿನಿಯಮವು ಇತರ ಅಧಿನಿಯಮಿತಿಗಳಿಗಿಂತ ಹೆಚ್ಚಿನ ಪ್ರಭಾವವುಳ್ಳದ್ದಾಗಿದೆ.–** (1) ಈ ಅಧಿನಿಯಮ ಮತ್ತು ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಯಾವುವೇ ಶಾಸನಗಳು ಅಥವಾ ನಿಯಮಗಳು ಅಥವಾ ವಿನಿಯಮಗಳು, ವಿಶ್ವವಿದ್ಯಾಲಯ ಪ್ರದೇಶದಲ್ಲಿರುವ ಯಾವುದೇ ಕಾಲೇಜಿಗೆ ಸಂಬಂಧಿಸಿದಂತೆ ಭಾರತ ಸಂವಿಧಾನದ ಏಳನೇ ಅನುಸೂಚಿಯ

IIನೇ ಪಟ್ಟಿಯಲ್ಲಿ ನಿರೂಪಿಸಲಾದ ವಿಷಯಗಳ ಸಂಬಂಧದಲ್ಲಿ ಇತರ ಯಾವುದೇ ಅಧಿನಿಯಮಿತಿಯಲ್ಲಿ ಅದಕ್ಕೆ ಅಸಂಗತವಾಗಿ ಏನೇ ಇದ್ದರೂ, ಅವು ಪರಿಣಾಮಕಾರಿಯಾಗಿರತಕ್ಕದ್ದು.

**60. ಮಾಹಿತಿ ಪಡೆಯಲು ಅಧಿಕಾರ:–** ಈ ಅಧಿನಿಯಮದಲ್ಲಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಸರ್ಕಾರವು ಲಿಖಿತ ಆದೇಶದ ಮೂಲಕ ವಿಶ್ವವಿದ್ಯಾಲಯದ ವ್ಯವಹಾರಗಳಿಗೆ ಸಂಬಂಧಪಟ್ಟ ಯಾವುದೇ ವಿಷಯದ ಬಗ್ಗೆ ವಿಶ್ವವಿದ್ಯಾಲಯದಿಂದ ಯಾವುದೇ ಮಾಹಿತಿಯನ್ನು ಕೋರಬಹುದು ಮತ್ತು ವಿಶ್ವವಿದ್ಯಾಲಯವು, ಅಂಥ ಮಾಹಿತಿಯು ತನ್ನಲ್ಲಿ ಲಭ್ಯವಿದ್ದರೆ ಅಂಥ ಮಾಹಿತಿಯನ್ನು ಸೂಕ್ತ ಅವಧಿಯೊಳಗೆ ಸರ್ಕಾರಕ್ಕೆ ಒದಗಿಸತಕ್ಕದ್ದು:

ಪರಂತು ವಿಶ್ವವಿದ್ಯಾಲಯವು ರಹಸ್ಯ ಎಂದು ಪರಿಗಣಿಸುವ ಮಾಹಿತಿಯನ್ನು ಸಹ–ಕುಲಾಧಿಪತಿಯವರಿಗೆ ಸಲ್ಲಿಸಬಹುದು.

**61. ಪ್ರಥಮ ಕುಲಪತಿಯವರ ನೇಮಕ:–** 12 ನೇ ಪ್ರಕರಣದ (೧)ನೇ ಉಪ ಪ್ರಕರಣದಲ್ಲಿ ಏನೇ ಇದ್ದರೂ, ಈ ಅಧಿನಿಯಮವು ಜಾರಿಗೆ ಬಂದ ದಿನಾಂಕದಿಂದ ಆರು ತಿಂಗಳುಗಳೊಳಗೆ ಪ್ರಥಮ ಕುಲಪತಿಯವರನ್ನು ನಾಲ್ಕು ವರ್ಷಗಳಿಗೆ ಮೀರದ ಅವಧಿಗಾಗಿ ಮತ್ತು ತಾನು ಸೂಕ್ತವೆಂದು ಭಾವಿಸುವಂಥ ಇತರ ಷರತ್ತುಗಳ ಮೇಲೆ ಸರ್ಕಾರವು ನೇಮಕ ಮಾಡತಕ್ಕದ್ದು:

ಪರಂತು ಪ್ರಥಮ ಕುಲಪತಿಯವರಾಗಿ ನೇಮಕಗೊಂಡ ವ್ಯಕ್ತಿಯು ತನ್ನ ಪದಾವಧಿಯಲ್ಲಿರುವಾಗ ಅರವತ್ತೈದು ವರ್ಷಗಳ ವಯಸ್ಸು ಪೂರ್ಣಗೊಂಡರೆ ಪದದಿಂದ ನಿವೃತ್ತರಾಗತಕ್ಕದ್ದು.

**62. ಪ್ರಥಮ ಕುಲಪತಿಯವರ ತಾತ್ಕಾಲಿಕ ಅಧಿಕಾರಗಳು.–** (1) ಪ್ರಶಾಸನ ಸಭೆ ಮತ್ತು ವಿಶ್ವವಿದ್ಯಾಲಯದ ಇತರ ಪ್ರಾಧಿಕಾರಗಳನ್ನು, ಈ ಅಧಿನಿಯಮವು ಪ್ರಾರಂಭಗೊಂಡ ದಿನಾಂಕದಿಂದ ಆರು ತಿಂಗಳೊಳಗೆ ಅಥವಾ ಅಧಿಸೂಚನೆಯ ಮೂಲಕ ಸರ್ಕಾರವು ನಿರ್ದೇಶಿಸಬಹುದಾದ ಒಂದು ವರ್ಷಕ್ಕೆ ಮೀರದಂಥ ಹೆಚ್ಚಿನ ಅವಧಿಯೊಳಗಾಗಿ ರಚಿಸಲು ವ್ಯವಸ್ಥೆ ಮಾಡುವುದು ಪ್ರಥಮ ಕುಲಪತಿಯವರ ಕರ್ತವ್ಯವಾಗಿರತಕ್ಕದ್ದು.

(2) ಪ್ರಥಮ ಕುಲಪತಿಯವರು, ಸರ್ಕಾರದೊಂದಿಗೆ ಸಮಾಲೋಚಿಸಿ, ವಿಶ್ವವಿದ್ಯಾಲಯದ ಕಾರ್ಯನಿರ್ವಹಣೆಗೆ ಅವಶ್ಯವಾಗಬಹುದಾದಂಥ ವಿನಿಯಮಗಳನ್ನು ರಚಿಸತಕ್ಕದ್ದು.

(3) (1)ನೇ ಉಪಪ್ರಕರಣದಡಿಯಲ್ಲಿ ರಚಿತವಾದ ಪ್ರಾಧಿಕಾರಗಳು, ಸರ್ಕಾರವು ಈ ಸಂಬಂಧದಲ್ಲಿ ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದಂತಹ ದಿನಾಂಕದಿಂದ ತಮ್ಮ ಪ್ರಕಾರ್ಯಗಳನ್ನು ಪ್ರಾರಂಭಿಸತಕ್ಕದ್ದು.

(4) ತಕ್ಷಣ ಅವಶ್ಯಕವಾಗಬಹುದಾದಂಥ ಕರಡು ಶಾಸನಗಳನ್ನು ರಚಿಸುವುದು ಮತ್ತು ಅನುಮೋದನೆಗಾಗಿ ಅವುಗಳನ್ನು ಪ್ರಶಾಸನ ಸಭೆಗೆ ಸಲ್ಲಿಸುವುದು ಪ್ರಥಮ ಕುಲಪತಿಯವರ ಕರ್ತವ್ಯವಾಗಿರತಕ್ಕದ್ದು ಅಂಥ ಶಾಸನಗಳು ಹಾಗೆ ರಚನೆಯಾದತರುವಾಯ ಕರ್ನಾಟಕ ಗೆಜೆಟಿನಲ್ಲಿ ಪ್ರಕಟವಾಗತಕ್ಕದ್ದು.

(5) ಈ ಅಧಿನಿಯಮದಲ್ಲಿ ಮತ್ತು ಶಾಸನಗಳಲ್ಲಿ ಏನೇ ಇದ್ದರೂ ಮತ್ತು ಒಂದು ಪ್ರಾಧಿಕಾರವನ್ನು ಕ್ರಮಬದ್ಧವಾಗಿ ರಚಿಸುವಂಥ ಕಾಲದವರೆಗೆ ಪ್ರಥಮ ಕುಲಪತಿಯವರು ಈ ಅಧಿನಿಯಮ ಮತ್ತು ಶಾಸನಗಳ ಅಡಿಯಲ್ಲಿ ಅಂಥ ಪ್ರಾಧಿಕಾರದ ಯಾವುವೇ ಅಧಿಕಾರಗಳನ್ನು ಚಲಾಯಿಸಲು ಮತ್ತು ಕರ್ತವ್ಯಗಳನ್ನು ನೆರವೇರಿಸಲು ತಾತ್ಕಾಲಿಕವಾಗಿ ಯಾವೊಬ್ಬ ಅಧಿಕಾರಿಯನ್ನು ನೇಮಕ ಮಾಡಬಹುದು ಅಥವಾ ಯಾವುದೇ ಸಮಿತಿಯನ್ನು ರಚಿಸಬಹುದು.

**63. ನೇಮಕದ ವಿಶೇಷ ವಿಧಾನ:–** (1) ಪ್ರಶಾಸನ ಸಭೆಯು, ತಾನು ಸೂಕ್ತವೆಂದು ಭಾವಿಸಬಹುದಾದಂತಹ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ವಿಶ್ವವಿದ್ಯಾಲಯದ ಪ್ರಾಧ್ಯಾಪಕರ ಹುದ್ದೆಯನ್ನು ಒಪ್ಪಿಕೊಳ್ಳಲು ಉನ್ನತ ಶೈಕ್ಷಣಿಕ ಪ್ರಶಸ್ತಿಗಳನ್ನು ಮತ್ತು ವೃತ್ತಿ ಅನುಭವಗಳನ್ನು ಹೊಂದಿರುವ ವ್ಯಕ್ತಿಯನ್ನು ಆಹ್ವಾನಿಸಬಹುದು ಮತ್ತು ಅದಕ್ಕೆ ಒಪ್ಪಿಕೊಳ್ಳುವ ವ್ಯಕ್ತಿಯನ್ನು ಕುಲಾಧಿಪತಿಯವರ ಅನುಮೋದನೆಗೊಳಪಟ್ಟು ಆ ಹುದ್ದೆಗೆ ನೇಮಕ ಮಾಡಬಹುದು.

(2) ಪ್ರಶಾಸನ ಸಭೆಯು ಇತರ ವಿಶ್ವವಿದ್ಯಾಲಯದಲ್ಲಿ ಅಥವಾ ಸಂಸ್ಥೆಯಲ್ಲಿ ಕಾರ್ಯನಿರತ ಅಧ್ಯಾಪಕನನ್ನು ಅಥವಾ ಶೈಕ್ಷಣಿಕ ಸಿಬ್ಬಂದಿ ಸದಸ್ಯನನ್ನು ನಿಯಮಿಸಬಹುದಾದಂತಹ ರೀತಿಯಲ್ಲಿ ಜಂಟಿ ಪ್ರಾಜೆಕ್ಟನ್ನು ಕೈಗೊಳ್ಳುವುದಕ್ಕಾಗಿ ನೇಮಕಮಾಡಬಹುದು.

**64. ಕುಲಪತಿ ಮತ್ತು ಇತರ ಅಧಿಕಾರಿಗಳು ಮುಂತಾದವರು ಸಾರ್ವಜನಿಕ ನೌಕರರಾಗಿರುವುದು:** ವಿಶ್ವವಿದ್ಯಾಲಯದ ಕುಲಪತಿಯವರು, ಕುಲಸಚಿವರು, ಹಣಕಾಸು ಅಧಿಕಾರಿ ಮತ್ತು ಇತರ ನೌಕರರು ಈ ಅಧಿನಿಯಮದ ಯಾವುದೇ ಉಪಬಂಧಗಳಿಗನುಸಾರವಾಗಿ ಕಾರ್ಯನಿರ್ವಹಿಸುತ್ತಿರುವಾಗ ಅಥವಾ ಕಾರ್ಯನಿರ್ವಹಿಸುತ್ತಿರುವರೆಂದು ತಾತ್ಪರ್ಯವಾಗುವಾಗ,

ಭಾರತ ದಂಡ ಸಂಹಿತೆಯ (1860 ರ ಕೇಂದ್ರ ಅಧಿನಿಯಮ XL) 21 ನೇ ಪ್ರಕರಣದ ಅರ್ಥ ವ್ಯಾಪ್ತಿಯೊಳಗೆ ಸಾರ್ವಜನಿಕ ನೌಕರರೆಂದು ಭಾವಿಸತಕ್ಕದ್ದು.

65. ತೊಂದರೆಗಳ ನಿವಾರಣೆಗೆ ಅಧಿಕಾರ.– (1) ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ನಿಕಾಯದ ಮೊದಲ ರಚನೆಯ ಅಥವಾ ಪುನಾರಚನೆಯ ಸಂಬಂಧದಲ್ಲಿ ಅಥವಾ ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವ ಸಂಬಂಧದಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ತೊಂದರೆಯ ನಿವಾರಣೆಗಾಗಿ ಅವಶ್ಯಕ ಹಾಗೂ ಸಮಂಜಸವೆಂದು ತನಗೆ ಕಂಡುಬರುವಂಥ ಹಾಗೂ ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಲ್ಲದ ಉಪಬಂಧಗಳನ್ನು ರಚಿಸಬಹುದು:

ಪರಂತು, 3ನೇ ಪ್ರಕರಣದ ಅಡಿಯಲ್ಲಿ ವಿಶ್ವವಿದ್ಯಾಲಯವು ಸ್ಥಾಪನೆಯಾದ ದಿನಾಂಕದಿಂದ ಐದು ವರ್ಷಗಳು ಮುಕ್ತಾಯವಾದ ತರುವಾಯ ಅಂಥ ಯಾವುದೇ ಅಧಿಸೂಚನೆಯನ್ನು ಹೊರಡಿಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಅಥವಾ ಈ ಅಧಿನಿಯಮದ ಯಾವುದೇ ಉಪಬಂಧದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಅಧಿಸೂಚನೆಯನ್ನು, ಅದನ್ನು ಹೊರಡಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಿರಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಮಂಡಿಸತಕ್ಕದ್ದು ಮತ್ತು ಸದರಿ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ರಾಜ್ಯ ವಿಧಾನಮಂಡಲದ ಯಾವೊಂದು ಸದನವು ಅಧಿಸೂಚನೆಯಲ್ಲಿ ಯಾವುದೇ ಮಾರ್ಪಾಡು ಮಾಡಿದರೆ, ಅಥವಾ ಆ ಅಧಿಸೂಚನೆಯು ಪರಿಣಾಮಕ್ಕೆ ಬರತಕ್ಕದ್ದಲ್ಲವೆಂದು ನಿರ್ದೇಶಿಸಿದರೆ ಹಾಗೂ ಆ ಮಾರ್ಪಾಡು ಅಥವಾ ನಿರ್ದೇಶನವನ್ನು ಇನ್ನೊಂದು ಸದನವು ಒಪ್ಪಿದರೆ ತದನಂತರ ಅಂಥ ಅಧಿಸೂಚನೆಯು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೀತಿಯಲ್ಲಿ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಯಾವುದೇ ಅಂಥ ಮಾರ್ಪಾಡು ಅಥವಾ ರದ್ದತಿಯು ಈ ಅಧಿಸೂಚನೆಯ ಅಡಿಯಲ್ಲಿ ಈ ಮುಂಚೆ ಮಾಡಲಾದ ಯಾವುದೇ ಕಾರ್ಯದ ಮಾನ್ಯತೆಗೆ ಬಾಧೆ ಉಂಟುಮಾಡತಕ್ಕದ್ದಲ್ಲ.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

(1) ಕರ್ನಾಟಕದಲ್ಲಿ ಸಂಗೀತ ಮತ್ತು ಪ್ರದರ್ಶಕ ಕಲೆಗಳ ಕ್ಷೇತ್ರದಲ್ಲಿ ಉಜ್ವಲ ಪರಂಪರೆ ಇರುವುದರಿಂದ ಕರ್ನಾಟಕದಲ್ಲಿ ಈಗಿರುವ ಸಂಸ್ಥೆಗಳಲ್ಲಿ ಸಂಗೀತ ಮತ್ತು ಪ್ರದರ್ಶಕ ಕಲೆಗಳ ಅಧ್ಯಯನವನ್ನು ವ್ಯವಸ್ಥಿತಗೊಳಿಸುವುದಕ್ಕಾಗಿ,

(2) ಸಂಗೀತ ಮತ್ತು ಪ್ರದರ್ಶಕ ಕಲೆಗಳಲ್ಲಿ ಸಂಶೋಧನೆ ಮತ್ತು ಕಲಿಕೆಯ ಮುನ್ನಡೆಗಾಗಿ ಅವಕಾಶಗಳನ್ನು ಕಲ್ಪಿಸಿ ಸಂಗೀತ ಮತ್ತು ಪ್ರದರ್ಶನ ಕಲೆಗಳ ಎಲ್ಲಾ ವಿಭಾಗಗಳಲ್ಲಿ ಶಿಕ್ಷಣ ದೊರೆಯುವಂತೆ ಮಾಡುವುದಕ್ಕಾಗಿ,

(3) ಸಂಗೀತ ಮತ್ತು ಪ್ರದರ್ಶಕ ಕಲಾ ವಿದ್ವಾಂಸರು ಮತ್ತು ಸಂಬಂಧಪಟ್ಟ ವಿದ್ಯಾ ವಿಷಯಗಳ ವಿದ್ವಾಂಸರು ತಮ್ಮ ವಿಚಾರ ವಿನಿಯಮ ಮಾಡಿಕೊಳ್ಳುವುದಕ್ಕಾಗಿ ಒಂದು ಸಾಮಾನ್ಯ ವೇದಿಕೆಯನ್ನು ಒದಗಿಸುವುದಕ್ಕಾಗಿ,

– ಕರ್ನಾಟಕ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯವನ್ನು ಸ್ಥಾಪಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಕ್ರಮದಿಂದಾಗಿ 2008–09ನೇ ವರ್ಷದಲ್ಲಿ ಒಂದು ನೂರು ಲಕ್ಷ ರೂಪಾಯಿಗಳ ವೆಚ್ಚವು ಉಂಟಾಗಬಹುದೆಂದು ಅಂದಾಜು ಮಾಡಲಾಗಿದೆ.

**ಅರವಿಂದ ಲಿಂಬಾವಳಿ**
ಉನ್ನತ ಶಿಕ್ಷಣ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**ಕರ್ನಾಟಕ ವಿಧಾನಸಭೆ**
**ಹದಿಮೂರನೇ ವಿಧಾನಸಭೆ**
**ಮೂರನೇ ಅಧಿವೇಶನ**

**ತಿದ್ದೋಲೆ**

ಕರ್ನಾಟಕ ರಾಜ್ಯ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯ ವಿಧೇಯಕ, 2009ಕ್ಕೆ (2009ರ ವಿಧಾನಸಭೆ ವಿಧೇಯಕ ಸಂಖ್ಯೆ 18)

ಕರ್ನಾಟಕ ರಾಜ್ಯ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯ ವಿಧೇಯಕ, 2009ಕ್ಕೆ (2009ರ ವಿಧಾನಸಭೆ ವಿಧೇಯಕ ಸಂಖ್ಯೆ 18) ಸಂಬಂಧಿಸಿದಂತೆ ಕನ್ನಡ ಆವೃತ್ತಿಯಲ್ಲಿ 12ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"12. ಕುಲಪತಿ.**– (1) ಕುಲಪತಿಯು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು.

(2) ಸರ್ಕಾರವು ಮೂವರು ವ್ಯಕ್ತಿಗಳನ್ನೊಳಗೊಂಡ ಒಂದು ಶೋಧನಾ ಸಮಿತಿಯನ್ನು ರಚಿಸತಕ್ಕದ್ದು; ಅವರುಗಳ ಪೈಕಿ ಒಬ್ಬರು ಕುಲಾಧಿಪತಿಯವರಿಂದ ನಾಮ ನಿರ್ದೇಶಿತರಾಗಿರತಕ್ಕದ್ದು. ಒಬ್ಬರು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ನಾಮನಿರ್ದೇಶಿತರಾಗಿರತಕ್ಕದ್ದು ಹಾಗೂ ಒಬ್ಬರು ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತರಾಗಿರತಕ್ಕದ್ದು. ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತರಾದವರು ಸಮಿತಿಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸತಕ್ಕದ್ದು. ಉನ್ನತ ಶಿಕ್ಷಣ ಇಲಾಖೆಯ ಪ್ರಭಾರವನ್ನು ಹೊಂದಿರುವ ಸರ್ಕಾರದ ಕಾರ್ಯದರ್ಶಿ ಅಥವಾ ಸರ್ಕಾರದ ಉಪ ಕಾರ್ಯದರ್ಶಿಯ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಅವರ ನಾಮನಿರ್ದೇಶಿತರು ಶೋಧನಾ ಸಮಿತಿಯ ಸಂಚಾಲಕರಾಗಿರತಕ್ಕದ್ದು.

(3) ರಾಜ್ಯ ಸರ್ಕಾರದ, ವಿಶ್ವವಿದ್ಯಾಲಯದ ಅಥವಾ ವಿಶ್ವವಿದ್ಯಾಲಯಕ್ಕೆ ಸಂಯೋಜಿತವಾದ ಯಾವುದೇ ಕಾಲೇಜಿನ ಅಥವಾ ಸಂಸ್ಥೆಯ ವ್ಯವಹಾರಗಳೊಂದಿಗೆ ಸಂಬಂಧವಿರುವ ಯಾವ ವ್ಯಕ್ತಿಯನ್ನೂ ಶೋಧನಾ ಸಮಿತಿಯ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡತಕ್ಕದ್ದಲ್ಲ.

(4) ಶೋಧನಾ ಸಮಿತಿಯು, ಖ್ಯಾತ ಶಿಕ್ಷಣ ತಜ್ಞರಾದ ಮೂರು ವ್ಯಕ್ತಿಗಳ ಹೆಸರನ್ನುಳ್ಳ ಒಂದು ಪಟ್ಟಿಯನ್ನು ಅಕಾರಾದಿ ಕ್ರಮದಲ್ಲಿ ರಾಜ್ಯಸರ್ಕಾರಕ್ಕೆ ಸಲ್ಲಿಸತಕ್ಕದ್ದು ಮತ್ತು ರಾಜ್ಯ ಸರ್ಕಾರವು ಆ ಪಟ್ಟಿಯನ್ನು ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು, ಅವರು ಅರ್ಹತೆ, ಸಮದರ್ಶಿತ್ವ ಮತ್ತು ಸಾಮಾಜಿಕ ನ್ಯಾಯ ಇವುಗಳನ್ನು ಗಮನದಲ್ಲಿಟ್ಟುಕೊಂಡು ಮತ್ತು ರಾಜ್ಯ ಸರ್ಕಾರದ ಸಹಮತಿಯೊಡನೆ ಆ ಪಟ್ಟಿಯಿಂದ ಒಬ್ಬ ವ್ಯಕ್ತಿಯನ್ನು ಕುಲಪತಿಯಾಗಿ ನೇಮಕ ಮಾಡತಕ್ಕದ್ದು:

ಪರಂತು, ಕುಲಾಧಿಪತಿಯವರು ಅವಶ್ಯವೆಂದು ಪರಿಗಣಿಸಿದರೆ, ರಾಜ್ಯ ಸರ್ಕಾರದ ಸಹಮತಿಯೊಡನೆ ಎರಡನೆಯ ಪಟ್ಟಿಯನ್ನು ತರಿಸಿಕೊಳ್ಳಬಹುದು ಮತ್ತು ಶೋಧನಾ ಸಮಿತಿಯು ಎರಡನೆಯ ಪಟ್ಟಿಯನ್ನು ಸಲ್ಲಿಸತಕ್ಕದ್ದು ಹಾಗೂ ಅದು ಅಂತಿಮವಾಗಿರತಕ್ಕದ್ದು.

(5) ಅರವತ್ತೈದು ವರ್ಷ ವಯಸ್ಸು ಆಗಿರುವ ಯಾವ ವ್ಯಕ್ತಿಯೂ ಕುಲಪತಿಯಾಗಿ ನೇಮಕವಾಗತಕ್ಕದ್ದಲ್ಲ ಅಥವಾ ಅವರು ಆ ಹುದ್ದೆಯಲ್ಲಿ ಇರತಕ್ಕದ್ದಲ್ಲ.

(6) ಕುಲಪತಿಯವರು, ಕುಲಾಧಿಪತಿಯವರ ಇಷ್ಟಪರ್ಯಂತ ಮತ್ತು (5)ನೇ ಉಪಪ್ರಕರಣದ ಉಪಬಂಧಗಳಿಗೊಳಪಟ್ಟು ನಾಲ್ಕು ವರ್ಷಗಳ ಅವಧಿಯವರೆಗೆ ಅಧಿಕಾರ ಸ್ಥಾನವನ್ನು ಹೊಂದಿರತಕ್ಕದ್ದು. ಅವರು ಎರಡನೇ ಅವಧಿಗೆ ಪುನರ್‌ನೇಮಕಕ್ಕೆ ಅರ್ಹರಾಗಿರತಕ್ಕದ್ದಲ್ಲ.

(7) ಕುಲಪತಿಯನ್ನು, ಈ ಅಧಿನಿಯಮದ ಉಪಬಂಧಗಳನ್ನು ಉದ್ದೇಶಪೂರ್ವಕವಾಗಿ ಕೈಬಿಟ್ಟಿದ್ದಾರೆ ಅಥವಾ ನೆರವೇರಿಸಲು ನಿರಾಕರಿಸಿದ್ದಾರೆ ಅಥವಾ ತನ್ನಲ್ಲಿ ನಿಹಿತವಾದ ಅಧಿಕಾರಗಳನ್ನು ದುರುಪಯೋಗ ಪಡಿಸಿಕೊಂಡಿದ್ದಾರೆ ಎಂಬ ಕಾರಣದ ಮೇಲೆ ಮತ್ತು ರಾಜ್ಯ ಸರ್ಕಾರವು, (8)ನೇ ಉಪ ಪ್ರಕರಣದ ಮೇರೆಗೆ ತಾನು ಆದೇಶಿಸಿದ್ದ ವಿಚಾರಣೆಯ ವರದಿಯನ್ನು ಪರಿಗಣಿಸಿದ ನಂತರ ನೀಡಿದ ಸಲಹೆಯ ಮೇಲೆ ಕುಲಾಧಿಪತಿಯವರು ಹೊರಡಿಸಿದ ಆದೇಶದ ಮೂಲಕವಾಗಿ ಹೊರತು, ಅವರ ಅಧಿಕಾರ ಸ್ಥಾನದಿಂದ ತೆಗೆದುಹಾಕತಕ್ಕದ್ದಲ್ಲ.

(8) ಈ ಪ್ರಕರಣದ ಅಡಿಯಲ್ಲಿ ಒಂದು ವಿಚಾರಣೆಯನ್ನು ನಡೆಸುವ ಉದ್ದೇಶಕ್ಕಾಗಿ, ರಾಜ್ಯಸರ್ಕಾರವು, ಉಚ್ಚ ನ್ಯಾಯಾಲಯದ ಅಥವಾ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿರುವ ಅಥವಾ ಆಗಿದ್ದ ವ್ಯಕ್ತಿಯನ್ನು ನೇಮಕ ಮಾಡತಕ್ಕದ್ದು. ವಿಚಾರಣಾ ಪ್ರಾಧಿಕಾರವು, ಕುಲಪತಿಯವರಿಗೆ ತಮ್ಮ ಮನವಿಯನ್ನು ಸಲ್ಲಿಸಲು ಅವಕಾಶ ನೀಡಿದ ನಂತರ ವಿಚಾರಣೆ ನಡೆಸತಕ್ಕದ್ದು ಮತ್ತು ವಿಧಿಸಬೇಕಾದ ಯಾವುದೇ ದಂಡನೆ ಇದ್ದರೆ, ಅದೂ ಒಳಗೊಂಡಂತೆ ಒಂದು ವರದಿಯನ್ನು ರಾಜ್ಯಸರ್ಕಾರಕ್ಕೆ ಸಲ್ಲಿಸತಕ್ಕದ್ದು. ರಾಜ್ಯಸರ್ಕಾರವು, ವರದಿಯನ್ನು ಪರಿಶೀಲಿಸಿದ ನಂತರ, ಕುಲಾಧಿಪತಿಯವರಿಗೆ ಸಲಹೆ

ನೀಡತಕ್ಕದ್ದು. ಕುಲಾಧಿಪತಿಯವರು ಸಾಧ್ಯವಾದಷ್ಟುಮಟ್ಟಿಗೆ ಆರು ತಿಂಗಳೊಳಗಾಗಿ ಅಂಥ ಸಲಹೆಗೆ ಅನುಸಾರವಾಗಿ ಕ್ರಮ ಕೈಗೊಳ್ಳತಕ್ಕದ್ದು.

(9) ಕುಲಪತಿಯವರ ಉಪಲಬ್ಧಿಗಳು ಮತ್ತು ಇತರ ಸೇವಾ ಷರತ್ತುಗಳು ಕುಲಾಧಿಪತಿಯವರು ನಿರ್ಧರಿಸಬಹುದಾದಂತೆ ಇರತಕ್ಕದ್ದು ಮತ್ತು ಅವುಗಳನ್ನು ಅವರು ಕುಲಪತಿಯಾಗಿ ನೇಮಕವಾದ ತರುವಾಯ ಅವರಿಗೆ ಅನಾನುಕೂಲವಾಗುವಂತೆ ಬದಲಾಯಿಸತಕ್ಕದ್ದಲ್ಲ. ಕುಲಪತಿಯಾಗಿ ತಮ್ಮ ಅಧಿಕಾರಾವಧಿಯಲ್ಲಿರುವಾಗ ಕುಲಪತಿಯವರು ವಯೋನಿವೃತ್ತಿಯ ಮೇಲೆ ನಿವೃತ್ತರಾಗುವ ಸಂದರ್ಭದಲ್ಲಿ, ಈಗಾಗಲೇ ನಿರ್ಧರಿಸಲಾದ ಅವರ ಸೇವಾ ಷರತ್ತುಗಳು ಮುಂದುವರಿಯತಕ್ಕದ್ದು. ಅವರ ಎಲ್ಲ ನಿವೃತ್ತಿ ಸೌಲಭ್ಯಗಳನ್ನು ತಡೆಹಿಡಿಯತಕ್ಕದ್ದು, ಅವುಗಳನ್ನು ಅವರು ಕುಲಪತಿಯಾಗಿ ಪದವನ್ನು ತ್ಯಜಿಸಿದ ನಂತರ ಬಿಡುಗಡೆ ಮಾಡತಕ್ಕದ್ದು.

(10) ನಿವೃತ್ತಿಹೊಂದಿದ ಒಬ್ಬ ವ್ಯಕ್ತಿಯು ಕುಲಪತಿಯಾಗಿ ನೇಮಕಗೊಂಡರೆ, ಅವರು ಕುಲಪತಿಯಾಗಿ ನೇಮಕಗೊಂಡ ಮೇಲೆ ಅವರ ಉಪಲಬ್ಧಿಗಳೂ ಸೇರಿದಂತೆ ಸೇವಾ ನಿಬಂಧನೆ ಮತ್ತು ಷರತ್ತುಗಳನ್ನು ಕುಲಾಧಿಪತಿಯವರು ನಿರ್ಣಯಿಸತಕ್ಕದ್ದು. ಅವರು ಪಡೆಯುವ ನಿವೃತ್ತಿ ವೇತನದ ಮೊತ್ತವನ್ನು ಮತ್ತು ಭತ್ಯಗಳನ್ನು ಉಪಲಬ್ಧಿಗಳಿಂದ ಕಳೆಯತಕ್ಕದ್ದು.

(11) ರಾಜ್ಯದಲ್ಲಿನ ಒಂದು ವಿಶ್ವವಿದ್ಯಾಲಯದ ಸೇವೆಯಲ್ಲಿರುವ ಒಬ್ಬ ಪ್ರಾಧ್ಯಾಪಕರು ಕುಲಪತಿಯಾಗಿ ನೇಮಕಗೊಂಡರೆ, ಅವರು ಕುಲಪತಿಯಾಗಿರುವ ಅಧಿಕಾರಾವಧಿಯಲ್ಲಿ ಪ್ರಾಧ್ಯಾಪಕರಾಗಿ ಅವರ ಸೇವಾ ನಿಬಂಧನೆ ಮತ್ತು ಷರತ್ತುಗಳನ್ನು ಅವರಿಗೆ ಅನಾನುಕೂಲವಾಗುವಂತೆ ಪರಿಷ್ಕರಿಸತಕ್ಕದಲ್ಲ ಮತ್ತು ಅವರು ತನ್ನ ಹುದ್ದೆಯ ಧಾರಣಾಧಿಕಾರವನ್ನು ಉಳಿಸಿಕೊಳ್ಳತಕ್ಕದ್ದು."

ಸದರಿ ವಿಧೇಯಕದಲ್ಲಿ, 17ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**17. ಹಣಕಾಸು ಅಧಿಕಾರಿ.–** ಹಣಕಾಸು ಅಧಿಕಾರಿಯು, ರಾಜ್ಯ ಲೆಕ್ಕ ಪತ್ರ ಇಲಾಖೆಯ ಸಹಾಯಕ ನಿಯಂತ್ರಕರ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ, ಈ ಬಗ್ಗೆ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ಅವಧಿಗೆ ಸರ್ಕಾರದಿಂದ ನೇಮಕಗೊಂಡ ವಿಶ್ವವಿದ್ಯಾಲಯದ ಒಬ್ಬ ಪೂರ್ಣಕಾಲಿಕ ವೇತನ ಪಡೆಯುವ ಅಧಿಕಾರಿಯಾಗಿರತಕ್ಕದ್ದು ಮತ್ತು ಹಣಕಾಸು ಅಧಿಕಾರಿಯ ಸೇವಾ ಷರತ್ತುಗಳು ಮತ್ತು ನಿಬಂಧನೆಗಳು ಸರ್ಕಾರವು ನಿರ್ದಿಷ್ಟಪಡಿಸಿದಂಥವುಗಳಾಗಿರತಕ್ಕದ್ದು."

**ಎಸ್.ಬಿ.ಪಾಟೀಲ್**

ಕಾರ್ಯದರ್ಶಿ

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**
**THIRD SESSION**

## THE KARNATAKA RAJYA SANGEETHA MATTU PRADARSHAKA KALEGALA VISHWAVIDYALAYA BILL, 2009

**(L.A. Bill No. 18 of 2009)**

A Bill to provide for the establishment and incorporation of the Karnataka Rajya Sangeetha Mattu Pradarshaka Kalegala Vishwavidyalaya.

WHEREAS, it is expedient to establish a University of unitary and residential nature exclusively for furthering the advancement of learning and prosecution of research, documentation, publishing of audio and video recording, popularising of all branches of music and performing arts and for the purposes hereinafter appearing;

Be it enacted by the Karnataka State Legislature in the fifty- ninth year of the Republic of India, as follows:-

### CHAPTER-I

### PRELIMINARY

**1. Short title and Commencement.-** (1) This Act may be called the Karnataka Rajya Sangeetha Mattu Pradarshaka Kalegala Vishwavidyalaya Act, 2009.

(2) It shall come into force on such date as the State Government may, by notification, appoint.

**2. Definitions.-** In this Act, unless the context otherwise requires;-.

(a) "Accompanists" means the players of various instruments like Hormonium, Tabla, Violin, Mridangam, Ghatam, Khanjeera etc.

(b) "Appointed date" means the date appointed for the commencement of this Act;

(c) "Government" means the State Government:

(d) "Hostel" means a unit of residence for the students of the University maintained or recognised by the University in accordance with the provisions of this Act.

(e) "performing arts" means and includes dance, drama, Yakshagana, Harikatha and such other performing arts as the university may decide;

(f) Prescribed" means prescribed by the statutes;

(g) "Statutes" means the statutes of the University made under this Act;

(h) "Teachers" means Professors, emeritus Professors, readers, lecturers and other like persons as may be declared by the statutes to be teachers;

(i) "University" means the Karnataka Rajya Sangeetha Mattu Pradarshaka Kalegala Vishwavidyalaya established under Section-3.

(j) "University Grants Commission" means the Commission established under Section 4 of the University Grants Commission Act, 1956 (Central Act 3 of 1956);

(k) "University Library" means a Library maintained by the University, whether instituted by it or not;

## CHAPTER - II

## THE UNIVERSITY

**3. Establishment of the University.-** (1) For furthering the advancement of learning and prosecution of research in Music and performing arts there shall be established a University by the name called "The Karnataka Rajya Sangeetha Mattu Pradarshaka Kalegala Vishwavidyalaya".

(2) The University shall be a body corporate and shall have perpetual succession and a common seal and shall sue and be sued by the said name.

(3) The University shall be of the unitary and residential type.

(4) No institution affiliated to, or associated with, or maintained by any other University in the State shall be recognised by the University for any purpose, except with the prior approval of the Government and the concerned University.

(5) The headquarters of the University shall be located within the limits of the Mysore District or in any place within a radius of twenty kilometers around those limits.

(6) The University shall be competent to acquire and hold property, both movable and immovable to lease, sell or otherwise transfer any moveable or immoveable property which may have become vested in or been acquired by it for the purpose of the University and to enter in to contract and to do all other things necessary for the purposes of this Act.

(7) The University shall not lease, sell or otherwise transfer any immoveable property, which may have become vested in or been acquired by it without obtaining the prior approval of the Government.

(8) In all suits and other legal proceedings by or against the University, the pleading shall be signed and verified by, and all processes in such suits and proceedings shall be issued to and be served on the Registrar.

**4. The objectives of the University.-** The University shall have the following objectives namely;-

(1) to provide instructions in all branches of Music and performing arts and to make provisions for research and advancement of studies in Music and performing arts and dissemination of knowledge thereof.

(2) to function as a high-level teaching, training and research organisation in all forms and genres of Music and performing arts and their studies;

(3) to preserve, foster, popularise and promote the traditional system of Indian Music and performing arts with an emphasis on various forms of Music and performing arts practiced in Karnataka;

(4) to highlight the wisdom contained in Music performing arts and above mentioned disciplines and their relevance to the modern world;

(5) to make Music and performing arts popular among all the folks of the society;

(6) to prepare, consolidate, revive, promote, translate, publish all forms and genres in Music, performing arts and ancient manuscripts in Kannada and other languages;

(7) to regularize the study of all forms of Music, performing arts.

(8) to foster and formulate programmes and their relevance and significance of Music and performing arts in the modern scientific technological days and to strengthen the rich tradition and heritage of Music and dance;

(9) to establish the Museum, Archieves and Library pertaining to music and performing arts tradition;

(10) to computerize and digitize the entire corpus of manuscripts and music and performing arts texts and also to bring out Research Journals of high standard through the University and its various departments.

(11) to establish high-tech Studio with Audio-Video recording and Photography facilities to record and shoot the music and performing arts live performance and photographs;

(12) to organize music and performing arts concerts, seminars, work-shops, conferences, training programmes with a view to promote awareness and knowledge about the messages carried in ancient music and performing arts traditions;

(13) (a) to establish directorates for supportive education leading to all forms of Music and performing arts;

(b) to establish distance and online education

(c) to establish a publication department to publish books and works related to music and performing arts.

(14) to establish chairs in various discipline for conducting advanced research and to conduct hobby classes for all sections of the society;

(15) to conduct sangeetha mattu pradarshaka kalegala yatre to create awareness, interest and to popularize music and performing arts;

(16) to experiment music and performing arts as a therapy for health and medical ailments;

(17) to do such acts and other things, whether incidental to the power or aforesaid or not as may be required in order to promote the objectives of the University.

(18) to create a net work of Music and performing arts Institutions and Educational Research Oriented Institutions having similar objectives with reciprocal arrangements and facilities for interaction with the view to foster a synergy of efforts made by all such Universities and Institutions.

(19) to maintain such bodies as are by statutes declared to be the authorities of the University.

(20) to take appropriate measures for promoting Inter-disciplinary studies and research in the University and such other related activities congenial at the University level.

(21) to impart teaching of music and performing arts under Gurukula (ancient traditional) system and Modern (Contemporary academic) system. Gurukula system will have the faculty of veteran musicians and maestros.

**5. Powers of the University.-** The University shall have the following powers, namely;

(1) to institute degrees, diploma and other academic distinctions;

(2) to confer degrees, diploma and other academic distinctions on persons who shall have carried out research in the University or in any other Institution or Centre recognised by the University under conditions prescribed irrespective of their religion, race, creed, caste, sex or class or any of them;

**Explanation:** For the purpose of this clause and other provisions of this Act, institution or centre recognised by the University shall mean an institution or a centre situated in India or in other countries, recognised by the University for the purpose of furthering the objectives of the University; after obtaining due permission from the concerned authorities.

(3) to confer honorary degrees or other academic distinctions in the prescribed manner and under conditions prescribed;

(4) to supervise and control hostels and to regulate and enforce discipline among the students of the University and to make arrangements for promoting their health and general welfare;

(5) to prescribe conditions under which the award of any degree, diploma and other academic distinctions to persons may be withheld;

(6) to Co-operate with any other University, authority or association or any other public or private body having in view the promotion of purposes and objects similar to those of the University for such purpose as may be agreed upon, on such terms and conditions, as may, from time to time, be prescribed;

(7) to establish and maintain University libraries, research stations, museums for research and publication bureau;

(8) to institute research posts and to appoint persons to such posts;

(9) to institute and award fellowships, including traveling fellowships, scholarships, medals and prizes in the manner prescribed;

(10) to accept, hold, and manage any endowments, donations or funds which may have become vested in the University by grant, testamentary disposition or otherwise and invest such endowments, donations or funds in any manner that may deemed fit.

Provided that no donations from a foreign country, foreign foundation or from any person in such a country shall be accepted by the University save with the approval of the State Government;

(11) to establish maintain or recognise hostels for students of the University and residential accommodation for the staff of University and to withdraw any such recognitions;

(12) to fix fees and to demand and receive such fees as may be prescribed;

(13) to hold and manage endowments and other properties and funds of the University;

(14) to borrow money with the approval of the Government on the security of the property of the University for the purpose of the University;

(15) to enter into agreement with other bodies or persons for the purpose of promoting the objects of the University including the assuming of the management of any institution under them and the taking over of the rights and liabilities:

**6. Admission to the University.-** (1) The University shall subject to the provisions of this Act and the Statutes, be open to all persons.

(2) Nothing contained in sub-section (1) shall require the University;

(a) to admit to any course of study any person who does not possess the prescribed academic qualification or standard;

(b) to retain on the rolls of the University any student whose academic record is below the minimum standard required for the award of a degree, diploma or other academic distinction; or

(c) to admit any person or retain any student whose conduct is prejudicial to the interests of the University or the rights and privileges of other students and teachers.

**7. Jurisdiction of the university.-** The jurisdiction of the university shall extend to the whole of the State of Karnataka.

**8. Inspection.-** (1) The Chancellor shall have the right to cause an inspection or inquiry to be made, by such person or persons as he may direct, of the University, its buildings, University libraries, museums and equipments, and of any institutions maintained or recognised by the University and also of the research, teaching and other work conducted or done by the University, and to cause an inquiry to be made in respect of any matter connected with the University. The Chancellor shall in every case give notice to the University of his Intention to cause such inspection or inquiry to be made and the University shall be entitled to be represented there at.

(2) The Chancellor shall communicate to the Syndicate his views with reference to the results of such inspection or inquiry and may after ascertaining the opinion of the Syndicate thereon advise the University upon the action to be taken and fix a time limit for taking such action.

(3) The Syndicate shall report to the Chancellor, the action, if any which is proposed to be taken, or has been taken upon the results of such inspection or inquiry., such report shall be submitted within such time as the Chancellor may direct.

(4) Where the Syndicate does not take action to the satisfaction of the Chancellor within the time limit as may be fixed under sub-section (2) the Chancellor may, after considering any explanation furnished or representation made by the Syndicate, issue such directions as he may think fit and the Syndicate shall comply with such directions. In the event of the Syndicate not complying with such directions within such time as may be fixed in that behalf by the Chancellor, the Chancellor shall have power to appoint any person or body to comply with such directions and make such orders as may be necessary for the expenses thereof.

(5) The State Government may by order published in the official Grazette annul any order, notification, resolution or any proceedings of the University, which in its opinion is not in conformity with the provisions of this Act, or the Statutes, Regulations, or Ordinances or is otherwise inconsistent with the policy of the State Government:

Provided that before making any such order, the State Government shall afford an opportunity to the University.

(6) Every order passed under sub-section (1) shall as soon as it is passed by laid before both the Houses of State Legislature.

## CHAPTER-III

## OFFICERS OF THE UNIVERSITY

**9. Officers of the University.-** The University shall consist of the following Officers, namely:-

(1) The Chancellor,

(2) The Pro-Chancellor,

(3) The Vice-Chancellor,

(4) The Dean of Faculties,

(5) The Registrar,

(6) The Finance Officer, and

(7) Such other persons as may be declared by the statutes to be officers of the University.

**10. The Chancellor.-** (1) The Governor of Karnataka shall be the Chancellor of the University. He shall by virtue of his office be the head of the University and shall when present, preside at any convocation of the University and confer degrees; diploma or other academic distinctions upon persons entitled to receive them.

(2) Where power is conferred upon the Chancellor to nominate persons to the authorities, the Chancellor shall to the extent necessary, nominate persons to represent interests not otherwise adequately represented.

(3) The Chancellor may on his own motion or on application call for and examine the record of any officer or authority of the University- in respect of any proceedings to satisfy himself as to the regularity of such proceedings or the correctness, legality or propriety of any decision taken or order passed therein; and, if, in any case it appears to the Chancellor that any such decision or orders shall be modified; annulled, revised or remitted for reconsideration he may pass orders accordingly:

Provided that every application to the Chancellor for the exercise of the powers under this section shall be preferred within three months from the date on which the proceedings, decision or order to which the application relates was communicated to the applicant:

Provided further that no order prejudicial to any person shall be passed unless such person has been given an opportunity of making his representation.

(4) The Chancellor shall exercise such other powers and perform such other duties as may be conferred on him by or under this Act.

**11. The Pro-Chancellor.-** (1) The Minister in charge of the Higher Education in the State of Karnataka shall - be the Pro-Chancellor of the University.

(2) The Pro-Chancellor shall exercise such powers and perform such duties as may be conferred on him by or under this Act.

**12. The Vice-Chancellor.-** (1) Appointment of the Vice-Chancellor shall be made by the Chancellor on the recommendation of the Government under sub-section (2).

(2) The Government shall for the purpose of sub-section (1) constitute a Search Committee consisting of three persons of whom, one shall be nominated by the Chancellor, one shall be nominated by the University Grants Commission and one shall be nominated by the Government. The Search Committee shall submit to the Government a panel consisting of names of three persons in alphabetical order. Such panel shall not contain the names of any member of the said Committee. The Government shall recommend to the Chancellor, the name of one of the three persons in the said panel for being appointed as Vice-Chancellor. The Government may if necessary obtain a new panel from the Search Committee. Accordingly, upon such requisition by the Government, the Search Committee shall submit to the Government a new panel of names of three persons:

Provided that,-

(a) the person so nominated shall not, be a member of any of the authorities of the University;

(b) The person so nominated by the Chancellor shall convene the meetings of the Committee;

(3) The Vice-Chancellor shall hold office for a period of four years and shall not be eligible for re-appointment:

Provided that;

(a) No person shall be appointed or hold office of the Vice-Chancellor if he has attained the age of Sixty-five years.

(b) The Vice-Chancellor may, by writing under his hand addressed to the Chancellor and after giving two months notice resign from his office;

Provided further that a person appointed as Vice-Chancellor shall retire from office, if, during the term of his office he completes the age of sixty five years.

(4) When any temporary vacancy occurs in the office of the Vice- Chancellor or when the Vice-Chancellor is by reason of absence or for any other reason, unable to exercise the powers and perform the duties of his office, the senior most Professor of the University shall exercise the powers and perform the duties of the Vice-Chancellor with the approval of the Chancellor.

(5) The Vice-Chancellor shall not be removed from his office except by an order of the Chancellor passed on the ground of willful omission or refusal to carry out the provisions of this Act or for abuse of the powers vested in him and on the advice tendered by the State Government on consideration of the report of an inquiry ordered by it under sub-section (6).

(6) For the purposes of holding an inquiry under this Section, the State Government shall appoint a person who is or has been a Judge of the High Court or the Supreme Court. The Inquiry Authority shall hold the inquiry after giving an opportunity to make representation by the Vice-Chancellor and shall submit a report to the State Government on the action to be taken including penalty, if any, to be imposed, and the State Government shall on consideration of the report advice the Chancellor. The Chancellor shall act in accordance with such advice, as far as may be within six months.

(7) The emoluments and other conditions of service of the Vice-Chancellor shall be such as may be determined by the Chancellor and shall not be varied to his disadvantage after his appointment as Vice-Chancellor. In the event of a Vice-Chancellor retiring on superannuation during his tenureship as Vice-Chancellor, his conditions of service already determined shall continue to be in vogue. All his pensionary benefits shall be kept in abeyance which shall be released after his demitting the office of the Vice-Chancellor.

(8) If a retired person is appointed as Vice-Chancellor, the terms and conditions of service upon his appointment as Vice-Chancellor including emoluments shall be determined by the Chancellor. The emoluments shall be reduced by the amount of pension and allowances drawn by him.

(9) If a Professor in the service of a University in the State is appointed as Vice-Chancellor, his terms and conditions of service as Professor shall not be revised to his disadvantage during his tenure as Vice-Chancellor and he shall retain his lien in his post.

**13. Powers and duties of the Vice-Chancellor.-** (1) The Vice-Chancellor shall be the academic head and the principal executive officer of the University and shall in the absence of the Chancellor and Pro-Chancellor, preside at any convocation of the University and confer degrees, diploma or other academic distinctions upon persons entitled to receive them. He shall be a member ex-officio and Chairman of the Syndicate, the Academic Council and the Finance Committee and shall be entitled to be present at and to address any meeting of any authority of the University but shall not be entitled to vote there at unless he is a member of the authority concerned.

(2) It shall be the duty of the Vice-Chancellor to ensure that the provisions of this Act and the Statutes are observed and carried out and he may exercise all powers necessary for this purpose.

(3) The Vice-Chancellor shall have power to convene meeting of the Syndicate, the Academic Council and the Finance Committee.

(4) (a) The Vice-Chancellor shall have power to take action on any matter and shall by order take such action as he may deem necessary but shall, as soon as may be there after report the action taken to the officer or authority or body who or which would have ordinarily dealt with the matter:

Provided that no such order shall be passed unless the person likely to be affected, has been given a reasonable opportunity of being heard;

(b) When action taken by the Vice-Chancellor under this sub-section affects any person in the service of the University, such person shall be entitled to prefer an appeal to the Syndicate within thirty days from the date on which he receives notice of such action. The Vice-Chancellor shall give effect to the order passed by the Syndicate on such appeal.

(5) The Vice-Chancellor shall give effect to the orders of the Syndicate regarding the appointment, suspension and dismissal of the teachers and other employees of the University.

(6) The Vice-chancellor shall exercise control over the affairs of the University and shall be responsible for the due maintenance of discipline in the University.

(7) The Vice-Chancellor shall exercise such other powers and perform such other duties as may be prescribed.

**14. Deans of Faculties.-** (1) Every Dean shall be appointed by the Vice-Chancellor from among the professors in the Faculty for a period of three years and he shall be eligible for re-appointment.

Provided that if at any time there is no professor in a faculty, the Vice-Chancellor shall exercise the powers of the Dean of the Faculty.

(2) When the office of the Dean is vacant or when the Dean is by reason of illness, absence or any other cause unable to perform the duties of his office, the duties of his office shall be performed by such person as the Vice-Chancellor may appoint for the purpose.

(3) The Dean shall be Head of the Faculty and shall be responsible for the conduct and maintenance of the standards of research in the Faculty. The Dean shall have such other functions as may be prescribed.

(4) The Dean shall have the right to be present and to speak at any meeting of any Board of the Studies or Committee of the Faculty as the case may be, but shall not have the right to vote there at unless he is a member there of.

**15. The Registrar.-** (1) The Registrar shall be a whole time Officer of the University. The Government may appoint an Officer belonging to the Karnataka Administrative Services of senior scale and above to be the Registrar of a University.

(2) The Registrar shall be the Ex-officio Member Secretary of the Syndicate and the Academic Council and member of the Finance Committee.

(3) The Registrar may be assisted by one or more Deputy Registrars and Assistant Registrars.

**16. Powers and Duties of the Registrar.-** (1) (a) The Registrar shall have power to take disciplinary action against such of the employees excluding teachers and the academic staff as may be specified in the orders of the Syndicate and to suspend them pending inquiry, to administer warnings to them or to impose on them penalty of censure or withholding of increments.

Provided that no such penalty shall be imposed unless the person concerned has been given a reasonable opportunity of showing cause against the action proposed to be taken in regard to him.

(b) An appeal shall lie to the Vice-Chancellor against any order of the Registrar imposing any of the penalty specified in clause (a).

(c) In any case, where the inquiry discloses that punishment beyond the powers of the Registrar is called for, the Registrar shall upon conclusion at the inquiry make a report to the Vice-Chancellor along with his recommendations.

Provided that an appeal shall lie to the Syndicate against an order of the Vice-Chancellor imposing penalty.

(d) No appeal under clause (b) or clause (c) shall be preferred after the expiry of sixty days from the date on which the order appealed against was received by the appellant.

(2) The Registrar shall be the Member Secretary of the syndicate, the Academic Council , the Faculties and the Boards of Studies.

(3) It shall be the duty of the Registrar,-

(a) to be the custodian of the records, the common seal and such properties of the Universities as the Syndicate shall commit to his charge.

(b) to issue all notices convening meetings of the Syndicate, the Academic Council, the Faculties, the Boards of Studies and of any Committee appointed by the authorities of the University.

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಜುಲೈ ೨೯, ೨೦೦೯ (ಶ್ರಾವಣ ೭, ಶಕ ವರ್ಷ ೧೯೩೧) | ನಂ. ೬೧೪ |
|---|---|---|

**ಸಹಕಾರ ಸಚಿವಾಲಯ**

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಪಿ.ಬಿ.ನಂ. 5309, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಕೃಮಾಇ:18:ಚುನಾವಣೆ:2008, ಬೆಂಗಳೂರು, ದಿನಾಂಕ: 15ನೇ ಜುಲೈ, 2009**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 102 ಹಾಗೂ ನಿಯಮಾವಳಿಗಳು, 1968ರ ನಿಯಮ 88ಐರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾದ ಜಿ. ರಾಮಚಂದ್ರ ಆದ ನಾನು, ಚಿಕ್ಕಬಳ್ಳಾಪುರ ಜಿಲ್ಲೆಯಿಂದ ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಈ ಕೆಳಕಂಡಂತೆ ಪ್ರಕಟಿಸಿರುತ್ತೇನೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಆಯ್ಕೆಯಾದ ಸದಸ್ಯರ ಹೆಸರು |
|---|---|---|
| 1 | ಚಿಕ್ಕಬಳ್ಳಾಪುರ | ಶ್ರೀಮತಿ ಆರ್. ಮುನಿಲಕ್ಷ್ಮಮ್ಮ<br>ಅಧ್ಯಕ್ಷರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ,<br>ಗೌರಿಬಿದನೂರು. |

**ಜಿ. ರಾಮಚಂದ್ರ**
ನಿರ್ದೇಶಕರು.

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಜುಲೈ ೨೯, ೨೦೦೯ (ಶ್ರಾವಣ ೭, ಶಕ ವರ್ಷ ೧೯೩೧) | ನಂ. ೬೧೫ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/228/Bill/2009, Bangalore, Dated : 29th July, 2009**

The following Bill was introduced in Legislative Assembly on 29th July, 2009.

**THE KARNATAKA APPROPRIATION (No. 2) BILL, 2009**

**(L.A. Bill No. 32 of 2009)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಮೂರನೇ ಅಧಿವೇಶನ**

**ಕರ್ನಾಟಕ ಧನವಿನಿಯೋಗ (ಸಂಖ್ಯೆ 2) ವಿಧೇಯಕ, 2009**
**(2009ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 32)**

2009–2010ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಕೆಲವು ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡಲು ಒಂದು ವಿಧೇಯಕ.

2009–2010ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಆ ಪೈಕಿಯಿಂದ ಕೆಲವು ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡುವುದು ಯುಕ್ತವಾಗಿರುವುದರಿಂದ ;

ಇದು ಭಾರತ ಗಣರಾಜ್ಯದ ಅರವತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮವಾಗಲಿ.

**1. ಸಂಕ್ಷಿಪ್ತ ಹೆಸರು :–** ಈ ಅಧಿನಿಯಮವನ್ನು ಕರ್ನಾಟಕ ಧನವಿನಿಯೋಗ (ಸಂಖ್ಯೆ 2) ಅಧಿನಿಯಮ, 2009 ಎಂದು ಕರೆಯತಕ್ಕದ್ದು.

**2. ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ 2009–2010ನೇ ಹಣಕಾಸು ವರ್ಷಕ್ಕಾಗಿ 6442162.78 ಲಕ್ಷ ರೂಪಾಯಿಗಳ ನೀಡಿಕೆ :–** ಅನುಸೂಚಿಯ 2ನೇ ಅಂಕಣದಲ್ಲಿ ನಿರ್ದಿಷ್ಟ ಪಡಿಸಲಾದ ಸೇವೆಗಳ ಸಂಬಂಧದಲ್ಲಿ 2009–2010ನೇ ಹಣಕಾಸು ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ (2009ರ ಕರ್ನಾಟಕ ಅಧಿನಿಯಮ ಸಂಖ್ಯೆ 4ರಲ್ಲಿ ಸಂದಾಯ ಮಾಡಲು ಅಧಿಕಾರ ನೀಡಲಾದ 21,25,913.72 ಲಕ್ಷ ರೂಪಾಯಿಗಳನ್ನು ಒಳಗೊಂಡಂತೆ) ಅನುಸೂಚಿಯ 5ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾಗಿರುವ ಅರವತ್ತನಾಲ್ಕು ಸಾವಿರದ ನಾಲ್ಕುನೂರಾ ಇಪ್ಪತ್ತೊಂದು ಕೋಟಿ ಅರವತ್ತೆರಡು ಲಕ್ಷದ ಎಪ್ಪತ್ತೆಂಟು ಸಾವಿರ ರೂಪಾಯಿಗಳಿಗೆ ಮೀರದಷ್ಟು ಮೊಬಲಗನ್ನು ಮಾತ್ರ ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡತಕ್ಕದ್ದು ಮತ್ತು ಉಪಯೋಗಿಸತಕ್ಕದ್ದು.

3. ಧನವಿನಿಯೋಗ :– ಈ ಅಧಿನಿಯಮದ ಮೂಲಕ, ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡಲು ಮತ್ತು ಉಪಯೋಗಿಸಲು ಅಧಿಕಾರ ನೀಡಲಾದ ಮೊತ್ತಗಳನ್ನು ಸದರಿ ವರ್ಷಕ್ಕೆ ಸಂಬಂಧಪಟ್ಟಂತೆ ಅನುಸೂಚಿಯಲ್ಲಿ ತಿಳಿಸಲಾದ ಸೇವೆಗಳು ಮತ್ತು ಉದ್ದೇಶಗಳಿಗಾಗಿ ವಿನಿಯೋಗಿಸತಕ್ಕದ್ದು.

**ಅನುಸೂಚಿ**

(2 ಮತ್ತು 3ನೇ ಪ್ರಕರಣಗಳನ್ನು ನೋಡಿ)

**(ರೂ. ಲಕ್ಷಗಳಲ್ಲಿ)**

| | | | ಮೀರದ ಮೊಬಲಗು | | |
|---|---|---|---|---|---|
| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ವಿಧಾನಸಭೆ ಯಿಂದ ಪುರಸ್ಕೃತ ವಾದುದನ್ನು | ಸಂಚಿತನಿಧಿ ಯಿಂದ ಪ್ರಭೃತ ವಾದುದನ್ನು | ಒಟ್ಟು |
| 1 | 2 | | 3 | 4 | 5 |
| 01 | ಕೃಷಿ ಮತ್ತು ತೋಟಗಾರಿಕೆ | ರಾಜಸ್ವ | 170028.69 | 23.71 | 170052.40 |
| | | ಬಂಡವಾಳ | 2500.00 | - | 2500.00 |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ | ರಾಜಸ್ವ | 68739.54 | 23.75 | 68763.29 |
| | | ಬಂಡವಾಳ | 7338.50 | - | 7338.50 |
| 03 | ಆರ್ಥಿಕ | ರಾಜಸ್ವ | 558141.44 | 33.25 | 558174.69 |
| | | ಬಂಡವಾಳ | 1037.00 | - | 1037.00 |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ | ರಾಜಸ್ವ | 37361.43 | 8921.62 | 46283.05 |
| | | ಬಂಡವಾಳ | - | - | - |
| 05 | ಒಳಾಡಳಿತ ಮತ್ತು ಸಾರಿಗೆ | ರಾಜಸ್ವ | 222349.83 | - | 222349.83 |
| | | ಬಂಡವಾಳ | 35235.67 | - | 35235.67 |
| 06 | ಮೂಲಭೂತ ಸೌಕರ್ಯ | ರಾಜಸ್ವ | 1058.30 | - | 1058.30 |
| | | ಬಂಡವಾಳ | 41533.00 | - | 41533.00 |
| 07 | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತಿ ರಾಜ್ | ರಾಜಸ್ವ | 156720.63 | - | 156720.63 |
| | | ಬಂಡವಾಳ | 156490.00 | - | 156490.00 |
| 08 | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ | ರಾಜಸ್ವ | 49481.27 | 1113.50 | 50594.77 |
| | | ಬಂಡವಾಳ | 312.60 | - | 312.60 |
| 09 | ಸಹಕಾರ | ರಾಜಸ್ವ | 32932.45 | - | 32932.45 |
| | | ಬಂಡವಾಳ | 1330.50 | - | 1330.50 |

| 1 | 2 | | 3 | 4 | 5 |
|---|---|---|---|---|---|
| 10 | ಸಮಾಜ ಕಲ್ಯಾಣ | ರಾಜಸ್ವ | 198336.06 | - | 198336.06 |
| | | ಬಂಡವಾಳ | 24477.33 | - | 24477.33 |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ | ರಾಜಸ್ವ | 158576.16 | - | 158576.16 |
| | | ಬಂಡವಾಳ | 7210.00 | - | 7210.00 |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು | ರಾಜಸ್ವ | 20745.86 | - | 20745.86 |
| | | ಬಂಡವಾಳ | 11100.00 | - | 11100.00 |
| 13 | ಆಹಾರ ಮತ್ತು ನಾಗರೀಕ ಸರಬರಾಜು | ರಾಜಸ್ವ | 80896.85 | 2.70 | 80899.55 |
| | | ಬಂಡವಾಳ | 1800.00 | - | 1800.00 |
| 14 | ಕಂದಾಯ | ರಾಜಸ್ವ | 213623.08 | 110.32 | 213733.40 |
| | | ಬಂಡವಾಳ | 10020.00 | - | 10020.00 |
| 15 | ಮಾಹಿತಿ ತಂತ್ರಜ್ಞಾನ | ರಾಜಸ್ವ | 3407.70 | - | 3407.70 |
| | | ಬಂಡವಾಳ | 1660.00 | - | 1660.00 |
| 16 | ವಸತಿ | ರಾಜಸ್ವ | 73813.68 | - | 73813.68 |
| | | ಬಂಡವಾಳ | 25119.23 | - | 25119.23 |
| 17 | ಶಿಕ್ಷಣ | ರಾಜಸ್ವ | 870187.80 | - | 870187.80 |
| | | ಬಂಡವಾಳ | 26093.15 | - | 26093.15 |
| 18 | ವಾಣಿಜ್ಯ ಮತ್ತು ಕೈಗಾರಿಕೆ | ರಾಜಸ್ವ | 134787.21 | 0.26 | 134787.47 |
| | | ಬಂಡವಾಳ | 10642.00 | - | 10642.00 |
| 19 | ನಗರಾಭಿವೃದ್ಧಿ | ರಾಜಸ್ವ | 436761.41 | - | 436761.41 |
| | | ಬಂಡವಾಳ | 128666.00 | - | 128666.00 |
| 20 | ಲೋಕೋಪಯೋಗಿ | ರಾಜಸ್ವ | 130630.14 | - | 130630.14 |
| | | ಬಂಡವಾಳ | 239572.00 | - | 239572.00 |
| 21 | ಜಲಸಂಪನ್ಮೂಲ | ರಾಜಸ್ವ | 33890.93 | - | 33890.93 |
| | | ಬಂಡವಾಳ | 450478.97 | - | 450478.97 |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | ರಾಜಸ್ವ | 194648.60 | - | 194648.60 |
| | | ಬಂಡವಾಳ | 35696.00 | - | 35696.00 |
| 23 | ಕಾರ್ಮಿಕ | ರಾಜಸ್ವ | 36272.81 | - | 36272.81 |
| | | ಬಂಡವಾಳ | 300.00 | - | 300.00 |

| | | | | | |
|---|---|---|---|---|---|
| 24 | ಇಂಧನ | ರಾಜಸ್ವ<br>ಬಂಡವಾಳ | 243940.67<br>76200.00 | 190.00<br>- | 244130.67<br>76200.00 |
| 25 | ಕನ್ನಡ ಮತ್ತು ಸಂಸ್ಕೃತಿ | ರಾಜಸ್ವ<br>ಬಂಡವಾಳ | 19470.35<br>1181.64 | -<br>- | 19470.35<br>1181.64 |
| 26 | ಯೋಜನೆ, ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ | ರಾಜಸ್ವ<br>ಬಂಡವಾಳ | 42477.21<br>- | -<br>- | 42477.21<br>- |
| 27 | ಕಾನೂನು | ರಾಜಸ್ವ<br>ಬಂಡವಾಳ | 25933.80<br>- | -<br>- | 25933.80<br>- |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ | ರಾಜಸ್ವ<br>ಬಂಡವಾಳ | 7165.39<br>- | 139.97<br>- | 7305.36<br>- |
| 29 | ಋಣ ಮೇಲುಸ್ತುವಾರಿ | ರಾಜಸ್ವ<br>ಬಂಡವಾಳ | -<br>- | 557800.00<br>355430.82 | 557800.00<br>355430.82 |
| | **ಒಟ್ಟು** | | **5518372.88** | **923789.90** | **6442162.78** |

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

2009–2010ನೇ ಹಣಕಾಸು ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ರಾಜ್ಯದ ಸಂಚಿತ ನಿಧಿಯೊಳಗಿನಿಂದ ವಿನಿಯೋಗಿಸಲು ಭಾರತ ಸಂವಿಧಾನದ 204ನೇ ಅನುಚ್ಛೇದದ ಉಪಬಂಧಗಳಿಗನುಸಾರವಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

**ಬಿ.ಎಸ್. ಯಡಿಯೂರಪ್ಪ**
ಮುಖ್ಯಮಂತ್ರಿಗಳು ಹಾಗೂ
ಹಣಕಾಸು ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ

**KARNATAKA LEGISLATIVE ASSEMBLY**

**THIRTEENTH LEGISLATIVE ASSEMBLY**

**THIRD SESSION**

**THE KARNATAKA APPROPRIATION (No. 2) BILL, 2009**

**(L.A. Bill No. 32 of 2009)**

A Bill to authorize payment and appropriation of certain sums from and out of the Consolidated Fund of the State of Karnataka for the Services of the Financial Year 2009-2010.

Whereas it is expedient to authorize payment and appropriation of certain sums from and out of the Consolidated Fund of the State for the services of the Financial Year 2009-2010.

Be it enacted by the Karnataka State Legislature in the Sixtieth Year of the Republic of India as follows :-

**1. Short Title :** This Act may be called the Karnataka Appropriation (No. 2) Act, 2009.

**2. Issue of Rupees 6442162.78 Lakhs out of the Consolidated Fund of the State of Karnataka for the Financial Year 2009-2010.** From and out of the Consolidated Fund of the State of Karnataka, there may be paid and applied sums not exceeding those specified in column 5 of the Scheduled amount in the aggregate to the sum of **Rupees Sixtyfour thousand four hundred twenty one crores sixty two lakhs seventy eight thousand only** (inclusive of the amount of Rupees 21,25,913.72 lakhs authorised to be paid in Karnataka Act No. 4 of 2009) towards defraying the several charges which will come in the course of payment during the Financial Year 2009-2010 in respect of the services specified in column 2 of the Schedule.

**3. Appropriation :-** The sums authorized to be paid and applied from and out of the Consolidated Fund of the State by this Act shall be appropriated for the services and purposes expressed in the Schedule in relation to the said year.

**SCHEDULE**

*(See Sections 2 and 3)*

**(Rs. in Lakhs)**

| | | | Sums not exceeding | | |
|---|---|---|---|---|---|
| Demand No. | Service & Purpose | | Voted by the Legislative Assembly | Charged on the Consoli dated Fund | Total |
| 1 | 2 | | 3 | 4 | 5 |
| 01 | Agriculture & Horticulture | Revenue | 170028.69 | 23.71 | 170052.40 |
| | | Capital | 2500.00 | - | 2500.00 |
| 02 | Animal Husbandry & Fisheries | Revenue | 68739.54 | 23.75 | 68763.29 |
| | | Capital | 7338.50 | - | 7338.50 |
| 03 | Finance | Revenue | 558141.44 | 33.25 | 558174.69 |
| | | Capital | 1037.00 | - | 1037.00 |
| 04 | Department of Personnel & Administrative Reforms | Revenue | 37361.43 | 8921.62 | 46283.05 |
| | | Capital | - | - | - |
| 05 | Home and Transport | Revenue | 222349.83 | - | 222349.83 |
| | | Capital | 35235.67 | - | 35235.67 |
| 06 | Infrastructure Development | Revenue | 1058.30 | - | 1058.30 |
| | | Capital | 41533.00 | - | 41533.00 |
| 07 | Rural Development & Panchayat Raj | Revenue | 156720.63 | - | 156720.63 |
| | | Capital | 156490.00 | - | 156490.00 |
| 08 | Forest, Ecology & Environment | Revenue | 49481.27 | 1113.50 | 50594.77 |
| | | Capital | 312.60 | - | 312.60 |
| 09 | Co-operation | Revenue | 32932.45 | - | 32932.45 |
| | | Capital | 1330.50 | - | 1330.50 |
| 10 | Social Welfare | Revenue | 198336.06 | - | 198336.06 |
| | | Capital | 24477.33 | - | 24477.33 |
| 11 | Women & Child Development | Revenue | 158576.16 | - | 158576.16 |
| | | Capital | 7210.00 | - | 7210.00 |
| 12 | Information, Tourism & Youth Services | Revenue | 20745.86 | - | 20745.86 |
| | | Capital | 11100.00 | - | 11100.00 |

| | | | | | |
|---|---|---|---|---|---|
| 13 | Food and Civil Supplies | Revenue<br>Capital | 80896.85<br>1800.00 | 2.70<br>- | 80899.55<br>1800.00 |
| 14 | Revenue | Revenue<br>Capital | 213623.08<br>10020.00 | 110.32<br>- | 213733.40<br>10020.00 |
| 15 | Information Technology | Revenue<br>Capital | 3407.70<br>1660.00 | -<br>- | 3407.70<br>1660.00 |
| 16 | Housing | Revenue<br>Capital | 73813.68<br>25119.23 | -<br>- | 73813.68<br>25119.23 |
| 17 | Education | Revenue<br>Capital | 870187.80<br>26093.15 | -<br>- | 870187.80<br>26093.15 |
| 18 | Commerce & Industries | Revenue<br>Capital | 134787.21<br>10642.00 | 0.26<br>- | 134787.47<br>10642.00 |
| 19 | Urban Development | Revenue<br>Capital | 436761.41<br>128666.00 | -<br>- | 436761.41<br>128666.00 |
| 20 | Public Works | Revenue<br>Capital | 130630.14<br>239572.00 | -<br>- | 130630.14<br>239572.00 |
| 21 | Water Resources | Revenue<br>Capital | 33890.93<br>450478.97 | -<br>- | 33890.93<br>450478.97 |
| 22 | Health and Family Welfare | Revenue<br>Capital | 194648.60<br>35696.00 | -<br>- | 194648.60<br>35696.00 |
| 23 | Labour | Revenue<br>Capital | 36272.81<br>300.00 | -<br>- | 36272.81<br>300.00 |
| 24 | Energy | Revenue<br>Capital | 243940.67<br>76200.00 | 190.00<br>- | 244130.67<br>76200.00 |
| 25 | Kannada and Culture | Revenue<br>Capital | 19470.35<br>1181.64 | -<br>- | 19470.35<br>1181.64 |
| 26 | Planning, Statistics, Science & Technology | Revenue<br>Capital | 42477.21<br>- | -<br>- | 42477.21<br>- |
| 27 | Law | Revenue<br>Capital | 25933.80<br>- | -<br>- | 25933.80<br>- |
| 28 | Parliamentary Affairs & Legislation | Revenue<br>Capital | 7165.39<br>- | 139.97<br>- | 7305.36<br>- |
| 29 | Debt Servicing | Revenue<br>Capital | -<br>- | 557800.00<br>355430.82 | 557800.00<br>355430.82 |
| | **Total** | | **5518372.88** | **923789.90** | **6442162.78** |

**STATEMENT OF OBJECTS AND REASONS**

This Bill is introduced in pursuance of the provisions of Article 204 of the Constitution of India to provide for the appropriation out of the Consolidated Fund of the State towards defraying the several charges which will come in course of payment during the Financial Year 2009-2010.

**B.S. YEDDYURAPPA**
Chief Minister and
Minister for Finance

**S.B. PATIL**
Secretary
Karnataka Legislative Assembly

**S.B. PATIL**
Secretary
Karnataka Legislative Assembly

**ವಿಶೇಷ ಪತ್ರಿಕೆ**

| ಭಾಗ – IV-A | ಬೆಂಗಳೂರು, ಬುಧವಾರ, ಜುಲೈ ೨೯, ೨೦೦೯ (ಶ್ರಾವಣ ೭, ಶಕ ವರ್ಷ ೧೯೩೧) | ನಂ. ೬೧೬ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/241/Bill/2009, Bangalore, Dated : 29th July, 2009**

The following Bill was introduced in Legislative Assembly on 29th July, 2009.

**THE KARNATAKA APPROPRIATION (No. 3) BILL, 2009**

**(L.A. Bill No. 36 of 2009)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಮೂರನೇ ಅಧಿವೇಶನ**

**ಕರ್ನಾಟಕ ಧನವಿನಿಯೋಗ (ಸಂಖ್ಯೆ 3) ವಿಧೇಯಕ, 2009**
**(2009ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 36)**

2009–10ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಕೆಲವು ಅಧಿಕ ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡಲು ಒಂದು ವಿಧೇಯಕ.

2009–10ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಆ ಪೈಕಿಯಿಂದ ಕೆಲವು ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡುವುದು ಯುಕ್ತವಾಗಿರುವುದರಿಂದ ;

ಇದು ಭಾರತ ಗಣರಾಜ್ಯದ ಅರವತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮಿತವಾಗಲಿ,

**1. ಸಂಕ್ಷಿಪ್ತ ಹೆಸರು :–** ಈ ಅಧಿನಿಯಮವನ್ನು ಕರ್ನಾಟಕ ಧನವಿನಿಯೋಗ (ಸಂಖ್ಯೆ.3) ಅಧಿನಿಯಮ, 2009 ಎಂದು ಕರೆಯತಕ್ಕದ್ದು.

**2. ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ 2009–10ನೇ ಹಣಕಾಸು ವರ್ಷಕ್ಕಾಗಿ 196906.00 ಲಕ್ಷ ರೂಪಾಯಿಗಳ ನೀಡಿಕೆ:–** ಅನುಸೂಚಿಯ 2ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾದ ಸೇವೆಗಳ ಸಂಬಂಧದಲ್ಲಿ 2009–10ನೇ ಹಣಕಾಸು ಅವಧಿಯಲ್ಲಿ ಸಂದಾಯ ಮಾಡುವಾಗ ಒದಗಿ ಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ಅನುಸೂಚಿಯ 5ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾಗಿರುವ ಒಂದು ಸಾವಿರದ ಒಂಬೈನೂರ ಅರವತ್ತೊಂಭತ್ತು ಕೋಟಿ ಆರು ಲಕ್ಷ ರೂಪಾಯಿಗಳು

ಮಾತ್ರ ಮೀರದಷ್ಟು ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡತಕ್ಕದ್ದು ಮತ್ತು ಉಪಯೋಗಿಸತಕ್ಕದ್ದು

3. **ಧನವಿನಿಯೋಗ :–** ಈ ಅಧಿನಿಯಮದ ಮೂಲಕ, ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡಲು ಮತ್ತು ಉಪಯೋಗಿಸಲು ಅಧಿಕಾರ ನೀಡಲಾದ ಮೊತ್ತಗಳನ್ನು ಸದರಿ ವರ್ಷಕ್ಕೆ ಸಂಬಂಧಪಟ್ಟಂತೆ ಅನುಸೂಚಿಯಲ್ಲಿ ತಿಳಿಸಲಾದ ಸೇವೆಗಳು ಮತ್ತು ಉದ್ದೇಶಗಳಿಗಾಗಿ ವಿನಿಯೋಗಿಸತಕ್ಕದ್ದು.

**ಅನುಸೂಚಿ**

(2 ಮತ್ತು 3ನೇ ಪ್ರಕರಣಗಳನ್ನು ನೋಡಿ)

**(ರೂ. ಲಕ್ಷಗಳಲ್ಲಿ)**

| | | | ಮೀರದ ಮೊಬಲಗು | | |
|---|---|---|---|---|---|
| ಬೇಡಿಕೆ ಸಂಖ್ಯೆ | ಸೇವೆ ಮತ್ತು ಉದ್ದೇಶ | | ವಿಧಾನಸಭೆ ಯಿಂದ ಪುರಸ್ಕೃತ ವಾದುದು | ಸಂಚಿತ ನಿಧಿ ಯಿಂದ ಪ್ರಭೃತ ವಾದುದು | ಒಟ್ಟು |
| 1 | 2 | | 3 | 4 | 5 |
| 01 | ಕೃಷಿ ಮತ್ತು ತೋಟಗಾರಿಕೆ | ರಾಜಸ್ವ | 2100.00 | --- | 2100.00 |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ | ರಾಜಸ್ವ | 1200.99 | 2.46 | 1203.45 |
| | | ಬಂಡವಾಳ | 155.00 | --- | 155.00 |
| 03 | ಆರ್ಥಿಕ | ರಾಜಸ್ವ | 99.71 | 5.00 | 104.71 |
| | | ಬಂಡವಾಳ | 7150.00 | | 7150.00 |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ | ರಾಜಸ್ವ | 12735.08 | 17.80 | 12752.88 |
| 05 | ಒಳಾಡಳಿತ ಮತ್ತು ಸಾರಿಗೆ | ರಾಜಸ್ವ | 2453.98 | --- | 2453.98 |
| | | ಬಂಡವಾಳ | 4200.00 | --- | 4200.00 |
| 07 | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತಿ ರಾಜ್ | ರಾಜಸ್ವ | 30672.00 | --- | 30672.00 |
| | | ಬಂಡವಾಳ | 8212.00 | | 8212.00 |
| 08 | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ | ರಾಜಸ್ವ | 2090.09 | --- | 2090.09 |
| 09 | ಸಹಕಾರ | ರಾಜಸ್ವ | 10000.00 | --- | 10000.00 |
| | | ಬಂಡವಾಳ | 1585.00 | --- | 1585.00 |
| 10 | ಸಮಾಜ ಕಲ್ಯಾಣ | ರಾಜಸ್ವ | 932.73 | --- | 932.73 |
| | | ಬಂಡವಾಳ | 1571.27 | --- | 1571.27 |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ | ರಾಜಸ್ವ | 400.00 | --- | 400.00 |

| | | | | | |
|---|---|---|---|---|---|
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು | ರಾಜಸ್ವ | 5997.19 | --- | 5997.19 |
| 13 | ಆಹಾರ ಮತ್ತು ನಾಗರೀಕ ಸರಬರಾಜು | ರಾಜಸ್ವ | 11700.00 | --- | 11700.00 |
| 14 | ಕಂದಾಯ | ರಾಜಸ್ವ | 3691.75 | --- | 3691.75 |
| 15 | ಮಾಹಿತಿ ತಂತ್ರಜ್ಞಾನ | ರಾಜಸ್ವ | 699.00 | | 699.00 |
| 17 | ಶಿಕ್ಷಣ | ರಾಜಸ್ವ | 576.63 | --- | 576.63 |
| 18 | ವಾಣಿಜ್ಯ ಮತ್ತು ಕೈಗಾರಿಕೆ | ರಾಜಸ್ವ | 156.33 | --- | 156.33 |
| | | ಬಂಡವಾಳ | 2765.82 | --- | 2765.82 |
| 19 | ನಗರಾಭಿವೃದ್ಧಿ | ರಾಜಸ್ವ | 16486.43 | --- | 16486.43 |
| 20 | ಲೋಕೋಪಯೋಗಿ | ರಾಜಸ್ವ | 3310.00 | --- | 3310.00 |
| | | ಬಂಡವಾಳ | 9000.00 | --- | 9000.00 |
| 21 | ಜಲಸಂಪನ್ಮೂಲ | ರಾಜಸ್ವ | 5671.92 | --- | 5671.92 |
| | | ಬಂಡವಾಳ | 1225.00 | --- | 1225.00 |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು | ರಾಜಸ್ವ | 5942.36 | --- | 5942.36 |
| | | ಬಂಡವಾಳ | 350.00 | --- | 350.00 |
| 23 | ಕಾರ್ಮಿಕ | ರಾಜಸ್ವ | 6000.00 | --- | 6000.00 |
| | | ಬಂಡವಾಳ | 1000.00 | --- | 1000.00 |
| 24 | ಇಂಧನ | ಬಂಡವಾಳ | 17500.00 | --- | 17500.00 |
| 25 | ಕನ್ನಡ ಮತ್ತು ಸಂಸ್ಕೃತಿ | ರಾಜಸ್ವ | 1169.00 | --- | 1169.00 |
| 26 | ಯೋಜನೆ, ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ | ರಾಜಸ್ವ | 15597.43 | --- | 15597.43 |
| 27 | ಕಾನೂನು | ರಾಜಸ್ವ | 1699.75 | --- | 1699.75 |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ | ರಾಜಸ್ವ | 763.28 | --- | 763.28 |
| 29 | ಋಣ ಮೇಲುಸ್ತುವಾರಿ | ರಾಜಸ್ವ | --- | 1.00 | 1.00 |
| | | ಬಂಡವಾಳ | | 20.00 | 20.00 |
| | ಒಟ್ಟು : | **ರಾಜಸ್ವ** | **142145.65** | **26.26** | **142171.91** |
| | | **ಬಂಡವಾಳ** | **54714.09** | **20.00** | **54734.09** |
| | | **ಒಟ್ಟು ಮೊತ್ತ :** | **196859.74** | **46.26** | **196906.00** |

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

2009–10ನೇ ಹಣಕಾಸು ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿ ಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ರಾಜ್ಯದ ಸಂಚಿತ ನಿಧಿಯೊಳಗಿನಿಂದ ವಿನಿಯೋಗಿಸಲು ಭಾರತ ಸಂವಿಧಾನದ 205ನೇ (1)(ಎ) ಅನುಚ್ಛೇದದ ಉಪಬಂಧಗಳಿಗನುಸಾರವಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

**ಬಿ.ಎಸ್. ಯಡಿಯೂರಪ್ಪ**
ಮುಖ್ಯಮಂತ್ರಿಗಳು ಹಾಗೂ
ಹಣಕಾಸು ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**
**THIRD SESSION**

**THE KARNATAKA APPROPRIATION (No. 3) BILL, 2009**
**(L.A. Bill No. 36 of 2009)**

A Bill to authorise payment and appropriation of certain further sums from and out of the Consolidated Fund of the S the services of the financial year 2009-10.

Whereas it is expedient to authorise payment and appropriation of certain further sums from and out of the Consolidated Fund of the State for the services of the financial year 2009-10.;

Be it enacted by Karnataka State Legislature in the Sixtieth year of the Republic of India, as follows:-

**1. Short title:-** This Act may be called the Karnataka Appropriation (No. 3) Act, 2009.

**2. Issue of Rupees 196906.00 lakhs out of the Consolidated Fund of the State for the Financial year 2009-10:-** From and out of the Consolidated Fund of the State, there may be paid and applied sums not exceeding those specified in Column 5 of the Scheduled amount in the aggregate to the sum of ***Rupees One thousand nine hundred and sixty nine crores and six lakhs only*** towards defraying the several charges which will come in the course of payment during the financial year 2009-10.in respect of the services specified in Column 2 of the Schedule.

**3. Appropriation**:- The sums authorised to be paid and applied from and out of the Consolidated Fund of the State by this tate for Act shall be appropriated for the services and purposes expressed in the Schedule in relation to the said year.

**SCHEDULE**
*(See Sections 2 and 3)*

**(Rs. in Lakhs)**

| Demand No. | Service & Purpose | | Sums not exceeding: Voted by the Legislative Assembly | Sums not exceeding: Charged on the Consoli dated Fund | Total |
|---|---|---|---|---|---|
| 1 | 2 | | 3 | 4 | 5 |
| 01 | Agriculture & Horticulture | Revenue | 2100.00 | --- | 2100.00 |
| 02 | Animal Husbandry & Fisheries | Revenue | 1200.99 | 2.46 | 1203.45 |
| | | Capital | 155.00 | --- | 155.00 |
| 03 | Finance | Revenue | 99.71 | 5.00 | 104.71 |
| | | Capital | 7150.00 | | 7150.00 |
| 04 | Department of Personnel & Administrative Reforms | Revenue | 12735.08 | 17.80 | 12752.88 |

| | | | | | |
|---|---|---|---|---|---|
| 05 | Home and Transport | Revenue<br>Capital | 2453.98<br>4200.00 | ---<br>--- | 2453.98<br>4200.00 |
| 07 | Rural Development & Panchayat Raj | Revenue<br>Capital | 30672.00<br>8212.00 | --- | 30672.00<br>8212.00 |
| 08 | Forest, Ecology & Environment | Revenue | 2090.09 | --- | 2090.09 |
| 09 | Co-operation | Revenue<br>Capital | 10000.00<br>1585.00 | ---<br>--- | 10000.00<br>1585.00 |
| 10 | Social Welfare | Revenue<br>Capital | 932.73<br>1571.27 | ---<br>--- | 932.73<br>1571.27 |
| 11 | Women & Child Development | Revenue | 400.00 | --- | 400.00 |
| 12 | Information, Tourism & Youth Service | Revenue | 5997.19 | --- | 5997.19 |
| 13 | Food and Civil Supplies | Revenue | 11700.00 | --- | 11700.00 |
| 14 | Revenue | Revenue | 3691.75 | --- | 3691.75 |
| 15 | Information Technology | Revenue | 699.00 | | 699.00 |
| 17 | Education | Revenue | 576.63 | --- | 576.63 |
| 18 | Commerce & Industries | Revenue<br>Capital | 156.33<br>2765.82 | ---<br>--- | 156.33<br>2765.82 |
| 19 | Urban Development | Revenue | 16486.43 | --- | 16486.43 |
| 20 | Public Works | Revenue<br>Capital | 3310.00<br>9000.00 | ---<br>--- | 3310.00<br>9000.00 |
| 21 | Water Resources | Revenue<br>Capital | 5671.92<br>1225.00 | ---<br>--- | 5671.92<br>1225.00 |
| 22 | Health and Family Welfare | Revenue<br>Capital | 5942.36<br>350.00 | ---<br>--- | 5942.36<br>350.00 |
| 23 | Labour | Revenue<br>Capital | 6000.00<br>1000.00 | ---<br>--- | 6000.00<br>1000.00 |
| 24 | Energy | Capital | 17500.00 | --- | 17500.00 |
| 25 | Kannada and Culture | Revenue | 1169.00 | --- | 1169.00 |
| 26 | Planning, Statistics, Science & Technology | Revenue | 15597.43 | --- | 15597.43 |
| 27 | Law | Revenue | 1699.75 | --- | 1699.75 |
| 28 | Parliamentary Affairs & Legislation | Revenue | 763.28 | --- | 763.28 |
| 29 | Debt Servicing | Revenue<br>Capital | --- | 1.00<br>20.00 | 1.00<br>20.00 |
| | **Total:** | **Revenue** | **142145.65** | **26.26** | **142171.91** |
| | | **Capital** | **54714.09** | **20.00** | **54734.09** |
| | **GRAND TOTAL:** | | **196859.74** | **46.26** | **196906.00** |

**STATEMENT OF OBJECTS AND REASONS**

This Bill is introduced in pursuance of the provisions of Article 205 of the Constitution of India to provide for the appropriation out of the Consolidated Fund of the State towards defraying the several charges which will come in course of payment during the financial year, 2009-10.

**B.S. YEDDYURAPPA**
Chief Minister and
Minister for Finance

**S.B. PATIL**
Secretary
Karnataka Legislative Assembly

**S.B. PATIL**
Secretary
Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಬುಧವಾರ, ಜುಲೈ ೨೯, ೨೦೦೯ (ಶ್ರಾವಣ ೭, ಶಕ ವರ್ಷ ೧೯೩೧) | ನಂ. ೬೧೭ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/245/2009, Bangalore, Dated : 29th July, 2009**

The following Bill was introduced in Legislative Assembly on 29th July, 2009.

**THE KARNATAKA LEGISLATURE SALARIES, PENSIONS AND ALLOWANCES (AMENDMENT) BILL, 2009**

**(L.A. Bill No. 38 of 2009)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಮೂರನೇ ಅಧಿವೇಶನ**

**ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ತಿದ್ದುಪಡಿ) ವಿಧೇಯಕ, 2009**

**(2009ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 38)**

ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ಕ್ಕೆ ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ನ್ನು (1957ರ ಕರ್ನಾಟಕ ಅಧಿನಿಯಮ 2) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು *ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ತಿದ್ದುಪಡಿ) ಅಧಿನಿಯಮ, 2009* ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. ಪ್ರಸ್ತಾವನೆಯ ತಿದ್ದುಪಡಿ.–** ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ರ (1957ರ ಕರ್ನಾಟಕ ಅಧಿನಿಯಮ 2)(ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) ಪ್ರಸ್ತಾವನೆಯಲ್ಲಿ,–

(ಎ) "ಮತ್ತು ಸರ್ಕಾರದ ಮುಖ್ಯ ಸಚೇತಕ" ಎಂಬ ಪದಗಳಿಗೆ ", ಸರ್ಕಾರದ ಮುಖ್ಯ ಸಚೇತಕರುಗಳು ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ಬಿ) "ಸರ್ಕಾರದ ಮುಖ್ಯ ಸಚೇತಕ" ಎಂಬ ಪದಗಳಿಗೆ "ಸರ್ಕಾರದ ಮುಖ್ಯ ಸಚೇತಕರುಗಳು, ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**3. 2ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 2ನೇ ಪ್ರಕರಣದಲ್ಲಿ (ಸಿಸಿ) ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಸಿಸಿಸಿ) 'ವಿರೋಧ ಪಕ್ಷದ ಮುಖ್ಯ ಸಚೇತಕರು' ಎಂದರೆ ವಿರೋಧಪಕ್ಷದ ನಾಯಕರಿಂದ ಸಂದರ್ಭಾನುಸಾರ ವಿಧಾನಸಭೆ ಅಥವಾ ವಿಧಾನಪರಿಷತ್ತಿನ ವಿರೋಧಪಕ್ಷದ ಮುಖ್ಯ ಸಚೇತಕರು ಎಂದು ಹೆಸರಿಸಲಾದ ಒಬ್ಬ ವಿಧಾನಸಭಾ ಅಥವಾ ವಿಧಾನಪರಿಷತ್ತಿನ ಸದಸ್ಯರು."

**4. 3ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 3ನೇ ಪ್ರಕರಣ (2)ನೇ ಉಪ–ಪ್ರಕರಣದಲ್ಲಿ "ಆರು ಸಾವಿರ ರೂಪಾಯಿಗಳ" ಎಂಬ ಪದಗಳಿಗೆ "ಹನ್ನೆರಡು ಸಾವಿರ ರೂಪಾಯಿಗಳ" ಎಂಬ ಪದಗಳನ್ನು 2005ರ ಆಗಸ್ಟ್ 24ನೇ ದಿನಾಂಕದಿಂದ ಜಾರಿಗೆ ತರುವಂತೆ ಪ್ರತಿಯೋಜಿಸಲಾಗಿದೆಯೆಂದು ಭಾವಿಸತಕ್ಕದ್ದು.

**5. 4ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 4ನೇ ಪ್ರಕರಣದ (1)ನೇ ಉಪ–ಪ್ರಕರಣದಲ್ಲಿ "ಮತ್ತು ಸರ್ಕಾರದ ಮುಖ್ಯ ಸಚೇತಕರು" ಎಂಬ ಪದಗಳಿಗೆ ",ಸರ್ಕಾರದ ಮುಖ್ಯ ಸಚೇತಕರುಗಳು ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು.

**6. 8ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 8ನೇ ಪ್ರಕರಣದಲ್ಲಿ,–

(i) ಶೀರ್ಷಿಕೆಯಲ್ಲಿ "ಮತ್ತು ಸರ್ಕಾರದ ಮುಖ್ಯ ಸಚೇತಕರು" ಎಂಬ ಪದಗಳಿಗೆ ",ಸರ್ಕಾರದ ಮುಖ್ಯ ಸಚೇತಕರುಗಳು ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ii) (1)ನೇ ಉಪ–ಪ್ರಕರಣದಲ್ಲಿ "ಮತ್ತು ಸರ್ಕಾರದ ಮುಖ್ಯ ಸಚೇತಕ" ಎಂಬ ಪದಗಳಿಗೆ", ಸರ್ಕಾರದ ಮುಖ್ಯ ಸಚೇತಕರುಗಳು ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು;

(iii) (2)ನೇ ಉಪ–ಪ್ರಕರಣದಲ್ಲಿ,–

(ಎ) "ಮತ್ತು ಸರ್ಕಾರಿ ಮುಖ್ಯ ಸಚೇತಕ" ಎಂಬ ಪದಗಳಿಗೆ", ಸರ್ಕಾರದ ಮುಖ್ಯ ಸಚೇತಕರುಗಳು ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ಬಿ) (ಎ) ಖಂಡದಲ್ಲಿ ಒಂದನೇ ಮತ್ತು ಎರಡನೇ ಪರಂತುಕಗಳಲ್ಲಿ "ಮತ್ತು ಸರ್ಕಾರಿ ಮುಖ್ಯ ಸಚೇತಕ" ಎಂಬ ಪದಗಳಿಗೆ", ಸರ್ಕಾರದ ಮುಖ್ಯ ಸಚೇತಕರುಗಳು ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ಸಿ) (ಡಿ) ಖಂಡದ ಪರಂತುಕದಲ್ಲಿ "ಮತ್ತು ಸರ್ಕಾರಿ ಮುಖ್ಯ ಸಚೇತಕ" ಎಂಬ ಪದಗಳಿಗೆ ",ಸರ್ಕಾರದ ಮುಖ್ಯ ಸಚೇತಕರುಗಳು ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು.

(iv) (2ಎ) ಉಪ–ಪ್ರಕರಣದಲ್ಲಿ,–

(ಎ) "ಮತ್ತು ಸರ್ಕಾರಿ ಮುಖ್ಯ ಸಚೇತಕ" ಎಂಬ ಪದಗಳಿಗೆ", ಸರ್ಕಾರದ ಮುಖ್ಯ ಸಚೇತಕರುಗಳು ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ಬಿ) ಪರಂತುಕದಲ್ಲಿ "ಮತ್ತು ಸರ್ಕಾರಿ ಮುಖ್ಯ ಸಚೇತಕ" ಎಂಬ ಪದಗಳು ಬರುವ ಎರಡು ಕಡೆಗಳಲ್ಲಿ", ಸರ್ಕಾರದ ಮುಖ್ಯ ಸಚೇತಕರುಗಳು ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು.

(v) (2ಬಿ) ಉಪ–ಪ್ರಕರಣದಲ್ಲಿ "ಮತ್ತು ಸರ್ಕಾರಿ ಮುಖ್ಯ ಸಚೇತಕ" ಎಂಬ ಪದಗಳಿಗೆ ", ಸರ್ಕಾರದ ಮುಖ್ಯ ಸಚೇತಕರುಗಳು ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು;

(vi) (3)ನೇ ಉಪ-ಪ್ರಕರಣದ (ಎಎ) ಖಂಡದಲ್ಲಿ "ಮತ್ತು ಸರ್ಕಾರಿ ಮುಖ್ಯ ಸಚೇತಕ" ಎಂಬ ಪದಗಳಿಗೆ", ಸರ್ಕಾರದ ಮುಖ್ಯ ಸಚೇತಕರುಗಳು ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು.

**7. 9ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 9ನೇ ಪ್ರಕರಣದಲ್ಲಿ "ಮತ್ತು ಸರ್ಕಾರಿ ಮುಖ್ಯ ಸಚೇತಕ" ಎಂಬ ಪದಗಳು ಬರುವ ಎರಡು ಕಡೆಗಳಲ್ಲಿ ", ಸರ್ಕಾರದ ಮುಖ್ಯ ಸಚೇತಕರುಗಳು ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು.

**8. 10ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 10ನೇ ಪ್ರಕರಣದ (1)ನೇ ಉಪ-ಪ್ರಕರಣದಲ್ಲಿ "ಎಂಟು ಸಾವಿರ ರೂಪಾಯಿಗಳ" ಎಂಬ ಪದಗಳಿಗೆ "ಹತ್ತು ಸಾವಿರ ರೂಪಾಯಿಗಳ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**9. 10ಜೆ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 10ಜೆ ಪ್ರಕರಣದಲ್ಲಿ "ಎಂಟು ಸಾವಿರ ರೂಪಾಯಿಗಳ" ಎಂಬ ಪದಗಳಿಗೆ "ಹತ್ತು ಸಾವಿರ ರೂಪಾಯಿಗಳ" ಎಂಬ ಪದಗಳನ್ನು 2008ರ ಆಗಸ್ಟ್ ಹದಿನಾಲ್ಕನೇ ದಿನಾಂಕದಿಂದ ಜಾರಿಗೆ ಬರುವಂತೆ ಪ್ರತಿಯೋಜಿಸತಕ್ಕದ್ದು.

**10. 10ಕೆ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 10ಜೆ ಪ್ರಕರಣದ ತರುವಾಯ ಈ ಮುಂದಿನ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:–

"**10ಕೆ. ವಿರೋಧ ಪಕ್ಷದ ಮುಖ್ಯ ಸಚೇತಕರ ವೇತನ.–** ಪ್ರತಿಯೊಬ್ಬ ವಿರೋಧ ಪಕ್ಷದ ಮುಖ್ಯ ಸಚೇತಕರಿಗೆ ತಿಂಗಳಿಗೆ ಹತ್ತು ಸಾವಿರ ರೂಪಾಯಿಗಳ ವೇತನವನ್ನು ನೀಡತಕ್ಕದ್ದು."

**11. 10ಎಂ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 10ಎಲ್ ಪ್ರಕರಣದ ತರುವಾಯ ಈ ಮುಂದಿನ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:–

"**10ಎಂ. ವಿರೋಧ ಪಕ್ಷದ ಮುಖ್ಯ ಸಚೇತಕರಿಗೆ ಸಾರಿಗೆ ವ್ಯವಸ್ಥೆ.–** (1) ರಾಜ್ಯ ಸರ್ಕಾರವು ಪ್ರತಿಯೊಬ್ಬ ವಿರೋಧ ಪಕ್ಷದ ಮುಖ್ಯ ಸಚೇತಕರಿಗೆ ಒಂದು ಸೂಕ್ತ ವಾಹನವನ್ನು ಒದಗಿಸತಕ್ಕದ್ದು;

(2) ಪ್ರತಿಯೊಬ್ಬ ವಿರೋಧ ಪಕ್ಷದ ಮುಖ್ಯ ಸಚೇತಕರಿಗೆ ತಿಂಗಳಿಗೆ ಐದು ನೂರು ಲೀಟರ್‌ಗಳ ಪೆಟ್ರೋಲ್ ದರಕ್ಕೆ ಸಮನಾದ ಸಾರಿಗೆ ಭತ್ಯೆಯನ್ನು ನೀಡತಕ್ಕದ್ದು."

**12. 10ಎನ್ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 10ಎನ್ ಪ್ರಕರಣದಲ್ಲಿ,–

(i) ಶೀರ್ಷಿಕೆಯಲ್ಲಿ "ಮತ್ತು ಸರ್ಕಾರವು" ಎಂಬ ಪದಗಳಿಗೆ "ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರು" ಎಂಬ ಪದಗಳನ್ನು ಸೇರಿಸತಕ್ಕದ್ದು;

(ii) (1)ನೇ ಉಪ-ಪ್ರಕರಣದಲ್ಲಿ,–

(ಎ) "ಪ್ರತಿಯೊಬ್ಬ ಸರ್ಕಾರಿ ಮುಖ್ಯ ಸಚೇತಕ" ಎಂಬ ಪದಗಳಿಗೆ "ಪ್ರತಿಯೊಬ್ಬ ಸರ್ಕಾರದ ಮುಖ್ಯ ಸಚೇತಕರು ಮತ್ತು ಪ್ರತಿಯೊಬ್ಬ ವಿರೋಧ ಪಕ್ಷ ಮುಖ್ಯ ಸಚೇತಕರು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ಬಿ) "ಮತ್ತು 10ಎಲ್ ಪ್ರಕರಣದ" ಎಂಬ ಪದಗಳು, ಅಂಕಿಗಳು ಮತ್ತು ಅಕ್ಷರಗಳಿಗೆ "ಮತ್ತು 10ಎಲ್ ಪ್ರಕರಣ ಅಥವಾ ಸಂದರ್ಭಾನುಸಾರ 10ಎಂ ಪ್ರಕರಣದ" ಎಂಬ ಪದಗಳು, ಅಂಕಿಗಳು ಮತ್ತು ಅಕ್ಷರಗಳನ್ನು ಪ್ರತಿಯೋಜಿಸತಕ್ಕದ್ದು.

**13. 10ಪಿ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 10ಪಿ ಪ್ರಕರಣದಲ್ಲಿ "ಮತ್ತು ಸರ್ಕಾರಿ ಮುಖ್ಯ ಸಚೇತಕ" ಎಂಬ ಪದಗಳಿಗೆ", ಸರ್ಕಾರದ ಮುಖ್ಯ ಸಚೇತಕರುಗಳು ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು.

**14. 10ಕ್ಯೂ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 10ಕ್ಯೂ ಪ್ರಕರಣದಲ್ಲಿ "ಮತ್ತು ಸರ್ಕಾರಿ ಮುಖ್ಯ ಸಚೇತಕನಿಗೆ" ಎಂಬ ಪದಗಳಿಗೆ", ಸರ್ಕಾರದ ಮುಖ್ಯ ಸಚೇತಕರುಗಳು ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು.

**15. 11ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 11ನೇ ಪ್ರಕರಣದ (1)ನೇ ಉಪ-ಪ್ರಕರಣದಲ್ಲಿ "ಎಂಟು ಸಾವಿರ ರೂಪಾಯಿಗಳ" ಎಂಬ ಪದಗಳಿಗೆ "ಹತ್ತು ಸಾವಿರ ರೂಪಾಯಿಗಳ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**16. 11ಎ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 11ನೇ ಪ್ರಕರಣದಲ್ಲಿ,–

(i) (1)ನೇ ಉಪ–ಪ್ರಕರಣದಲ್ಲಿ "ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ತಿದ್ದುಪಡಿ) ಅಧಿನಿಯಮ, 2005" ಎಂಬ ಪದಗಳು, ಆವರಣ ಚಿಹ್ನೆಗಳು ಮತ್ತು ಅಂಕಿಗಳಿಗೆ "ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ತಿದ್ದುಪಡಿ) ಅಧಿನಿಯಮ, 2009" ಎಂಬ ಪದಗಳು, ಆವರಣ ಚಿಹ್ನೆಗಳು ಮತ್ತು ಅಂಕಿಗಳನ್ನು ಪ್ರತಿಯೋಜಿಸತಕ್ಕದ್ದು;

(ii) (iii)ನೇ ಖಂಡದಲ್ಲಿ,–

(ಎ) "ಐದು ಸಾವಿರ ರೂಪಾಯಿಗಳ" ಎಂಬ ಪದಗಳಿಗೆ "ಹದಿನೈದು ಸಾವಿರ ರೂಪಾಯಿಗಳ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ಬಿ) ಮೊದಲನೇ ಪರಂತುಕಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"ಪರಂತು, ಯಾವನೇ ವ್ಯಕ್ತಿಯು ಐದು ವರ್ಷಗಳಿಗಿಂತ ಹೆಚ್ಚು ಸೇವೆ ಸಲ್ಲಿಸಿದ್ದಲ್ಲಿ, ಆತನಿಗೆ ತದನಂತರ ಮುಂದುವರೆದ ಪ್ರತಿಯೊಂದು ವರ್ಷಕ್ಕೆ ಪ್ರತಿ ತಿಂಗಳು ಒಂದು ಸಾವಿರ ರೂಪಾಯಿಗಳ ದರದಲ್ಲಿ ಹೆಚ್ಚುವರಿ ನಿವೃತ್ತಿ ವೇತನವನ್ನು ನೀಡತಕ್ಕದ್ದು, ಆದಾಗ್ಯೂ ಈ ಪ್ರಕರಣದ ಅಡಿಯಲ್ಲಿ ನೀಡುವ ನಿವೃತ್ತಿ ವೇತನದ ಒಟ್ಟು ಮೊತ್ತವು ತಿಂಗಳಿಗೆ ಇಪ್ಪತ್ತೈದು ಸಾವಿರ ರೂಪಾಯಿಗಳನ್ನು ಮೀರತಕ್ಕದ್ದಲ್ಲ."

(iii) (1ಎ) ಉಪ–ಪ್ರಕರಣವನ್ನು 2005ನೇ ಆಗಸ್ಟ್ ಹದಿನಾಲ್ಕನೇ ದಿನಾಂಕದಿಂದ ಬಿಟ್ಟುಬಿಡಲಾಗಿದೆ ಎಂದು ಭಾವಿಸತಕ್ಕದ್ದು;

(iv) (2)ನೇ ಉಪ–ಪ್ರಕರಣದ (ಬಿ)ನೇ ಖಂಡದಲ್ಲಿ "ಅಥವಾ ಸರ್ಕಾರಿ ಮುಖ್ಯ ಸಚೇತಕ" ಎಂಬ ಪದಗಳಿಗೆ", ಸರ್ಕಾರದ ಮುಖ್ಯ ಸಚೇತಕರುಗಳು ಅಥವಾ ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು;

(v) (4)ನೇ ಉಪ–ಪ್ರಕರಣದಲ್ಲಿ "ಸರ್ಕಾರಿ ಮುಖ್ಯ ಸಚೇತಕ" ಎಂಬ ಪದಗಳಿಗೆ ", ಸರ್ಕಾರದ ಮುಖ್ಯ ಸಚೇತಕರುಗಳು ಅಥವಾ ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು.

(vi) (5)ನೇ ಉಪಪ್ರಕರಣದಲ್ಲಿ, (i)ನೇ ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ii) ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು ಆತನು ಭಾರತದಲ್ಲಿ ರೈಲ್ವೆ ಮೂಲಕ ಮೊದಲನೇ ದರ್ಜೆ/ಎರಡನೇ ದರ್ಜೆ ಎಸಿಯಲ್ಲಿ ಒಂದು ವರ್ಷಕ್ಕೆ ಗರಿಷ್ಠ 35000 ಕಿಮೀ.ಗಳ ದೂರ ಪ್ರಯಾಣಿಸಲು ವಾಸ್ತವಿಕ ಪ್ರಯಾಣದ ವೆಚ್ಚಗಳ ಮರುಪಾವತಿಗೆ ಅರ್ಹನಾಗಿರತಕ್ಕದ್ದು."

**17. 11ಬಿ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 11ಬಿ ಪ್ರಕರಣದಲ್ಲಿ "ಅಂಥ ಸದಸ್ಯನು ಮರಣ ಹೊಂದದೇ ಇದ್ದರೆ, ಎಲ್ಲಿಯವರೆಗೆ ಅವನು ಸದಸ್ಯನಾಗಿ ಮುಂದುವರೆಯುತ್ತಿದ್ದನೋ ಆ ಉಳಿದ ಅವಧಿಗೆ" ಎಂಬ ಪದಗಳಿಗೆ "ಆಜೀವ ಪರ್ಯಂತ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**18. 11ಸಿ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 11ಸಿ ಪ್ರಕರಣದ (2)ನೇ ಉಪ–ಪ್ರಕರಣದಲ್ಲಿ,–

(ಎ) "ಸರ್ಕಾರಿ ಮುಖ್ಯ ಸಚೇತಕ" ಎಂಬ ಪದಗಳಿಗೆ", ಸರ್ಕಾರದ ಮುಖ್ಯ ಸಚೇತಕರುಗಳು ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ಬಿ) "ಐವತ್ತು ಸಾವಿರ ರೂಪಾಯಿಗಳ" ಎಂಬ ಪದಗಳಿಗೆ "ಎಪ್ಪತ್ತೈದು ಸಾವಿರ ರೂಪಾಯಿಗಳ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**19. 12ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 12ನೇ ಪ್ರಕರಣದಲ್ಲಿ,–

(1) (ಸಿಸಿ) ಖಂಡವನ್ನು ಬಿಟ್ಟುಬಿಡತಕ್ಕದ್ದು;

(2) (ಸಿಸಿಸಿ) ಖಂಡದಲ್ಲಿ "ಸರ್ಕಾರಿ ಮುಖ್ಯ ಸಚೇತಕ" ಎಂಬ ಪದಗಳಿಗೆ ", ಸರ್ಕಾರಿ ಮುಖ್ಯ ಸಚೇತಕ ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು;

(3) (ಜಿ) ಖಂಡದಲ್ಲಿ "ಮತ್ತು ಸರ್ಕಾರಿ ಮುಖ್ಯ ಸಚೇತಕ" ಎಂಬ ಪದಗಳಿಗೆ ", ಸರ್ಕಾರದ ಮುಖ್ಯ ಸಚೇತಕರುಗಳು ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು;

(4) (ಎಚ್) ಖಂಡದಲ್ಲಿ,–

(ಎ) (i)ನೇ ಬಾಬಿನಲ್ಲಿ "ಏಳು ಸಾವಿರದ ಐದು ನೂರು ರೂಪಾಯಿ" ಎಂಬ ಪದಗಳಿಗೆ "ಹತ್ತು ಸಾವಿರ ರೂಪಾಯಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ಬಿ) (ii)ನೇ ಬಾಬಿನಲ್ಲಿ "ಮೂರು ಸಾವಿರದ ಐದು ನೂರು ರೂಪಾಯಿ" ಎಂಬ ಪದಗಳಿಗೆ "ಹದಿನೈದು ಸಾವಿರ ರೂಪಾಯಿಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ಸಿ) (iii)ನೇ ಬಾಬಿನಲ್ಲಿ "ಒಂದು ಸಾವಿರ ರೂಪಾಯಿ" ಎಂಬ ಪದಗಳಿಗೆ "ನಾಲ್ಕು ಸಾವಿರ ರೂಪಾಯಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ಡಿ) (iv)ನೇ ಬಾಬಿನಲ್ಲಿ "ಎರಡು ಸಾವಿರ ರೂಪಾಯಿ" ಎಂಬ ಪದಗಳಿಗೆ "ಐದು ಸಾವಿರ ರೂಪಾಯಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**20. 13ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 13ನೇ ಪ್ರಕರಣದಲ್ಲಿ,–

(i) ಶೀರ್ಷಿಕೆಯಲ್ಲಿ "ಮತ್ತು ಸರ್ಕಾರಿ ಮುಖ್ಯ ಸಚೇತಕ" ಎಂಬ ಪದಗಳಿಗೆ", ಸರ್ಕಾರದ ಮುಖ್ಯ ಸಚೇತಕರುಗಳು ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ii) (1), (1ಎ) ಮತ್ತು (2)ನೇ ಉಪ–ಪ್ರಕರಣಗಳಲ್ಲಿ "ಅಥವಾ ಸರ್ಕಾರಿ ಮುಖ್ಯ ಸಚೇತಕ" ಎಂಬ ಪದಗಳಿಗೆ", ಸರ್ಕಾರದ ಮುಖ್ಯ ಸಚೇತಕರುಗಳು ಅಥವಾ ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು;

**21. 13ಬಿ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 13ಬಿ ಪ್ರಕರಣದ ವಿವರಣೆಯಲ್ಲಿ "ಮತ್ತು ಸರ್ಕಾರಿ ಮುಖ್ಯ ಸಚೇತಕ" ಎಂಬ ಪದಗಳಿಗೆ ", ಸರ್ಕಾರದ ಮುಖ್ಯ ಸಚೇತಕರುಗಳು ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು.

**22. 15ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 15ನೇ ಪ್ರಕರಣದ (3)ನೇ ಉಪ–ಪ್ರಕರಣದಲ್ಲಿ "ಮತ್ತು ಸರ್ಕಾರಿ ಮುಖ್ಯ ಸಚೇತಕ" ಎಂಬ ಪದಗಳಿಗೆ ", ಸರ್ಕಾರದ ಮುಖ್ಯ ಸಚೇತಕರುಗಳು ಮತ್ತು ವಿರೋಧ ಪಕ್ಷದ ಮುಖ್ಯ ಸಚೇತಕರುಗಳು" ಎಂಬ ಅಲ್ಪವಿರಾಮ ಚಿಹ್ನೆ ಮತ್ತು ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ರಲ್ಲಿ (1957ರ ಕರ್ನಾಟಕ ಅಧಿನಿಯಮ 2) ಈ ಮುಂದಿನವುಗಳಿಗೆ ಉಪಬಂಧ ಕಲ್ಪಿಸಲು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ, ಎಂದರೆ:–

(i) ಸರ್ಕಾರಿ ಮುಖ್ಯ ಸಚೇತಕರ ಸ್ಥಾನಮಾನಗಳನ್ನು ವಿರೋಧ ಪಕ್ಷದ ಮುಖ್ಯ ಸಚೇತರಿಗೆ ಒದಗಿಸುವುದು;

(ii) (ಎ) ಶಾಸಕರ ವೇತನವನ್ನು ತಿಂಗಳಿಗೆ ರೂ. 8000/– ಗಳಿಂದ ತಿಂಗಳಿಗೆ ರೂ. 10000/–ಕ್ಕೆ ಹೆಚ್ಚಿಸುವುದು;

(ಬಿ) ದೂರವಾಣಿ ಭತ್ಯೆಯನ್ನು ತಿಂಗಳಿಗೆ ರೂ. 7500/– ರಿಂದ ತಿಂಗಳಿಗೆ ರೂ. 10000/– ಕ್ಕೆ ಹೆಚ್ಚಿಸುವುದು;

(ಸಿ) ಮತಕ್ಷೇತ್ರ ಭತ್ಯೆಯನ್ನು ತಿಂಗಳಿಗೆ ರೂ. 3500/– ಗಳಿಂದ ತಿಂಗಳಿಗೆ ರೂ. 15000/–ಕ್ಕೆ ಹೆಚ್ಚಿಸುವುದು;

(ಡಿ) ಅಂಚೆ ವೆಚ್ಚವನ್ನು ತಿಂಗಳಿಗೆ ರೂ. 1000/–ಗಳಿಂದ ತಿಂಗಳಿಗೆ ರೂ. 4000/–ಕ್ಕೆ ಹೆಚ್ಚಿಸುವುದು;

(ಇ) ರೂಮ್ ಬಾಯ್ ಗಳ ವೇತನವನ್ನು ತಿಂಗಳಿಗೆ ರೂ. 2000/–ಗಳಿಂದ ತಿಂಗಳಿಗೆ ರೂ. 5000/– ಗಳಿಗೆ ಹೆಚ್ಚಿಸುವುದು;

(iii) ನಿವೃತ್ತಿ ವೇತನವನ್ನು ತಿಂಗಳಿಗೆ ರೂ. 5000/– ದಿಂದ ತಿಂಗಳಿಗೆ ರೂ. 15000/– ಕ್ಕೆ ಹೆಚ್ಚಿಸುವುದು ಮತ್ತು ಗರಿಷ್ಠ ನಿವೃತ್ತಿ ವೇತನವನ್ನು ತಿಂಗಳಿಗೆ ರೂ. 10000/–ದಿಂದ ತಿಂಗಳಿಗೆ ರೂ. 25000/–ಕ್ಕೆ ಹೆಚ್ಚಿಸುವುದು;

(iv) ಕುಟುಂಬವೇತನವನ್ನು ಸದಸ್ಯನ ಅವಲಂಬಿತರಿಗೆ ಆಜೀವಪರ್ಯಂತ ನೀಡುವುದು;

(v) ಮಾಜಿ ಸದಸ್ಯರಿಗೆ ಭಾರತದಲ್ಲಿ ರೈಲಿನ ಮೂಲಕ ಮೊದಲನೇ ದರ್ಜೆ/ಎರಡನೇ ದರ್ಜೆ ಎಸಿಯಲ್ಲಿ ಗರಿಷ್ಠ 35000 ಕಿಮೀಗಳ ಪ್ರಯಾಣದ ವಾಸ್ತವಿಕ ವೆಚ್ಚವನ್ನು ಮರುಪಾವತಿ ಮಾಡುವುದು;

(vi) ಉಪಸಭಾಪತಿ, ಉಪಸಭಾಧ್ಯಕ್ಷ ಹಾಗೂ ಸರ್ಕಾರದ ಮುಖ್ಯ ಸಚೇತಕರ ವೇತನವನ್ನು ತಿಂಗಳಿಗೆ ರೂ. 8000/– ತಿಂಗಳಿಗೆ ರೂ. 10000/–ಕ್ಕೆ ಹೆಚ್ಚಿಸುವುದು ಮತ್ತು ಆತಿಥ್ಯ ಭತ್ಯೆಯನ್ನು ವರ್ಷಕ್ಕೆ ರೂ. 50000/–ದಿಂದ ವರ್ಷಕ್ಕೆ ರೂ. 75000/– ಕ್ಕೆ ಹೆಚ್ಚಿಸುವುದು;

ಕೆಲವು ಆನುಷಂಗಿಕ ತಿದ್ದುಪಡಿಗಳನ್ನು ಸಹಾ ಪ್ರಸ್ತಾವಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮದಿಂದಾಗಿ ರೂ. 17.34 ಕೋಟಿಗಳ ಆವರ್ತಕ ವೆಚ್ಚವು ಉಂಟಾಗುತ್ತದೆ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರದ ಕುರಿತು ಜ್ಞಾಪನ ಪತ್ರ**

**ಖಂಡ: 16** (೧ತ)ನೇ ಉಪಖಂಡವು ಮಾಜಿ ಶಾಸಕರು ರೈಲಿನ ಮೂಲಕ ಪ್ರಯಾಣಿಸುವುದಕ್ಕಾಗಿ ವಾಸ್ತವಿಕ ಪ್ರಯಾಣ ಭತ್ಯೆಯ ಮರು ಪಾವತಿ ಮುಂತಾದುವುಗಳಿಗೆ ವಿಧಾನಗಳನ್ನು ನಿಯಮದ ಮೂಲಕ ನಿಯಮಿಸಲು ವಿಶೇಷ ಮಂಡಳಿಗೆ ಅಧಿಕಾರವನ್ನು ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಎಸ್. ಸುರೇಶ್ ಕುಮಾರ್**
ನಗರಾಭಿವೃದ್ಧಿ, ಕಾನೂನು ಮತ್ತು
ಸಂಸದೀಯ ವ್ಯವಹಾರಗಳು ಸಚಿವರು ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**ಅನುಬಂಧ**

**ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ರ ಉದ್ಧೃತ ಭಾಗ**

XX XX XX

ಸಭಾಪತಿ, ಉಪ–ಸಭಾಪತಿ, ಸಭಾಧ್ಯಕ್ಷ, ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರದ ಮುಖ್ಯ ಸಚೇತಕ ಮತ್ತು ವಿಧಾನ ಸಭೆ ಹಾಗೂ ವಿಧಾನ ಪರಿಷತ್ತಿನ ಸದಸ್ಯರ ವೇತನಗಳ, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಸಂಬಂಧದಲ್ಲಿ ಉಪಬಂಧ ಕಲ್ಪಿಸಲು ಅಧಿನಿಯಮ.

ಸಭಾಪತಿ, ಉಪ–ಸಭಾಪತಿ, ಸಭಾಧ್ಯಕ್ಷ, ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕ, ಸರ್ಕಾರದ ಮುಖ್ಯ ಸಚೇತಕ ಮತ್ತು ಕರ್ನಾಟಕ ರಾಜ್ಯದ ವಿಧಾನಸಭೆ ಮತ್ತು ವಿಧಾನ ಪರಿಷತ್ತಿನ ಸದಸ್ಯರ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳು ಹಾಗೂ ಇತರ ಕೆಲವು ವಿಷಯಗಳ ಸಂಬಂಧದಲ್ಲಿ ಉಪಬಂಧ ಕಲ್ಪಿಸುವುದು ವಿಹಿತವಾಗಿರುವುದರಿಂದ ;

XX XX XX

**3. ಸಭಾಪತಿ ಮತ್ತು ಸಭಾಧ್ಯಕ್ಷರ ಸಂಬಳಗಳು ಮತ್ತು ಆತಿಥ್ಯ ಭತ್ಯೆಗಳು:–** (1) ಸಭಾಪತಿಗೆ ಒಂದು ತಿಂಗಳಿಗೆ ಆರು ಸಾವಿರ ರೂಪಾಯಿಗಳ ಸಂಬಳ ಮತ್ತು ಒಂದು ವರ್ಷಕ್ಕೆ ಎಪ್ಪತ್ತು ಸಾವಿರ ರೂಪಾಯಿಗಳ ಆತಿಥ್ಯ ಭತ್ಯೆಯನ್ನು ಸಂದಾಯ ಮಾಡತಕ್ಕದ್ದು.

(2) ಸಭಾಧ್ಯಕ್ಷರಿಗೆ ಒಂದು ತಿಂಗಳಿಗೆ ಆರು ಸಾವಿರ ರೂಪಾಯಿಗಳ ಸಂಬಳ ಮತ್ತು ಒಂದು ವರ್ಷಕ್ಕೆ ಎಪ್ಪತ್ತು ಸಾವಿರ ರೂಪಾಯಿಗಳ ಆತಿಥ್ಯ ಭತ್ಯೆಯನ್ನು ಸಂದಾಯ ಮಾಡತಕ್ಕದ್ದು.

XX XX XX

**4. ಸಭಾಪತಿ ಮತ್ತು ಸಭಾಧ್ಯಕ್ಷರ ವಾಸದ ಮನೆಗಳು:–** (1) ಸಭಾಪತಿಯವರು, ಸಭಾಧ್ಯಕ್ಷರು, ಉಪಸಭಾಪತಿಯವರು, ವಿರೋಧ ಪಕ್ಷದ ಮುಖಂಡರು ಮತ್ತು ಸರ್ಕಾರದ ಮುಖ್ಯ ಸಚೇತರು, ಪ್ರತಿಯೊಬ್ಬರು ತಮ್ಮ ಅಧಿಕಾರದ ಅವಧಿ ಪೂರ್ತಿ ಮತ್ತು ಅದರ ನಿಕಟ ತರುವಾಯದ ಅರವತ್ತು ದಿವಸಗಳ ಅವಧಿಯ ಕಾಲ ಬೆಂಗಳೂರು ನಗರ ಅಥವಾ ಬೆಂಗಳೂರು ನಗರದ ಪರಿಮಿತಿಗಳಿಂದ ಮೂವತ್ತು ಕಿಲೋಮೀಟರ್ ಒಳಗೆ ಒಂದು ಸುಸಜ್ಜಿತ ಮನೆಗೆ ಬದಲಾಗಿ ತಿಂಗಳಿಗೆ ಹತ್ತು ಸಾವಿರ ರೂಪಾಯಿಗಳ ದರದಲ್ಲಿ ಮನೆ ಬಾಡಿಗೆ ಭತ್ಯಕ್ಕೆ ಹಕ್ಕುಳ್ಳವರಾಗಿರತಕ್ಕದ್ದು. ಈ ಉಪ–ಪ್ರಕರಣದ ಮೇರೆಗೆ ಒದಗಿಸಿದ ವಾಸದ ಮನೆಯನ್ನು ನಿಯಮಿಸಲಾದಂಥ ಶ್ರೇಣಿಗಳಲ್ಲು ಸುಸಜ್ಜಿತ ಗೊಳಿಸತಕ್ಕದ್ದು ಮತ್ತು ಅದರ ಪ್ಲಿಂತ್ ವಿಸ್ತೀರ್ಣವು ನಿಯಮಿಸಲಾದಂಥ ಮಿತಿಗಳನ್ನು ಮೀರತಕ್ಕದ್ದಲ್ಲ.

XX XX XX

**8. ಪ್ರವಾಸದ ಮೇಲಿರುವಾಗ ಸಭಾಪತಿ, ಉಪ–ಸಭಾಪತಿ, ಸಭಾಧ್ಯಕ್ಷ, ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರದ ಮುಖ್ಯ ಸಚೇತರು.** – ಇವರುಗಳ ಪ್ರಯಾಣ ಭತ್ಯೆ ಮತ್ತು ಇತರ ಭತ್ಯೆಗಳು:– (1) ಸಭಾಧ್ಯಕ್ಷ, ಉಪ–ಸಭಾಧ್ಯಕ್ಷ, ಸಭಾಪತಿ ಮತ್ತು ಉಪ–ಸಭಾಪತಿ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರದ ಮುಖ್ಯ ಸಚೇತಕ – ಇವರುಗಳು ತಮ್ಮ ಅಧಿಕಾರ ಸ್ಥಾನಗಳಿಗೆ ಸಂಬಂಧಿಸಿದ ಕರ್ತವ್ಯಗಳ ಮೇಲೆ ಪ್ರವಾಸ ಮಾಡುವಾಗ, ಈ ಪ್ರಕಣದಲ್ಲಿ ನಿರ್ದಿಷ್ಟಪಡಿಸಿದ ದರಗಳು ಮತ್ತು ಷರತ್ತುಗಳ ಅನುಸಾರ ಪ್ರಯಾಣ ಮತ್ತು ದೈನಂದಿನ ಭತ್ಯೆ ಅಥವಾ ಇತರ ಭತ್ಯೆಗಳಿಗೆ ಹಕ್ಕುಳ್ಳವರಾಗಿರತಕ್ಕದ್ದು.

(2) ಭಾರತದ ಒಳಗೆ ಪ್ರವಾಸ ಮಾಡುವಾಗ, ಸಭಾಪತಿ, ಉಪ–ಸಭಾಪತಿ, ಸಭಾಧ್ಯಕ್ಷ ಮತ್ತು ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕ – ಇವರು,–

(ಎ) ರೈಲಿನ ಮೂಲಕ ಮಾಡಲಾದ ಪ್ರಯಾಣಗಳಿಗಾಗಿ ಆ ರೈಲಿನಲ್ಲಿ ಲಭ್ಯವಿರುವ ಉತ್ತಮ ದರ್ಜೆಯ ಒಂದು ಪ್ರಯಾಣ ದರದ ಎರಡರಷ್ಟಕ್ಕೆ ಹಕ್ಕುಳ್ಳವರಾಗಿರತಕ್ಕದ್ದು :

ಪರಂತು, ಸಭಾಪತಿ, ಉಪ–ಸಭಾಪತಿ, ಸಭಾಧ್ಯಕ್ಷ ಅಥವಾ ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕ – ಇವರು ತಮ್ಮ ಪ್ರಯಾಣಕ್ಕೆ ಒಂದು ಬೋಗಿಯನ್ನು ಮೀಸಲಿಸಿಕೊಂಡಿದ್ದರೆ ಅಂಥ ಬೋಗಿಯ ವೆಚ್ಚಗಳನ್ನು ರಾಜ್ಯ ಸರ್ಕಾರವು ಭರಿಸತಕ್ಕದ್ದು.

ಮತ್ತೂ ಪರಂತು, ಸಭಾಪತಿ, ಉಪ–ಸಭಾಪತಿ, ಸಭಾಧ್ಯಕ್ಷ ಅಥವಾ ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕ ಇವರ ಜೊತೆಯಲ್ಲಿ ಯಾರೇ ವಯಕ್ತಿ ಮೀಸಲಿರಿಸಿದ ಬೋಗಿಯಲ್ಲಿ ಪ್ರಯಾಣ ಮಾಡಿದರೆ ಅಂಥ ವ್ಯಕ್ತಿಯ ಸಂಬಂಧದ ವೆಚ್ಚಗಳನ್ನು ವಸೂಲು ಮಾಡತಕ್ಕದ್ದು ಮತ್ತು ಸರ್ಕಾರಕ್ಕೆ ಜಮೆ ಮಾಡತಕ್ಕದ್ದು ;

(ಬಿ) ರಸ್ತೆಯ ಮೂಲಕ ಪ್ರಯಾಣ ಮಾಡಿದಾಗ ಪ್ರತಿ ಕಿಲೋಮೀಟರಿಗೆ ಎಂಟು ರೂಪಾಯಿ ರಸ್ತೆ ಮೈಲು ದರಕ್ಕೆ ಹಕ್ಕುಳ್ಳವರಾಗಿರತಕ್ಕದ್ದು ;

(ಸಿ) ವಿಮಾನದ ಮೂಲಕ ಮಾಡುವ ಪ್ರಯಾಣಕ್ಕಾಗಿ, ಅಂಥ ಪ್ರಯಾಣಕ್ಕೆ ಸಂದಾಯ ಮಾಡಿದ ಒಂದು ದರದ ಮತ್ತು ಒಂದು ಐದನೇ ಒಂದು ಭಾಗದಷ್ಟು ಮತ್ತು ಅಂಥ ಪ್ರಯಾಣಗಳ ಸಂದರ್ಭದಲ್ಲಿ ಅಪಘಾತಗಳು ಉಂಟಾದಲ್ಲಿ ವಿಮೆಗಾಗಿ ನಿಗದಿಪಡಿಸಿದ ವಿಮಾ ಕಂತು ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದು;

(ಡಿ) ಪ್ರಯಾಣದ ದಿನಗಳಿಗಾಗಿ ಮತ್ತು ಯಾವುದೇ ಸ್ಥಳದಲ್ಲಿ ಉಳಿದು ಕೊಳ್ಳುವ ಪ್ರತಿ ದಿನಕ್ಕೆ ಎಂಟುನೂರು ರೂಪಾಯಿಗಳ ದಿನಭತ್ಯೆಗಳಿಗೆ ಹಕ್ಕುಳ್ಳವರಾಗಿರತಕ್ಕದ್ದು ;

ಪರಂತು, ರಾಜ್ಯದ ಹೊರಗೆ ಮಾಡುವ ಪ್ರವಾಸಗಳ ಸಂದರ್ಭಗಳಲ್ಲಿ ಪ್ರಯಾಣದ ದಿನಗಳಿಗೆ ಮತ್ತು ಯಾವದೇ ಸ್ಥಳದಲ್ಲಿ ಉಳಿದುಕೊಳ್ಳುವ ಪ್ರತಿ ದಿನಕ್ಕೆ ಒಂದು ಸಾವಿರ ರೂಪಾಯಿಗಳು ದಿನಭತ್ಯವಾಗಿರತಕ್ಕದ್ದು ;

ಮತ್ತೂ ಪರಂತು, ಸಭಾಪತಿ, ಉಪ–ಸಭಾಪತಿ, ಸಭಾಧ್ಯಕ್ಷ ಮತ್ತು ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕ – ಇವರನ್ನು ರಾಜ್ಯದ ಅತಿಥಿಗಳೆಂದು ಪರಿಗಣಿಸಿದ ಸಂದರ್ಭಗಳಲ್ಲಿ, ಅವರನ್ನು ರಾಜ್ಯದ ಅತಿಥಿ ಎಂದು ಪರಿಗಣಿಸಿದಂಥ ಅವಧಿಗಾಗಿ ದಿನಭತ್ಯದ ಕಾಲುಭಾಗದಷ್ಟು ಹಣವನ್ನು ಮಾತ್ರ ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದು.

XX XX XX

(2ಎ) ಸಭಾಪತಿ, ಉಪ–ಸಭಾಪತಿ, ಸಭಾಧ್ಯಕ್ಷ ಅಥವಾ ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕ – ಇವರು ಸಾರ್ವಜನಿಕ ಹಿತಾಸಕ್ತಿಗಾಗಿ ರಾಜ್ಯ ಸರ್ಕಾರವು ಒದಗಿಸಿದ ಮೋಟಾರು ಕಾರಿನಲ್ಲಿ ರಸ್ತೆಯ ಮೂಲಕ ಪ್ರಯಾಣ ಮಾಡುತ್ತಿರುವಾಗ ಮುಂದಿನ ಪ್ರಯಾಣವನ್ನು ರೈಲು ಅಥವಾ ವಿಮಾನದ ಮೂಲಕ ಕೈಗೊಳ್ಳಬೇಕಾದರೆ ಅವರು ಮೋಟಾರು ಕಾರಿನ ಬಳಕೆಯನ್ನು ನಿಲ್ಲಿಸಿದ ಸ್ಥಳದಿಂದ ಬೆಂಗಳೂರು ನಗರಕ್ಕೆ ಮೋಟಾರು ಕಾರು ವಾಪಸ್ಸು ಬರಲು ಬಳಸಿದ ಪೆಟ್ರೋಲ್ ವೆಚ್ಚವನ್ನು ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದು ;

ಪರಂತು, (2ಬಿ) ಪ್ರಕರಣದಲ್ಲಿ ಅನ್ಯಥಾ ಉಪಬಂಧಿಸಿರುವುದನ್ನುಳಿದು, ಭಾರತದಲ್ಲಿ ರಾಜ್ಯದ ಹೊರಗಡೆ ಪ್ರವಾಸದ ಮೇಲಿರುವಾಗ ಹಾಗೂ ಅವರು ತಮ್ಮೊಡನೆ ಮೋಟಾರು ಕಾರನ್ನು ತೆಗೆದುಕೊಂಡು ಹೋಗಿಲ್ಲದೇ ಇರುವಾಗ ಸಭಾಪತಿ, ಉಪ–ಸಭಾಪತಿ, ಸಭಾಧ್ಯಕ್ಷ, ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕ – ಇವರು ತಮ್ಮ ಇಚ್ಛಾನುಸಾರ ಪ್ರಯಾಣ ಭತ್ಯದ ಬದಲಾಗಿ ಅಥವಾ ತಾವು ಹಕ್ಕುಳ್ಳವರಾದ ರಸ್ತೆ ಮೇಲು ದರದ ಬದಲಾಗಿ, ತಾವು ವಾಸ್ತವವಾಗಿ ಸಾರ್ವಜನಿಕ ಹಿತಾಸಕ್ತಿಗಾಗಿ ಬಾಡಿಗೆಗೆ ತೆಗೆದುಕೊಂಡ ಮೋಟಾರು ಕಾರಿನ ವಾಸ್ತವಿಕ ಬಾಡಿಗೆ ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದು. ಸಂದರ್ಭಾನುಸಾರ, ಸಭಾಪತಿ, ಉಪ–ಸಭಾಪತಿ, ಸಭಾಧ್ಯಕ್ಷ, ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕ – ಇವರು ಸಾರ್ವಜನಿಕ ಹಿತಾಸಕ್ತಿಯಲ್ಲಿ ಹಾಗೆ ಮೋಟಾರು ಕಾರನ್ನು ಬಾಡಿಗೆಗೆ ತೆಗೆದುಕೊಳ್ಳುವುದು ಅವಶ್ಯವಾಗಿತ್ತೆಂಬ ಪ್ರಮಾಣಪತ್ರವನ್ನು ಬಿಲ್‌ನೊಂದಿಗೆ ನೀಡತಕ್ಕದ್ದು.

(2ಬಿ) ಸಭಾಪತಿ, ಉಪ–ಸಭಾಪತಿ, ಸಭಾಧ್ಯಕ್ಷ, ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕ – ಇವರು (2)ನೇ ಉಪ–ಪ್ರಕರಣದ ಮೇರೆಗೆ ಪಡೆಯುವ ಭತ್ಯೆಗಳ ಜೊತೆಗೆ ನವದೆಹಲಿಯ ಕರ್ನಾಟಕ ಭವನದಲ್ಲಿ ರಾಜ್ಯ ಸರ್ಕಾರವು ನಿರ್ವಹಿಸಿಕೊಂಡು ಬರುತ್ತಿರುವ ಮೋಟಾರು ಕಾರುಗಳನ್ನು ವೆಚ್ಚ ಸಂದಾಯ ಮಾಡದೇ ಬಳಸಲು ಹಕ್ಕುಳ್ಳವರಾಗಿರತಕ್ಕದ್ದು.

(3) (ಎ) ಸಭಾಪತಿ ಮತ್ತು ಸಭಾಧ್ಯಕ್ಷರು ಕರ್ತವ್ಯದ ಮೇಲೆ ಭಾರತದ ಹೊರಗೆ ಪ್ರವಾಸ ಮಾಡುವಾಗ, ರಾಜ್ಯ ಸರ್ಕಾರದ ಸಚಿವರಿಗೆ ಅನ್ವಯಿಸುವ ಪ್ರಯಾಣ ಮತ್ತು ಇತರ ವೆಚ್ಚಗಳ ಸಂಬಂಧದಲ್ಲಿನ ನಿಬಂಧನೆಗಳಿಗೆ ಹಕ್ಕುಳ್ಳವರಾಗಿರತಕ್ಕದ್ದು.

(ಎಎ) ಸಭಾಪತಿ, ಉಪ–ಸಭಾಪತಿ, ಸಭಾಧ್ಯಕ್ಷ, ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕ – ಇವರು ವೈದ್ಯಕೀಯ ಚಿಕಿತ್ಸೆಗಾಗಿ ಭಾರತದ ಹೊರಗೆ ಪ್ರವಾಸ ಮಾಡುವಾಗ ರಾಜ್ಯ ಸರ್ಕಾರದ ಸಚಿವರಿಗೆ ಅನ್ವಯಿಸುವ ಪ್ರಯಾಣ ಮತ್ತು ಇತರ ವೆಚ್ಚಗಳ ಸಂಬಂಧಧಲ್ಲಿನ ನಿಬಂಧನೆಗಳಿಗೆ ಹಕ್ಕುಳ್ಳವರಾಗಿರತಕ್ಕದ್ದು.

(ಬಿ) XXX

**9. ವೈದ್ಯಕೀಯ ಶುಶ್ರೂಷೆ** :– ರಾಜ್ಯ ಸರ್ಕಾರವು ರಚಿಸಿದ ನಿಯಮಗಳಿಗೆ ಒಳಪಟ್ಟು, ಸಭಾಪತಿ, ಉಪ–ಸಭಾಪತಿ, ಸಭಾಧ್ಯಕ್ಷ ಮತ್ತು ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕ ಮತ್ತು ಸಂದರ್ಭಾನುಸಾರ ಸಭಾಪತಿ, ಉಪ–ಸಭಾಪತಿ, ಸಭಾಧ್ಯಕ್ಷ ಅಥವಾ ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕ ಮತ್ತು ಸರ್ಕಾರಿ ಮುಖ್ಯ ಸಚೇತಕ – ಇವರೊಂದಿಗೆ ವಾಸಿಸುವ ಮತ್ತು ಅವರನ್ನು ಅವಲಂಬಿಸಿದ ಕುಟುಂಬದ ಸದಸ್ಯರು, ರಾಜ್ಯ ಸರ್ಕಾರವು ನಿರ್ವಹಿಸುವ ಅಸ್ಪತ್ರೆಯಲ್ಲಿ ಕೊಠಡಿ ಮತ್ತು ವೈದ್ಯಕೀಯ ಶುಶ್ರೂಷೆ ಮತ್ತು ಚಿಕಿತ್ಸೆಗಳನ್ನು ಉಚಿತವಾಗಿ ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದು. ರಾಜ್ಯ ಸರ್ಕಾರವು ರಚಿಸಿದ ನಿಯಮಗಳಿಗೆ ಒಳಪಟ್ಟು ಭಾರತದಲ್ಲಾಗಲಿ ಅಥವಾ ಹೊರಗಡೆಯಾಗಲಿ ಇತರ ಯಾವುದೇ ಸ್ಥಳದಲ್ಲಿ ಪಡೆದುಕೊಂಡ ವೈದ್ಯಕೀಯ ಶುಶ್ರೂಷೆ ಮತ್ತು ಚಿಕಿತ್ಸೆಗಾಗಿ ಅವರು ಖರ್ಚು ಮಾಡಿದ ವೆಚ್ಚಗಳಿಗೆ ಸರ್ಕಾರದಿಂದ ಹಣದ ಮರು ಭರ್ತಿ ಹೊಂದಲು ಸಹ ಅವರು ಹಕ್ಕುಳ್ಳವರಾಗಿರತಕ್ಕದ್ದು.

ವಿವರಣೆ:– ಈ ಪ್ರಕರಣ ಮತ್ತು (12)ನೇ ಪ್ರಕರಣದ ಉದ್ದೇಶ ಕುಟುಂಬದ ಸದಸ್ಯರು ಎಂದರೆ ಗಂಡ, ಹೆಂಡತಿ, ಮಗ, ಮಗಳು, ತಂದೆ–ತಾಯಿ, ಸಹೋದರ ಅಥವಾ ಸಹೋದರಿ.

XX XX XX

**10. ಉಪ–ಸಭಾಪತಿ ಮತ್ತು ಉಪ–ಸಭಾಧ್ಯಕ್ಷರ ಸಂಬಳಗಳು:–** (1) ಉಪ–ಸಭಾಪತಿ ಮತ್ತು ಉಪ–ಸಭಾಧ್ಯಕ್ಷ ಈ ಪ್ರತಿಯೊಬ್ಬರಿಗೂ ತಿಂಗಳಿಗೆ ಎಂಟು ಸಾವಿರ ರೂಪಾಯಿಗಳ ಸಂಬಳವನ್ನು ಸಂದಾಯ ಮಾಡತಕ್ಕದ್ದು.

XX XX XX

**10ಜೆ. ಸರ್ಕಾರಿ ಮುಖ್ಯ ಸಚೇತಕರಿಗೆ ಸಂಬಳ.–** ಪ್ರತಿಯೊಬ್ಬ ಸರ್ಕಾರಿ ಮುಖ್ಯ ಸಚೇತಕರಿಗೆ ತಿಂಗಳಿಗೆ ಎಂಟು ಸಾವಿರ ರೂಪಾಯಿಗಳ ಸಂಬಳವನ್ನು ಸಂದಾಯ ಮಾಡತಕ್ಕದ್ದು.

XX XX XX

**10ಎನ್. ಸರ್ಕಾರಿ ಮುಖ್ಯ ಸಚೇತಕ ಮತ್ತು ಸರ್ಕಾರವು ಸಂದಾಯ ಮಾಡಬೇಕಾದ ವೆಚ್ಚಗಳು:–** (1) ಪ್ರತಿಯೊಬ್ಬ ಸರ್ಕಾರಿ ಮುಖ್ಯ ಸಚೇತಕ ಪ್ರಕರಣದ (1)ನೇ ಉಪ–ಪ್ರಕರಣ ಮತ್ತು 10ಎಲ್ ಪ್ರಕರಣದ ಮೇರೆಗೆ, ಅವರಿಗೆ ಹಂಚಿಕೆ ಮಾಡಲಾದ ವಾಸದ ಮನೆ ಮತ್ತು ಮೋಟಾರು ಕಾರಿನ ಸಂಬಂಧದಲ್ಲಿ ಈ ಕೆಳಗೆ ತಿಳಿಸಿದ ವೆಚ್ಚಗಳನ್ನು ಸಂದಾಯಮಾಡಲು ಬದ್ಧರಾಗಿರತಕ್ಕದ್ದು, ಎಂದರೆ :–

(ಎ) ಸರ್ಕಾರವು ಸಂದಾಯ ಮಾಡಿದ ಐದು ನೂರು ಲೀಟರ್ ಪೆಟ್ರೋಲ್ ಬೆಳೆಗಿಂತ ಹೆಚ್ಚಾಗಿ ತಮ್ಮ ಮೋಟಾರು ಕಾರುಗಳಿಗೆ ಬಳಸಿದ ಪೆಟ್ರೋಲ್ ವೆಚ್ಚ ; ಮತ್ತು

(ಬಿ) ವಾಸದ ಮನೆಯಲ್ಲಿನ ವಿದ್ಯುಚ್ಛಕ್ತಿ ಮತ್ತು ನೀರಿನ ಬಳಕೆ ಸಂಬಂಧದಲ್ಲಿ ಒಟ್ಟು ಮಾಸಿಕ ದರದ ಮೊದಲ ಎರಡು ನೂರು ರೂಪಾಯಿಗಳು.

XX XX XX

**10ಪಿ. ಕೆಲವು ಇತರ ಸಂದರ್ಭಗಳಲ್ಲಿ ವಿದ್ಯುಚ್ಛಕ್ತಿ ಮತ್ತು ನೀರಿನ ಶುಲ್ಕವನ್ನು ಸರ್ಕಾರವು ಭರಿಸುವುದು:–** ವಾಸದ ಮನೆಯ ಸಂಬಂಧದಲ್ಲಿ ಸುಸಜ್ಜಿತ ವಾಸದ ಮನೆ ಸೌಲಭ್ಯ ಪಡೆದುಕೊಳ್ಳುವ ಸಭಾಪತಿ, ಸಭಾಧ್ಯಕ್ಷ, ಉಪ–ಸಭಾಪತಿ, ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕ ಮತ್ತು ಸರ್ಕಾರಿ ಮುಖ್ಯ ಸಚೇತಕ – ಇವರು ತಮ್ಮ ವಾಸದ ಮನೆಯಲ್ಲಿ ಬಳಸುವ ವಿದ್ಯುಚ್ಛಕ್ತಿ ಮತ್ತು ನೀರು ಇವೆರಡೂ ಸೇರಿ, ಎರಡು ನೂರು ರೂಪಾಯಿಗಳನ್ನು ಮೀರಿ ಆದ ಮಾಸಿಕ ವೆಚ್ಚವನ್ನು ರಾಜ್ಯ ಸರ್ಕಾರವು ಭರಿಸತಕ್ಕದ್ದು.

XX XX XX

**10ಕ್ಯೂ. ಮನೆ ಬಾಡಿಗೆ ಸಂಬಂಧದಲ್ಲಿ ಕಡಿತಗಳು ಇತ್ಯಾದಿ:–** ಸಭಾಪತಿ, ಸಭಾಧ್ಯಕ್ಷ, ಉಪ–ಸಭಾಪತಿ, ಉಪ–ಸಭಾಧ್ಯಕ್ಷ ವಿರೋಧ ಪಕ್ಷದ ನಾಯಕ ಮತ್ತು ಸರ್ಕಾರಿ ಮುಖ್ಯ ಸಚೇತಕನಿಗೆ ಸಂದಾಯಮಾಡುವ ಸಂಬಳದಿಂದ ಪ್ರತಿ ತಿಂಗಳು ಈ ಕೆಳಕಂಡ ಮೊಬಲಗನ್ನು ಕಡಿತಗೊಳಿಸತಕ್ಕದ್ದು, ಎಂದರೆ,–

(ಎ) ಅವರು ರಾಜ್ಯ ಸರ್ಕಾರವು ಒದಗಿಸಿದ ವಾಸದ ಮನೆಯಲ್ಲಿ ವಾಸಿಸುತ್ತಿದ್ದರೆ ಮನೆ ಬಾಡಿಗೆಯಾಗಿ ಅವರ ಸಂಬಳದ ಶೇಕಡಾ 10 ರಷ್ಟಕ್ಕೆ ಸಮನಾದ ಮೊಬಲಗು ;

(ಬಿ) ಅವರ ವಾಸದ ಮನೆಯನ್ನು ರಾಜ್ಯ ಸರ್ಕಾರವು ಸುಸಜ್ಜಿತಗೊಳಿಸಿದ್ದರೆ, ಆ ಸಂಬಂಧ ಬಾಡಿಗೆಯಾಗಿ ಅವರ ಸಂಬಳದ ಶೇಕಡಾ ಎರಡೂವರೆಯಷ್ಟಕ್ಕೆ ಸಮನಾದ ಮೊಬಲಗು.

XX XX XX

**11. ವಿಧಾನಸಭೆ ಮತ್ತು ವಿಧಾನಪರಿಷತ್ತಿನ ವೇತನ.–** ವಿಧಾನಸಭೆ ಮತ್ತು ವಿಧಾನಪರಿಷತ್ತಿನ ಪ್ರತಿಯೊಬ್ಬ ಸದಸ್ಯನಿಗೆ ತಿಂಗಳಿಗೆ ಎಂಟು ಸಾವಿರ ರೂಪಾಯಿಗಳ ಸಂಬಳವನ್ನು ಸಂದಾಯಮಾಡತಕ್ಕದ್ದು. ಆ ಸಂಬಳವು ಅವರನ್ನು ಕ್ರಮಬದ್ಧವಾಗಿ ಚುನಾಯಿಸಲಾಗಿದೆ ಎಂದು ಘೋಷಿಸಿದ ದಿನಾಂಕದಿಂದ ಅವರಿಗೆ ಪ್ರಾಪ್ತವಾಗತಕ್ಕದ್ದು ಅಥವಾ ವಿಧಾನಸಭೆ ಅಥವಾ ವಿಧಾನಪರಿಷತ್ತಿನಲ್ಲಿ ಖಾಲಿ ಸ್ಥಾನವನ್ನು ತುಂಬಲು ರಾಜ್ಯಪಾಲರಿಂದ ನಾಮನಿರ್ದೇಶನ ಮಾಡಿದ ಸದಸ್ಯರ ಸಂದರ್ಭದಲ್ಲಿ ಅವರನ್ನು ಹಾಗೆ ನಾಮನಿರ್ದೇಶನ ಮಾಡಿದ ದಿನಾಂಕದಿಂದ ಅಥವಾ ಖಾಲಿ ಸ್ಥಾನವು ಉಂಟಾಗುವ ಮೊದಲೇ ಅಂಥ ಘೋಷಣೆ ಅಥವಾ ನಾಮನಿರ್ದೇಶನ ಮಾಡಿದ್ದರೆ ಆ ಖಾಲಿ ಸ್ಥಾನವು ಉಂಟಾದ ದಿನಾಂಕದಿಂದ ಅಂಥ ಸಂಬಳವು ಪ್ರಾಪ್ತವಾಗತಕ್ಕದ್ದು.

XX XX XX

**11ಎ. ಸದಸ್ಯರಿಗೆ ನಿವೃತ್ತಿ ವೇತನ ಇತ್ಯಾದಿ.–** ಕರ್ನಾಟಕ ವಿಧಾನ ಮಂಡಲದವರ ವೇತನಗಳು, ನಿವೃತ್ತವೇತನಗಳು ಮತ್ತು ಭತ್ಯೆಗಳ (ತಿದ್ದುಪಡಿ) ವಿಧೇಯಕ, 2005ರ ಪ್ರಾರಂಭದ ದಿನಾಂಕದಿಂದ ಜಾರಿಗೆ ಬರುವಂತೆ,–

(i) ವಿಧಾನ ಪರಿಷತ್ತಿನ ಒಬ್ಬ ಸದಸ್ಯರಾಗಿ ; ಅಥವಾ

(ii) ವಿಧಾನಸಭೆಯ ಒಬ್ಬ ಸದಸ್ಯರಾಗಿ ; ಅಥವಾ

(iii) ಭಾಗಶಃ ವಿಧಾನ ಸಭೆಯ ಸದಸ್ಯರಾಗಿ ಮತ್ತು ಭಾಗಶಃ ವಿಧಾನ ಪರಿಷತ್ತಿನ ಸದಸ್ಯರಾಗಿ

– ಐದು ವರ್ಷಗಳ ವರೆಗೆ ಸೇವೆ ಸಲ್ಲಿಸಿದ ಪ್ರತಿಯೊಬ್ಬ ವ್ಯಕ್ತಿಗೆ, ಅವರ ಉಳಿದ ಜೀವಿತಾವಧಿಯಲ್ಲಿ ಪ್ರತಿ ತಿಂಗಳಿಗೆ ಐದು ಸಾವಿರ ರೂಪಾಯಿಗಳ ದರದಲ್ಲಿ ನಿವೃತ್ತಿ ವೇತನವನ್ನು ಸಂದಾಯ ಮಾಡತಕ್ಕದ್ದು ;

ಪರಂತು, ಮೇಲ್ಕಂಡಂತೆ ಐದು ವರ್ಷಗಳಿಗಿಂತಲೂ ಹೆಚ್ಚುಕಾಲ ಯಾವೊಬ್ಬ ವ್ಯಕ್ತಿಯು ಸೇವೆ ಸಲ್ಲಿಸಿದ್ದರೆ, ಆ ತರುವಾಯ ಪೂರ್ಣಗೊಂಡ ಪ್ರತಿಯೊಂದು ವರ್ಷಕ್ಕೆ ಪ್ರತಿ ತಿಂಗಳಿಗೆ ಐದು ನೂರು ರೂಪಾಯಿಗಳ ದರದಲ್ಲಿ ಹೆಚ್ಚುವರಿ ನಿವೃತ್ತಿ ವೇತನವನ್ನು ಸಂದಾಯ ಮಾಡತಕ್ಕದ್ದು. ಆದರೆ ಈ ಪ್ರಕರಣದ ಅಡಿಯಲ್ಲಿ ಸಂದಾಯ ಮಾಡತಕ್ಕ ನಿವೃತ್ತಿ ಜೀವನವು ಪ್ರತಿ ತಿಂಗಳಿಗೆ ಹತ್ತು ಸಾವಿರ ರೂಪಾಯಿಗಳನ್ನು ಮೀರತಕ್ಕದ್ದಲ್ಲ :

ಮತ್ತು ಪರಂತು, ಆರು ತಿಂಗಳನ್ನು ಮೀರಿದ ವರ್ಷದ ಒಂದು ಭಾಗದ ಅವಧಿಯವರೆಗೆ ಅಂಥ ಸದಸ್ಯರಾಗಿ ಸಲ್ಲಿಸಿದ ಸೇವೆಯನ್ನು ಹೆಚ್ಚುವರಿ ನಿವೃತ್ತಿ ವೇತನವನ್ನು ಲೆಕ್ಕಹಾಕುವ ಉದ್ದೇಶಕ್ಕಾಗಿ ಒಂದು ಪೂರ್ಣವರ್ಷ ವೆಂಬುದಾಗಿ ಪರಿಗಣಿಸತಕ್ಕದ್ದು.

ಅಲ್ಲದೇ ಪರಂತು, ಒಬ್ಬ ಸದಸ್ಯರು, ವಿಧಾನಸಭೆಯ ವಿಸರ್ಜನೆಯ ಕಾರಣದಿಂದಾಗಿ ಐದು ವರ್ಷಗಳ ಸೇವೆ ಸಲ್ಲಿಸುವುದಕ್ಕೆ ತಡೆಯುಂಟಾದಲ್ಲಿ, ಅವರು, ಐದು ವರ್ಷಗಳ ಪೂರ್ಣಾವಧಿಗೆ ಸೇವೆ ಸಲ್ಲಿಸಿರುವ ನೆಂಬುದಾಗಿ ಭಾವಿಸತಕ್ಕದ್ದು ;

ಅಲ್ಲದೆ  ಪರಂತು, ಒಬ್ಬ ಸದಸ್ಯರು ಮೊದಲನೇ ಬಾರಿಗೆ ವಇಧಾನ ಪರಿಷತ್ತಿನ ಸದಸ್ಯರಾಗಿದ್ದು ಮತ್ತು ಅವರು ಆರು ವರ್ಷಗಳ ಪೂರ್ಣಾವಧಿ ಸೇವೆ ಸಲ್ಲಿಸುವುದಕ್ಕೆ ಮೊದಲು ಚೀಟಿ ಎತ್ತುವ ಮೂಲಕ ಅವರ ಅವಧಿಯು ಕೊನೆಗೊಂಡಿರುವಲ್ಲಿ, ಅವರು ಅಧಿಕಾರ ಸ್ಥಾನದಲ್ಲಿದ್ದ ಅವಧಿಯನ್ನು ಗಣನೆಗೆ ತೆಗೆದುಕೊಳ್ಳದೆ ಐದು ವರ್ಷಗಳ ಅವಧಿಯ ಸೇವೆ ಸಲ್ಲಿಸಿರುವರೆಂಬುದಾಗಿ ಭಾವಿಸತಕ್ಕದ್ದು ;

ಅಲ್ಲದೇ ಪರಂತು, ಒಬ್ಬ ವ್ಯಕ್ತಿಯು, ಒಂದು ಚುನಾವಣಾ ಅರ್ಜಿಯ ವಿಚಾರಣೆಯಲ್ಲಿ ನ್ಯಾಯಾಲಯದಿಂದ, ಚುನಾಯಿತರಾಗಿರುವನೆಂದು ಘೋಷಿಷ್ಪಟ್ಟಿದ್ದರೆ ಮತ್ತು ಚುನಾವಣಾ ತಕರಾರು ಅರ್ಜಿಯು ಇತ್ಯರ್ಥದಲ್ಲಿರುವ ಸಮಯದಲ್ಲಿ ಅವರು ಸದಸ್ಯರೆಂಬುದಾಗಿ ಸೇವೆ ಸಲ್ಲಿಸಲು ಅಸಮರ್ಥರಾಗಿದ್ದಾಗ, ಅವರು ವಾಸ್ತವವಾಗಿ ಸಲ್ಲಿಸದ ಸೇವೆಯ ಅವಧಿಯನ್ನು ಗಣನೆಗೆ ತೆಗೆದುಕೊಳ್ಳದೇ ಐದು ವರ್ಷಗಳ ಅವಧಿಯ ಸೇವೆ ಸಲ್ಲಿಸಿರುವನೆಂಬುದಾಗಿ ಭಾವಿಸತಕ್ಕದ್ದು ;

ಅಲ್ಲದೇ ಪರಂತು, ಒಬ್ಬ ವ್ಯಕ್ತಿಯು, ಉಪ–ಚುನಾವಣೆಯಲ್ಲಿ ಚುನಾಯಿತರಾಗಿರುವನೆಂದು ಘೋಷಿಸಲ್ಪಟ್ಟಿದ್ದರೆ ಅಥವಾ ಅವಧಿಯ ಮಧ್ಯದಲ್ಲಿ ಸದಸ್ಯರೆಂಬುದಾಗಿ ನಾಮನಿರ್ದೇಶಿಸಲ್ಪಟ್ಟಿದ್ದರೆ ಮತ್ತು ಪೂರ್ಣಾವಧಿಯವರೆಗೆ ಸೇವೆ ಸಲ್ಲಿಸಲು ಅಸಮರ್ಥರಾದಲ್ಲಿ, ಅವರು ವಾಸ್ತವವಾಗಿ ಸಲ್ಲಿಸಿದ ಸೇವೆಯ ಅವಧಿಯನ್ನು ಗಣನೆಗೆ ತೆಗೆದುಕೊಳ್ಳದೆ ಐದು ವರ್ಷಗಳ ಅವಧಿಯ ಸೇವೆಯನ್ನು ಸಲ್ಲಿಸಿರುವನೆಂಬುದಾಗಿ ಭಾವಿಸತಕ್ಕದ್ದು.

ಅಲ್ಲದೇ ಪರಂತು, ಒಬ್ಬ ಸದಸ್ಯರು, ಮೂರ ವರ್ಷಗಳಿಗಿಂತ ಹೆಚ್ಚಿನ ಅವಧಿಯವರೆಗೆ ಸೇವೆ ಸಲ್ಲಿಸಿದ ನಂತರ ರಾಜೀನಾಮೆ ನೀಡಿದಲ್ಲಿ, ಅವರು, ಐದು ವರ್ಷಗಳ ಅವಧಿಯ ಸೇವೆ ಸಲ್ಲಿಸಿರುವರೆಂಬುದಾಗಿ ಭಾವಿಸತಕ್ಕದ್ದು.

**ವಿವರಣೆ** : ಈ ಉಪ–ಪ್ರಕರಣದ ಉದ್ದೇಶಕ್ಕಾಗಿ, ವಿಧಾನಸಭೆಯ ಅಥವಾ ವಿಧಾನ ಪರಿಷತ್ತಿನ ಒಬ್ಬ ಸದಸ್ಯನು ಎಂಬುದು, ಒಬ್ಬ ವ್ಯಕ್ತಿಯು, 1956ರ ನವೆಂಬರ್ 1ನೇ ದಿನಾಂಕಕ್ಕೆ ಮೊದಲು, ಆತ ಪ್ರತಿನಿಧಿಸಿದ ಪ್ರದೇಶವು ಸದರಿ ದಿನಾಂಕದಂದು ಅಥವಾ ದಿನಾಂಕದಿಂದ ಜಾರಿಗೆ ಬಂದಿರುವ ಹೊಸ ಕರ್ನಾಟಕ ರಾಜ್ಯ ಭಾಗವಾಗಿ ಸೇರಿಕೊಂಡಿದ್ದು, ಅದು ಮೊದಲು ಯಾವ ರಾಜ್ಯಕ್ಕೆ ಸೇರಿತ್ತೋ ಆ ರಾಜ್ಯದ ವಿಧಾನಸಭಾ ಸದಸ್ಯ ಅಥವಾ ವಿಧಾನ ಪರಿಷತ್ತಿನ ಸದಸ್ಯರಾಗಿ ಆ ಪ್ರದೇಶವನ್ನು ಪ್ರತಿನಿಧಿಸಿದ್ದರೆ ಆತನನ್ನೂ ಒಳಗೊಳ್ಳತಕ್ಕದ್ದು.

ಪರಂತು, ವಿಧಾನ ಸಭೆಯ ಅಥವಾ ವಿಧಾನ ಪರಿಷತ್ತಿನ ನಾಮನಿರ್ದೇಶಿತ ಸದಸ್ಯರ ಸಂಬಂಧದಲ್ಲಿ, ತಾವು ವಿಧನಸಭೆಯ ಅಥವಾ ವಿಧನ ಪರಿಷತ್ತಿನ ಸದಸ್ಯರಾಗಿದ್ದ ಅವಧಿಯಲ್ಲಿ, ಕರ್ನಾಟಕ ರಾಜ್ಯದ ಭಾಗವಾಗಿರುವ ಯಾವುದೇ ಪ್ರದೇಶದಲ್ಲಿ ಅವನು ಖಾಯಂ ಆಗಿ ವಾಸವಾಗಿದ್ದಲ್ಲಿ ಅವನುಮ ನಿವೃತ್ತಿ ವೇತನ ಪಡೆಯಲು ಅರ್ಹರಾಗಿರತಕ್ಕದ್ದು."

(1ಎ) (1)ನೇ ಉಪ–ಪ್ರಕರಣದ (ಎ) ಮತ್ತು (ಬಿ) ಖಂಡಗಳ ಮೇರೆಗೆ ಒಬ್ಬ ಸದಸ್ಯನಿಗೆ ಸಂದಾಯ ಮಾಡಬಹುದಾದ ನಿವೃತ್ತಿ ವೇತನದ ಒಟ್ಟು ಮೊತ್ತವು ಒಂದು ತಿಂಗಳಿಗೆ ಐದು ಸಾವಿರ ರೂಪಾಯಿಗಳನ್ನು ಮೀರತಕ್ಕದ್ದಲ್ಲ.

(2) (1)ನೇ ಉಪ–ಪ್ರಕರಣದ ಮೇರೆಗೆ ನಿವೃತ್ತಿ ವೇತನಕ್ಕೆ ಹಕ್ಕುದಾರನಾಗಿರುವ ಯಾರೇ ವ್ಯಕ್ತಿಯು,–

(i) ಭಾರತದ ರಾಷ್ಟ್ರಪತಿ ಅಥವಾ ಉಪ–ರಾಷ್ಟ್ರಪತಿಯ ಪದವಿಗೆ ಚುನಾಯಿತನಾದರೆ ಅಥವಾ ಯಾವುದೇ ರಾಜ್ಯದ ರಾಜ್ಯಪಾಲರ ಅಥವಾ ಯಾವುದೇ ಕೇಂದ್ರಾಡಳಿತ ಪ್ರದೇಶದ ಆಡಳಿತಗಾರರ ಹುದ್ದೆಗೆ ನೇಮಕಗೊಂಡರೆ ; ಅಥವಾ

(ii) ಸಚಿವ, ರಾಜ್ಯ ಸಚಿವ, ಉಪ ಸಚಿವ, ಸಭಾಪತಿ, ಸಭಾಧ್ಯಕ್ಷ, ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕ ಅಥವಾ ಸರ್ಕಾರಿ ಮುಖ್ಯ ಸಚೇತಕ – ಈ ಹುದ್ದೆಗೆ ನೇಮಕಗೊಂಡರೆ ಅಥವಾ ಚುನಾಯಿತನಾರೆ ; ಅಥವಾ

(4) (1)ನೇ ಉಪ–ಪ್ರಕರಣದ ಉದ್ದೇಶಕ್ಕಾಗಿ ವರ್ಷಗಳ ಸಂಖ್ಯೆಯನ್ನು ಲೆಕ್ಕ ಹಾಕುವಾಗ, ವ್ಯಕ್ತಿಯು ಈ ಮುಂದಿನ ಸ್ಥಾನಗಳಲ್ಲಿ, ಎಂದರೆ (1) ಸಚಿವ, ರಾಜ್ಯ ಸಚಿವ, ಉಪ ಸಚಿವ, ಸಂಸದೀಯ ಕಾರ್ಯದರ್ಶಿ, ಸಭಾಪತಿ, ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕ, ವಿಧಾನ ಸಭೆಯ ಅಥವಾ ವಿಧಾನ ಪರಿಷತ್ತಿನ ಸದಸ್ಯತ್ವದ ಆಧಾರದ ಮೇಲೆ ಸರ್ಕಾರಿ ಮುಖ್ಯ ಸಚೇತಕ ಇವುಗಳಲ್ಲಿ ಯಾವುದಾದರೂ ಒಂದು ಅಥವಾ ಹೆಚ್ಚು ಸ್ಥಾನಗಳಲ್ಲಿ ಅವನು ಸಲ್ಲಿಸಿದ ಸೇವೆಯ ಅವಧಿಯನ್ನು ಸಹ ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು.

XX XX XX

**11ಬಿ. ಕುಟುಂಬ ನಿವೃತ್ತಿ ವೇತನ** :– (1) ಒಬ್ಬ ಸದಸ್ಯ ತನ್ನ ಅಧಿಕಾರದ ಅವಧಿ ಮುಗಿಯುವ ಮೊದಲೇ ಮರಣ ಹೊಂದಿರೆ ಅವನ ಕುಟುಂಬಕ್ಕೆ ಅಂಥ ಸದಸ್ಯನು ಮರಣಹೊಂದನೇ ಇದ್ದರೆ, ಎಲ್ಲಿಯವರೆಗೆ ಅವನು ಸದಸ್ಯನಾಗಿ ಮುಂದುವರಿಯುತ್ತಿದ್ದನೋ ಆ ಉಳಿದ ಅವಧಿಗೆ ತಿಂಗಳಿಗೆ ಐದು ನೂರು ರೂಪಾಯಿ ದರದಲ್ಲಿ ಕುಟುಂಬ ನಿವೃತ್ತಿ ವೇತನವು ಸಂದಾಯವಾಗತಕ್ಕದ್ದು.

**11ಸಿ. ಆತಿಥ್ಯ ಭತ್ಯ** :– (1) ವಿರೋಧಪಕ್ಷದ ನಾಯಕನಿಗೆ ವರ್ಷಕ್ಕೆ "ಎಪ್ಪತ್ತೈದು ಸಾವಿರ ರೂಪಾಯಿಗಳ ಆತಿಥ್ಯ ಭತ್ಯ ಸಂದಾಯವಾಗತಕ್ಕದ್ದು.

(2) ಉಪ–ಸಭಾಪತಿ, ಉಪ–ಸಭಾಧ್ಯಕ್ಷ ಮತ್ತು ಸರ್ಕಾರಿ ಮುಖ್ಯ ಸಚೇತಕ – ಇವರಿಗೆ ವರ್ಷಕ್ಕೆ ಐವತ್ತು ಸಾವಿರ ರೂಪಾಯಿಗಳ ಆತಿಥ್ಯ ಭತ್ಯ ಸಂದಾಯವಾಗತಕ್ಕದ್ದು.

XX XX XX

**12. ವಿಧಾನಸಭಾ ಸದಸ್ಯರು ಮತ್ತು ವಿಧಾನ ಪರಿಷತ್ತಿನ ಸದಸ್ಯರು.–**

XX XX XX

(ಸಿಸಿ) ವಿಧಾನ ಸಭೆಯ ಮತ್ತು ವಿಧಾನ ಪರಿಷತ್ತಿನ ಪ್ರತಿಯೊಬ್ಬ ಸದಸ್ಯನು, ಚುನಾವಣಾ ಕ್ಷೇತ್ರ ಪ್ರಯಾಣ ಭತ್ಯೆಯಾಗಿ ವಾರ್ಷಿಕ ಹದಿನೈದು ಸಾವಿರ ರೂಪಾಯಿಗಳ ಮೊಬಲಗನ್ನು ಎರಡು ಸಮಾನ ಕಂತುಗಳಲ್ಲಿ, ಏಪ್ರಿಲ್ ಮತ್ತು ಅಕ್ಟೋಬರ್ ತಿಂಗಳುಗಳಲ್ಲಿ, ನಿಯಮಿಸಬಹುದಾದ ರೀತಿಯಲ್ಲಿ ಸ್ವೀಕರಿಸಲು ಹಕ್ಕುಳ್ಳವನಾಗಿರತಕ್ಕದ್ದು.

(ಸಿಸಿಸಿ) ಸಚಿವ, ರಾಜ್ಯ ಸಚಿವ, ಉಪ–ಸಚಿವ, ಸಭಾಪತಿ, ಸಭಾಧ್ಯಕ್ಷ, ಉಪ–ಸಭಾಪತಿ, ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕ ಮತ್ತು ಸರ್ಕಾರಿ ಮುಖ್ಯ ಸಚೇತಕ – ಇವರೂ ಸೇರಿಂದತೆ ಪ್ರತಿಯೊಬ್ಬ ಸದಸ್ಯನು, ಪ್ರತಿ ಹಣಕಾಸು ವರ್ಷದಲ್ಲಿ, ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು ಒಂದು ಅಥವಾ ಹೆಚ್ಚಿನ ಪ್ರಯಾಣಗಳನ್ನು ಒಬ್ಬನೇ ಆಗಲಿ ಅಥವಾ ಜೊತೆಗಾರನೊಂದಿಗೆ ಆಗಲಿ ಭಾರತದಲ್ಲಿ ವಿಮಾನದಲ್ಲಾಗಲಿ ಅಥವಾ ರೈಲ್ವೆಯ ಮೂಲಕ ಯಾವುದೇ ದರ್ಜೆಯಲ್ಲಿ ಪ್ರಯಾಣ ಮಾಡಲು ಪ್ರವಾಸದ ಉದ್ದೇಶಕ್ಕಾಗಿ ಏಪ್ರಿಲ್ ಮತ್ತು ಅಕ್ಟೋಬರ್ ತಿಂಗಳಿನಲ್ಲಿ ಐವತ್ತು ಸಾವಿರ ರೂಪಾಯಿಗಳನ್ನು ಎರಡು ಸಮಾನ ಕಂತುಗಳಲ್ಲಿ ಪಡೆದುಕೊಳ್ಳಲು ಹಕ್ಕುಳ್ಳವನಾಗಿರತಕ್ಕದ್ದು. ಅಂಥ ಪ್ರಯಾಣಗಳನ್ನು ಮಾಡಿದಾಗ ಸದಸ್ಯರು ಪ್ರಯಾಣ ಅಥವಾ ದಿನಭತ್ಯೆ ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದಲ್ಲ.

XX XX XX

(ಜಿ) ಸಚಿವ, ರಾಜ್ಯ ಸಚಿವ, ಉಪ–ಸಚಿವ, ಸಭಾಪತಿ, ಸಭಾಧ್ಯಕ್ಷ, ಉಪ–ಸಭಾಪತಿ, ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕ ಮತ್ತು ಸರ್ಕಾರಿ ಮುಖ್ಯ ಸಚೇತಕ – ಇವರೂ ಸೇರಿದಂತೆ ಸದಸ್ಯರು ತಾವು ಆಯ್ಕೆಮಾಡಿದ ಸ್ಥಳದಲ್ಲಿ ಸರ್ಕಾರದ ವೆಚ್ಚದಲ್ಲಿ ದೂರವಾಣಿ ಹಾಕಿಸಿಕೊಳ್ಳಲು ಹಕ್ಕುಳ್ಳವರಾಗಿರತಕ್ಕದ್ದು.

(ಹೆಚ್) ಪ್ರತಿಯೊಬ್ಬ ಸದಸ್ಯನಿಗೂ ಈ ಮುಂದಿನ ಭತ್ಯೆಗಳು ಸಂದಾಯವಾಗತಕ್ಕದ್ದು–

(i) ದೂರವಾಣಿ ಕರೆಗಳಿಗಾಗಿ ಅವನು ಭರಿಸಿದ ವೆಚ್ಚಗಳಿಗಾಗಿ ತಿಂಗಳಿಗೆ ಏಳು ಸಾವಿರದ ಐದುನೂರು ರೂಪಾಯಿ ;

(ii) ಸಂಚಿತ ಭತ್ಯೆಗಳಾಗಿ ಮೂರು ಸಾವಿರದ ಐದುರೂರು ರೂಪಾಯಿ

(iii) ಅಂಚೆ ವೆಚ್ಚಗಳ ಸಂಬಂಧ ಒಂದು ಸಾವಿರ ರೂಪಾಯಿ ;

